# ಬೆಳ್ಳಿ ಮೋಡದ ಮುಂಜೀ

(ಸ್ವತಂತ್ರ ಸಾಮಾಜಿಕ ಕಾದಂಬರಿ)

"ಪ್ರತಿಯೊಬ್ಬನೂ ತಾನು ಪ್ರೀತಿಸುವ ವಸ್ತುವನ್ನೇ ಕೊಲ್ಲುತ್ತಾನೆ."

ಶ್ರೀ. ಪುಷ್ಪರಾಜ, ಬಿ.ಎ. (ಆನರ್ಸ್)

ಆಗಸ್ಟ್ ೧೯೫೮ : : ಬೆಲೆ ರೂ. ೧-೨೫

# ಪ್ರಕಾಶಕರ ಮಾತು

ಇದು ನಮ್ಮ ಗ್ರಂಥಮಾಲೆಯ ೧೬ನೆಯ ವರುಷದ ಮೊದಲನೆಯ ಕಿರಣ. ಈ ಹೊಸ ವರುಷದ ಹೊಸ ಕಿರಣ, ಉತ್ತರ ಕನ್ನಡದ ತರುಣ ಉತ್ಸಾಹೀ ಹೊಸ ಲೇಖಕರೊಬ್ಬರ ಹೊಸ ಕೃತಿಯಾಗಿದೆ. ಮುಖಪುಟದಲ್ಲಿಯ 'ಪ್ರತಿಯೊಬ್ಬನೂ ತಾನು ಪ್ರೇಮಿಸುವ ವಸ್ತುವನ್ನೇ ಕೊಲ್ಲುತ್ತಾನೆ' ಎಂಬ ಆಸ್ಕರ್ ವೈಲ್ಡನ ನುಡಿಯನ್ನು, ಭಗ್ನಪ್ರೇಮಿಯಾದ ಪ್ರವಾಹಪತಿತ ನವತರುಣನ ಉದ್ವಿಗ್ನ ಮನೋರಾಜ್ಯದ ಸ್ಮರಣ ಚಿತ್ರಗಳಿಂದ ಇಲ್ಲಿ ಬಿಡಿಸಿ ತೋರಿಸಿದ್ದಾರೆ. ಈ ಕೃತಿಯನ್ನಿತ್ತ ಲೇಖಕರಿಗೆ ನಾವು ಋಣಿ.

ಹದಿನೈದು ವರುಷ ತುಂಬಿರುವ ನಮ್ಮ ಗ್ರಂಥಮಾಲೆಗೆ ಚಂದಾದಾರರೆಷ್ಟು ಎಂದು ಕೇಳಿದರೆ—ಶತಕದಿಂದ ಎಣಿಸಿದಾಗ ಎರಡನೆಯ ಬೆರಳು ಪ್ರಾರಾ ವಾಣಿಯಲು ಒಲ್ಲೆನೆನ್ನುತ್ತಿರುವ ನಮಗೆ—ಹೇಳಲು ನಾಚಿಕೆ ಎನಿಸುತ್ತಿದೆ. ಆದರೂ ಪ್ರಕಾಶನ ವ್ಯವಸಾಯಕ್ಕೆ ಮೂಲ ಪೋಷಕರೆನಿಸುವ ಚಂದಾದಾರರು ಇಷ್ಟಾದರೂ ಇದ್ದಾರಲ್ಲ, ಅವರಿಗೆ ನಾವು ಕೃತಜ್ಞರಾಗಿದ್ದೇವೆ. ಇಷ್ಟು ಸುಲಭದಲ್ಲಿ ಪುಸ್ತಕಗಳನ್ನು ಒದಗಿಸಿ, ಅದಕ್ಕಾಗಿ ನಾವು ತೆರುತ್ತಿರುವ ಅಂಚೆ ವೆಚ್ಚ ಮತ್ತು ಇತರ ಶ್ರಮಗಳನ್ನು ನೋಡಿದಾಗ, ಇದು ನಷ್ಟದಲ್ಲಿಯೇ ಇದೆ. ಪುಸ್ತಕ ಪ್ರಕಾಶನವೇ ನಮ್ಮ ವ್ಯವಸಾಯವಾಗಿ, ಮುದ್ರಿಸಿದ ಪುಸ್ತಕಗಳನ್ನು ಕಟ್ಟಿಟ್ಟು ಸಾವಕಾಶವಾಗಿ ಮಾರುತ್ತ ಕುಳಿತಿರುವುದೇ ನಮ್ಮ ಕೆಲಸವಾಗಿರುವುದರಿಂದ, ವಾಚನಾಭಿರುಚಿಯುಳ್ಳ ಕನ್ನಡಿಗರಿಗೆ ಸುಲಭದಲ್ಲಿ ಪುಸ್ತಕಗಳನ್ನು ಕೊಡುವ ಈ ಚಂದಾ ಸೌಲಭ್ಯವನ್ನು—ಕಷ್ಟ-ನಷ್ಟಗಳ ಕಡೆ ನೋಡದೆ—ನಡೆಸಿಕೊಂಡು ಹೋಗುವ ನಿರ್ಧಾರದಿಂದ ಸಾಗಿದ್ದೇವೆ. ಈ ಸೌಲಭ್ಯವನ್ನು ಹೆಚ್ಚು ಹೆಚ್ಚು ಜನ ಪಡೆದುಕೊಂಡರೆ ಸಂತೋಷವೇ. ಅದರ ಪ್ರತಿಫಲ, ಇನ್ನೂ ಒಳ್ಳೊಳ್ಳೆಯ ಕೃತಿಗಳ ರೂಪದಿಂದ ಚಂದಾದಾರರಿಗೇ ದೊರೆಯುತ್ತ ಹೋಗುವುದು.

೧೫—೬—೧೯೫೮

—ಪ್ರಕಾಶಕ

ಮುದ್ರಕರು ಮತ್ತು ಪ್ರಕಾಶಕರು
ಬಾಲಚಂದ್ರ ಘಾಟೀಕರ

ಪ್ರತಿಭಾ ಮುದ್ರಣ
ಧಾರವಾಡ

ಸಮಾಜ ಪುಸ್ತಕಾಲಯ
ಧಾರವಾಡ



# ಮುಡಿಪು

**ಗುರಿಯಿಲ್ಲದೆ ದಾರಿ ತಪ್ಪುತ್ತಿರುವ ಮಗನನ್ನು**

ತನ್ನ ಜೀವನದ ಕಹಿ ತುತ್ತುಗಳನ್ನು ನುಂಗಿ

ಇಲ್ಲಿಯತನಕ ಎಳೆದುಕೊಂಡು ಬಂದ

ಮಾತೃಶ್ರೀ

**ಅನಂತಮೂರ್ತಿಯಮ್ಮರಿಗೆ**

—ಲೇಖಕ



# ಹಾರ್ದಿಕೆಯ ಹರಕೆ



ಶ್ರೀ. ಮೇಘರಾಜರು ನಮ್ಮ ಜಿಲ್ಲೆಯವರು ; ಅಲ್ಲ—ನಮ್ಮ ತಾಲೂಕಿನ ನಮ್ಮ ಊರಿಗೆ ಹತ್ತಿರವೇ ಹರಿಯುವ ಆ ಅಗಸೆಹೊಳೆಯ ಆಚೆಗೆ ನಿಂತು ಸಾಹಿತ್ಯಸೇವೆ, ಸಂಸ್ಕೃತಿ ಪ್ರಸಾರಕ್ಕಾಗಿ ಟೊಂಕಕಟ್ಟಿ ಹೆಣಗುತ್ತಿಪ್ಪ ಒಳ್ಳೇ ಹುರುಪಿನ ನವಯುವಕರು. ಈಗ ಎರಡು ವರ್ಷಗಳ ಹಿಂದೆ ಈ ಹೊಸ ಗೆಳೆಯರು ನನ್ನ ಬಳಿಗೆ ಬಂದು ನನ್ನ ಕೈಗೆ ತಾವು ಬರೆದ ಎರಡು ಕಾದಂಬರಿಗಳ ಕರಡುಗಳನ್ನಿಟ್ಟು, ಓದಿನೋಡಿ ವಿಮರ್ಶೆ ತಿಳಿಸಬೇಕೆಂದು ಆಗ್ರಹ ಮಾಡಿದರು. ಒಂದನ್ನು ಅಂದೇ ಓದಿ ಕೊಟ್ಟೆ. ಅಲ್ಲಲ್ಲಿ ಚಿಕ್ಕ ಪುಟ್ಟ ಮಾರ್ಪಾಟಗಳನ್ನು ಮಾಡಲು ಸೂಚಿಸಿ ಅವರ ಕೈಗೆ ಕೊಟ್ಟೆ. "ಬೆಳ್ಳಿ ಮೂಡದ ಮುಂಜಾವು" ನಮ್ಮ ಸೀಮೆಯ ಸಾಹಿತ್ಯ ಕ್ಷೇತ್ರದ ಮೇಲೆ, ಆ ಕಡಲಂಚಿಗೆ ಬೆಳ್ಳಿಯಂತೆ ಮೂಡಿ ಬಂದಿದೆ. ಅದನ್ನು ನಾನು ಎದೆದುಂಬಿ ಹರಸುತ್ತೇನೆ.

ನಿಜವಾಗಿಯೂ ಕಾದಂಬರಿಗೆ ಪ್ರಸ್ತಾವನೆ ಬೇಕೆ? ಇಲ್ಲವೆಂದೇ ನನ್ನ ಮತ. ಕಾದಂಬರಿಯೇ ಜೀವನದ ಒಂದು ಸಮಸ್ಯೆಗೆ ಪ್ರಸ್ತಾವನೆಯಾಗಿರುತ್ತದೆ. ಪ್ರಸ್ತಾವನೆಗೊಂದು ಪ್ರಸ್ತಾವನೆಯ ಪ್ರಸ್ತಾಪ ಅಪ್ರಸ್ತುತ ತಾನೆ? ಅದ್ದರಿಂದ ಈ ನನ್ನ ನಾಲ್ಕು ಮಾತುಗಳನ್ನು ನಾನು—ಮೇಘರಾಜರಿಗಿಂತ ಕೆಲವರ್ಷಗಳಿಂದಾದರೂ ಹಿರಿಯನಾದ ನಾನು—ಏನಿಲ್ಲದಿದ್ದರೂ ಹಿರಿತನಕ್ಕೆ ಮನ್ನಣೆ ಸಿಗುವ ದೇಶದವನಾದ ನಾನು—ಧೈರ್ಯದಿಂದ ಅವಕ್ಕೆ ಹೆಚ್ಚು ಬಿನ್ನಹದಿಂದ ಹರಕೆಯೆಂದೇ ಕರೆಯುತ್ತೇನೆ ; ಬರೆಯುತ್ತೇನೆ.

ನಮ್ಮ ಕರಾವಳಿಯ ಸೀಮೆ ನಿಸರ್ಗದ ನೆಲೆವೀಡಾಗಿದ್ದರೂ, ನಮ್ಮ ಜನರ ಬಡತನವೊ ಆ ಮೂಲಕ ಮುದುಡಿ ಹೋದ ಆಸಕ್ತಿಯೋ, ಜಡಾ

ದಿಂದ ಹೊಮ್ಮುವ ನಾಟಕೀಯತೆ ಅನಿವಾರ್ಯವಾಗಿ ಅಲ್ಲಲ್ಲಿ ಕಾಣಿಸಿಕೊಂಡಿದೆ. ಇದು ಕೈ ಪಳಗಿದಾಗಲೇ ಹದವಾಗಬೇಕು. ಅದು ಪಳಗಲು ಇವರಿಂದ ಇನ್ನೂ ಇಂಥ— ಅಲ್ಲ ಅದಕ್ಕೂ ಚೆನ್ನಾದ ಕೃತಿಗಳು ಪ್ರಕಟವಾಗಬೇಕು. ಅದಕ್ಕೂ ಮೊದಲು ಇದನ್ನೂ ಅವರು ಬರೆದ, ಬರೆಯಬೇಕೆಂದಿದ್ದ ಇತರ ಕೃತಿಗಳನ್ನೂ ಕನ್ನಡಕುಲ–ರಸಿಕರು ಮನ್ನಿಸಬೇಕು; ಮೆಚ್ಚಬೇಕು.

ನಮ್ಮ ಜನ ಅಂಥ ಸತ್ಕಾರ ಈ ಕೃತಿಗೆ ನೀಡುವರಾಗಿ ನಂಬಿದ್ದೇನೆ. ಅಂಥ ಸತ್ಕಾರದಿಂದಲೇ ಕವಿಯೂ ಕೃತಿ, ಅವನ ಪ್ರತಿಜ್ಞೆಗೆ ನಿಷ್ಕೃತಿ. ಮೇಘಕ್ಕೆ ಪೂರ್ಣತೆಯ ಗೌರವ ! ಆ ಗೌರವ ಮೇಘರಾಜರದಾಗಲಿ !

೯–೭–೫೯
ಗೋಕರ್ಣ

**ಗೌರೀಶ ಕೈಕಿಣಿ**

# ಲೇಖಕನ ಮಾತು



ಸುಂಟರಗಾಳಿಯ ಸುಳಿಗೆ ಸಿಕ್ಕಿ ನನ್ನ ಬದುಕೇ ತತ್ತರಿಸುತ್ತಿರುವ ಕಾಲದಲ್ಲಿ, ನನ್ನ ಕಾದಂಬರಿಯನ್ನು ಪ್ರಕಟಿಸುವುದಕ್ಕೆ ಒಪ್ಪಿಗೆಯನ್ನಿತ್ತು ಶ್ರೀಮಾನ್ ಘಾಣೇಕರರು ಪತ್ರ ಬರೆದರು ಪ್ರಕಾಶನ ಮಾಡುವವರು ಇಲ್ಲದುದರಿಂದ ಬರೆಯುವದಕ್ಕೇ ಎಳ್ಳು-ನೀರು ಬಿಡಬೇಕೆನ್ನುವ ನನ್ನೆಣಿಕೆಗೆ, ಘಾಣೇಕರರು ಕೊಡುತ್ತಿರುವ ಧೈರ್ಯದಿಂದ ಎಡೆಯಿಲ್ಲದಾಗಿ, ಮತ್ತೆ ಬರೆಯುವ ಆಸೆಗೆ ಚಿಗುರೊಡೆಯತೊಡಗಿದೆ.

ಈಗ ಐದು ವರುಷಗಳ ಹಿಂದೆ ಅಂಕೋಲೆಯ ಶಾಲೆಯೊಂದರಲ್ಲಿ ಕೆಲ ಕಾಲ ಶಿಕ್ಷಕನಾಗಿದ್ದೆ. ಆಗ ತಾನೇ ನನ್ನ ಮೊದಲನೇ ವರುಷದ ಪರೀಕ್ಷೆಯೂ ಮುಗಿದು, ಮೈಚಳಿ ಕಳೆದುಕೊಂಡಿದ್ದರಿಂದ, ಎಪ್ರಿಲ ತಿಂಗಳ ಮಧ್ಯಾಹ್ನದ ಬಿಡುವಿನ ವೇಳೆಯಲ್ಲಿ, ದಿನಕ್ಕೆ ನಾಲ್ಕೋ ಆರೋ ತಾಸಿನಂತೆ, ಕೊನೆಯ ಹನ್ನೆರಡು ದಿನಗಳಲ್ಲಿ, ದಿನಕ್ಕೊಂದು ಅಧ್ಯಾಯದಂತೆ, ಹನ್ನೆರಡು ಅಧ್ಯಾಯಗಳ ಈ ಕಾದಂಬರಿ ಬರೆದು ಮುಗಿಸಿದ್ದಾಗಿದೆ. ಇದೇ ನನ್ನ ಮೊದಲ ಕಾದಂಬರಿ " ಬೆಳ್ಳಿ, ಮೂಡದ ಮುಂಜಾವು ! "

ಲೇಖಕ ತನ್ನ ಮೊದಲ ಕಾದಂಬರಿಯ ಪ್ರಕಾಶನಕ್ಕಾಗಿ ತುಂಬಾ ಕಾದಿರುತ್ತಾನೆ.—ಅದನ್ನು ನಾನೂ ಬಲ್ಲೆ. ಜೊತೆಗೆ ಹೊಸ ಲೇಖಕರ ಕೃತಿಯ ಬಗ್ಗೆ, ಕಥಾವಸ್ತು-ಶೈಲಿಯ ಬಗ್ಗೆ ಬರುವ ಟೀಕೆಗಳ ಸುರಿಮಳೆಯನ್ನೂ ಕೇಳಿದ್ದೇನೆ. ಹಾಗೆಯೇ ಇತ್ತೀಚೆಯ ಕಾದಂಬರಿಗಳನ್ನೂ ಓದಲು ತಾತ್ಸಾರ ಪಡುವ ಓದುಗರ ಬಳಗವನ್ನೂ ನೋಡಿದ್ದೇನೆ. ಅವರಿಗೆಲ್ಲ ನನ್ನ ಆಗ್ರಹದ ವಿನಂತಿಯಿಷ್ಟೇ—ಒಮ್ಮೆ ಕಾದಂಬರಿ ಓದಿ ನೋಡಿ ಕೃತಿಯ ಬಗ್ಗೆ, ಲೇಖಕನ ಬಗ್ಗೆ ನಂತರ ನಿಮ್ಮ ಅಭಿಪ್ರಾಯ ಕೊಡಿ.

ಈ ಕಾದಂಬರಿಯ ಲೇಖಕನಾಗಿಯೂ ನಾನು ಹೆಚ್ಚು ಬರೆಯುವಂತಿಲ್ಲ. ಬರೆದರೂ ಅದು ನಾನೇ ನನ್ನ ಬೆನ್ನು ಚಪ್ಪರಿಸಿಕೊಂಡ ಹಾಗೆ! ಅದರಲ್ಲಿಯ ಗುಣದೋಷಗಳನ್ನು ಓದುಗರು, ವಿಮರ್ಶಕರು ನನಗೆ ತಿಳಿಸಿ ಬರೆಯಲು ಪ್ರೋತ್ಸಾಹನ ಕೊಟ್ಟಲ್ಲಿ ಈ ಬರೆಯುವ ವೃತ್ತಿಯನ್ನು ಮುಂದುವರಿಸಬೇಕೆಂದಿದ್ದೇನೆ.

ಹಿರಿಯರೂ ಪ್ರಾಜ್ಞರೂ ಆದ ಶ್ರೀ. ಗೌರೀಶ ಕೈಕಿಣಿಯವರು ಪ್ರಾಮಾಣಿಕ ವಿಮರ್ಶಕರೆನ್ನುವದನ್ನು ನನ್ನ ವೈಯಕ್ತಿಕ ಪರಿಚಯದಿಂದ ಬಲ್ಲೆನಾದುದರಿಂದ, ನಾನು ಮುನ್ನುಡಿ ಬರೆದು ಕೊಡಲು ಕೋರಿದಂತೆ, ಅವರಿಗೆ ಅವರದೇ ಜಂಜಾಟವಿದ್ದರೂ ಇಲ್ಲೆನ್ನದೆ ಮುನ್ನುಡಿ ಬರೆದು ಕೊಟ್ಟು, ಈ ಹೊಸ ಲೇಖಕನಿಗೆ ದಾರಿದೀಪವಾದುದಕ್ಕೆ ಅವರನ್ನು ನೆನೆಸಿದಷ್ಟೂ ಕಡಿಮೆಯೆ!

ಇನ್ನು ಬರೆಯುವಾಗ, ತಿದ್ದುವಾಗ, ನನ್ನೊಡನೆ ಸಹಕರಿಸಿ, ಸೂಕ್ತ ಸಲಹೆಗಳನ್ನು ಕೊಟ್ಟಂಥ ಗೆಳೆಯರು— ಡಾ. ಮಾಧವ ಪಂಡಿತ, ಶ್ರೀ. ಆರ್. ಜಿ. ಕುಮಟಾ ಹಾಗೂ ಶ್ರೀ. ನಾಗೇಶ ಗಾಂವಕಾರ ಇವರ ಉಪಕಾರ ಸ್ಮರಿಸದಿದ್ದರೆ ಅವರಿಗೆ ಅಪಚಾರವಾದೀತು!

ಹಾಗೆಯೇ ಕೊನೆಯದಾಗಿ ಈ ಹೊಸ ಲೇಖಕನ ಕೃತಿಯನ್ನು ಪ್ರಕಟಿಸಲು ಧೈರ್ಯ ಮಾಡಿದ ಶ್ರೀ. ಘಾಣೇಕರರನ್ನು ನಾನು ಅಭಿನಂದಿಸಿದಷ್ಟೂ ಕಡಿಮೆ!

ಇನ್ನು ನನ್ನ ಮುಂದಿನ ಬರವಣಿಗೆ ಓದುಗರಿಂದ ದೊರೆಯುವ ಸ್ವಾಗತದ ಮೇಲಿಂದಲೇ ಎಂದು ಇಲ್ಲಿ ಬೇರೆ ಹೇಳಬೇಕಾಗಿಲ್ಲ.

ಯಲ್ಲಾಪುರ<br>ತಾ. ೧೫–೭–೧೯೫೮ }

—ಮೋಘರಾಜ

# ಬೆಳ್ಳಿ ಮೂಡದ ಮುಂಜಾವು

## ೧

" ಶ್ರೀನಾಥ! ಬಾಳಿನ ಹೆಬ್ಬಯಕೆಗಳು ಹೆಬ್ಬಂಡೆಯಾಗಿ ನಿಂತು, ಅದೇಕೆ ನಮ್ಮನ್ನು ಅಣಕಿಸುತ್ತಿರಬೇಕು? ದೂರದ ದಾರಿಯ ಯಾತ್ರೆಯಲ್ಲಿ ಯಾತನೆಯನ್ನು ಕೊಡುವುದಕ್ಕೆಂದೆ? ಬದುಕಿಲ್ಲ; ಬದುಕಿಗೆ ಬೆಲೆಯಿಲ್ಲ; ಆಶೋತ್ತರಗಳಿಲ್ಲ; ನಿಶ್ಚಿತ ಗುರಿಯಿಲ್ಲ. ಗಾಳಿ ಬಂದ ದಿಕ್ಕಿಗೊಮ್ಮೆ ಒಲಿದು ಸರಿದು ಹೋಗುವಂತಿದೆ!

" ಎಲ್ಲ ಮಹದಾಶೆಗಳೂ ಕೊಚ್ಚಿ ಹೋಗಿವೆ ಶ್ರೀನಾಥ! ಬದುಕಬಾರ ದೆಂಬ ನಿರಾಶೆಯಿಂದಲ್ಲ! ಬದುಕೇ ಬೇಡಾಗಿದೆ. ನಾನೊಬ್ಬನೇ ಬಂದವನು, ಒಬ್ಬನೇ ತಿರುಗಿ ಹೋಗಬೇಕು. ಈ ನಾಗಾಟದ ಕಾಲಾವಧಿಯಲ್ಲಿ ಯಾರಿಗೂ ತೊಂದರೆಯಾಗದಿರಲಿ, ಎಂದಿಷ್ಟೇ ನನ್ನ ಆಶಯ!

" ಯಾವುದಕ್ಕೂ ತಲೆಬಾಗುತ್ತಿಲ್ಲ; ಯಾವುದಕ್ಕೂ ಹೇಸುತ್ತಿಲ್ಲ; ಈ ಜಗತ್ತೇ ನನ್ನ ಪಾಲಿಗೆ ಇಲ್ಲವಾಗಿದೆ. ಅಲ್ಲ-ಶೂನ್ಯ! ನಾನು ಯಾರಿಗಾಗಿಯೂ ಅಳುತ್ತಿಲ್ಲ; ಯಾರೂ ನನಗಾಗಿ ಅಳುತ್ತಿಲ್ಲ. ಹೀಗೆ ಅಪರಿಚಿತ ವ್ಯಕ್ತಿಯಾಗಿ ಸಾಗುತ್ತಿರುವ ನನಗೆ ನಾನೊಬ್ಬ ಮನುಷ್ಯನೇ ಎಂದು ನನಗೇ ಒಮ್ಮೊಮ್ಮೆ ತಿರಸ್ಕಾರದ ನಗು ಬಂದುಬಿಡುತ್ತದೆ.

" ಇನ್ನು ಹಿಂತಿರುಗಿ ನೋಡುವಂತಿಲ್ಲ. ಹುಟ್ಟಿ ಬಂದ ತಪ್ಪಿಗೆ ಮುಗ್ಧ ಮಗುವಾಗಿ ಎಲ್ಲವನ್ನೂ ನೋಡಿದ್ದೇನೆ; ನೋಡುತ್ತಿದ್ದೇನೆ. ಇನ್ನೇನೂ ನೋಡುವುದಿಲ್ಲವೆಂದಲ್ಲ; ಇದ್ದರೂ ಅವು ನನಗೆ ಬೇಕಿಲ್ಲ. ಯಾರಿಗೂ ನಾನು ಬೇಕಿಲ್ಲದ ಮೇಲೆ ನಾನೇಕೆ ಭೂಮಿಗೆ ಭಾರವಾಗಿ ಉಳಿಯುತ್ತಿರಬೇಕು?

" ಎಷ್ಟೋ ಜನ ಹುಟ್ಟುತ್ತಾರೆ; ಸಾಯುತ್ತಾರೆ. ಕ್ರಿಮಿಕೀಟಕ ಬದುಕಿ ಬಾಳುವುದಿಲ್ಲವೇ? ಹಾಗೇನೇ ಭೂಮಿಯಿದೆಯೆಂದರೆ ಅವರಿವರಿಂದ ತಿಳಿಯಬೇಕು. ಈ ನಶ್ವರ ಶರೀರ ಸಾಯುವುದಕ್ಕೆಂದೇ ತಾಯಿ ಬಸುರಿಂದ ಬಂದಿರಬೇಕು. ನಾನೂ ಅಂತೇನೆ. ನಿನಗೆ ಕಾಣಲು ಮಾತ್ರ ರವಿವರ್ಮಾ! ಹೆಸರು

ದೊಡ್ಡದಾದುದರಿಂದಲೇ ಅದನ್ನು ತಿಳಿಸಲು ಪಟ್ಟ ಪಾಡೇ ಮರ್ಮಭೇದಿಯಾಗಿದೆ. ಸಾಕಪ್ಪಾ! ಈ ಬಣ್ಣದ ಬದುಕು! ನಾವೆಷ್ಟು ದಿನ ಬಣ್ಣಕಟ್ಟಿ ಕುಣಿಯಬಲ್ಲೆವು? ಬಣ್ಣ ಮೂರು ದಿನಕ್ಕೆ ಬಂದುದು. ಅದು ಮಾಸಿದ ನಂತರ ನಮ್ಮ ಬಣ್ಣವೂ ಬಯಲಾಗುತ್ತಿದೆ. ಬಯಲು ಬಯಲಿನೊಡನೆಯೇ, ಶೂನ್ಯ ಶೂನ್ಯದೊಡನೆಯೇ ವಿಲೀನವಾಗಬೇಕು. ಅದಕ್ಕೂ ಒಂದು ಕಾಲವಿದೆ. ಆ ಕಾಲನ ಬಿರುಗಾಳಿಯ ಹೊಡೆತಕ್ಕೆ ನಾವು ತರಗೆಲೆಯಾಗಿ ಹಾರಿ ನಮಗೆ ಮೀಸಲಾದ ತಾಣವನ್ನು ಭದ್ರವಾಗಿ ಹಿಡಿಯಬೇಕು. ಅದಕ್ಕೆ ಹೇಳಿಕೆಯೂ ಇಲ್ಲ. ಅದೊಂದು ದಿನ ಬರಲಿದೆ. ಆ ದಿನಕ್ಕಾಗಿ ಕಾಯಲಿದ್ದೇನೆ-ಕಾಯುತ ಲಿದ್ದೇನೆ.

"ಶ್ರೀನಾಥ, ನನ್ನನ್ನು ನಿರಾಶಾವಾದಿಯೆಂದು ಹಳಿಯಬೇಡ. ಅದು ಅವರವರ ಮಾನಸಿಕ ಪ್ರಪಂಚದ ಅಸ್ತಿವಾರದ ಮೇಲೆ ನಿಂತಿರುವಂತಹದು. ಆಶೆ ಹಿಡಿದವರಿಗೆ ಆಶೆ! ನಿರಾಶೆಯೆಂದವರಿಗೆ ನಿರಾಶೆ! ಅದೆಲ್ಲ ಈ ಬೃಹದಾಕಾರದ ಬಾಹ್ಯಪ್ರಪಂಚದ ಶಬ್ದಶಕ್ತಿಯಲ್ಲ! ಅದೊಂದು ಅಂತರ್ಗತ, ನಿರ್ವಿಕಾರ ನಿರಾಕಾರ ಅಂತರ ಪ್ರಪಂಚದ ಶಕ್ತಿ! ಅಲ್ಲಿ ಅವರವರ ಪಾಲಿಗೆ ಅವರವರೆ! ಸಹಕಾರ ಸಾಕಾರ ರೂಪವಿಲ್ಲ. ಮನಸ್ಸಿದ್ದರೆ ನಡೆಯಬೇಕು. ಇಲ್ಲವಾದರೆ ಹಿಂತಿರುಗಬೇಕು. ಇನ್ನೂ ನಾನು ಕ್ಲೀಬಾವಸ್ಥೆಯ ಮೃದುಕಂಠದ ಮಗುವಲ್ಲ. ಬುದ್ಧಿಯಿದೆ, ಶಕ್ತಿಯಿದೆ, ವಾಸ್ತವತೆಯ ಜ್ಞಾನವಿದೆ.

"ನಾನೂ ನೀನೂ ನಮಗರಿವಾಗದಂತೆಯೇ ಆ ಗಡಿಯನ್ನು ಒಂದು ದಿನ ಮುಟ್ಟಿಕೊಳ್ಳಲೇ ಬೇಕು. ಅದಕ್ಕಾಗಿಯೇ ನಿಂತಿದ್ದೇವೆಂದರೆ ನಗುವದಿಲ್ಲವಷ್ಟೇ?

"ಶ್ರೀನಾಥ! ಮಾತಾಡುವದಿಲ್ಲವೇ? ಮೌನವಾಗಿಯೇ ಇರುವೆಯಲ್ಲ? ನನ್ನೊಡನೆ ನಡೆಯುವದೂ ನಿನಗೆ ಹೇಸಿಕೆಯಾಗುತ್ತಿದೆಯೇ? ಇರಬೇಕು, ಗಡ್ಡದ ಸನ್ಯಾಸಿ! ಕೊಳಕು ಬಟ್ಟೆ! ಇಂತಹನ ಜೊತೆ ನಿನ್ನಂತಹ ಯುವಕರು ಬರುವದೆಂದರೆ? ಗೆಳೆಯರು ಕಂಡರೆ ಚಿಕ್ಕಾಗೆ ಬಂದವರೆಂದು ಬಿಲ್ಲೆ ಕೊಟ್ಟಾರು ಅಲ್ಲವೇ ?"

ಅವನು ಇನ್ನೂ ಎಷ್ಟು ಹೇಳುವವನಿದ್ದನೊ? ಅವನ ಉದ್ವೇಗ ತುಂಬಿದ ಮೋರೆ ಕಾತರತೆಯನ್ನು ತೋರಿಸುತ್ತಿತ್ತು. ಎತ್ತಲೋ ತೀಕ್ಷ್ಣತೆ

ಯಿಂದ ನೋಡುತ್ತಿದ್ದನು. ಉಜ್ವಲ ಕಣ್ಣುಗಳು ಬೆಂದು ಸೋತ ದೇಹಕ್ಕೆ ಸಾಕ್ಷಿಯಾಗಿದ್ದವು.

ಅವನಾಡುತ್ತಿದ್ದ ಮಾತಿನ ಆದಿ ಅಂತ್ಯಗಳು ನನಗೂ ತಿಳಿಯುತ್ತಿರಲಿಲ್ಲ. ಅವನ ದಣಿದ ದೇಹಕ್ಕೆ ಏಕೆ ತೊಂದರೆ ಕೊಡಬೇಕೆಂದು 'ರವಿ' ಎಂದೆ. ಮೋರೆ ತಿರುವಿ ನೋಡಿದ. ಅವನ ದೃಷ್ಟಿ ಪ್ರಶ್ನಾರ್ಥಕವಾದಂತಿತ್ತು. ನಾನೇ ಕೇಳಿದೆ—

"ನಿನ್ನ ಬೆಡ್ಡಿಂಗ ಎಲ್ಲಿದೆ ರವಿ ?"

"ಬೆಡ್ಡಿಂಗಿನಲ್ಲಿ ಮಲಗುವ ಭಾಗ್ಯ ನನಗೆಲ್ಲಿ ಶ್ರೀನಾಥ! ನೆಲ ಮುಟ್ಟದೆ, ಬೆಚ್ಚಗೆ ಮಲಗಿಕೊಳ್ಳಲು ಅನುಕೂಲವಾಗುವಷ್ಟು ಬಟ್ಟೆಗಳು ಮಾತ್ರ ಇವೆ. ಆಯಿತು."

"ಯಾವ ಹೋಟೆಲಿನಲ್ಲಿ ?"

"ನ್ಯೂ ಲೋಜಿಂಗಿನಲ್ಲಿ."

"ಅಯ್ಯೋ, ನೀನೆಂಥ ಕುಂಭತಲೆಯವನಪ್ಪ! ನ್ಯೂ ಲೋಜಿಂಗ ಇಲ್ಲೇ ಹಿಂದುಗಡೆಯಿತಲ್ಲ. ಹುಚ್ಚರ ಹಾಗೆ ಬಂದುಬಟ್ಟೆಯಲ್ಲ!"

"ಸರಿ! ನೀನೂ ಹಾಗೆಯೇ ಕರೆಯುವೆಯೆಂದು ಗೊತ್ತಿತ್ತು. ನನ್ನನ್ನು ನೋಡಿ, ನೀನೇಕೆ ಜನವೂ ಹುಚ್ಚನೆನ್ನಬಹುದು."

"ಗಂಟೆ ಒಂಬತ್ತಾಗಲು ಬಂತು, ಊಟ ಮುಗಿಸು. ನಂತರ ಬೇರೆ ಸಂಗತಿಗಳನ್ನು ಮಾತಾಡೋಣ. ನಮ್ಮ ಪಾಲಿಗೆ ಇಡೀ ರಾತ್ರಿ ಇದೆಯಲ್ಲ!"

"ಹಸಿವೆಯು ಕಿಚ್ಚೇನೂ ನನ್ನನ್ನು ಹೀರುತ್ತಿಲ್ಲ. ಹೀಗೇ ಮಾತಾಡುತ್ತ ಹೋಗೋಣ. ಈ ಮಾರ್ಗ ಎತ್ತ ಓಡುತ್ತಿದೆ?"

"ಇದು ಹಾಯ್‌ವೇ ಮಾರಾಯಾ! ಇದು ಗುಡ್ಡಗಳ ಸಾಲುಗಳನ್ನು ಸುತ್ತಿ, ಸಹ್ಯಾದ್ರಿಯನ್ನು ದಾಟಿ ಬೈಲು ಸೀಮೆಯನ್ನು ಮುಟ್ಟುತ್ತಿದೆ."

ಯಾಕೋ ಮಾತಾಡದೇ ರವಿವರ್ಮ ಹಿಂತಿರುಗಿದ. ಹೋಟೆಲ ಹತ್ತಿರ ಬಂತು. ಹೋಟೆಲ ಮಾಲಿಕನ ಪರಿಚಯ ಸುಮಾರು ಚೆನ್ನಾಗಿಯೇ ನನಗಿತ್ತು. ನಾನು ಈ ಗಸ್ತದ ಬಿಕ್ಷೆಯೊಡನೆ ಬಂದುದು ನೋಡಿ ಮಾಲಕನಿಗೂ ಆಶ್ಚರ್ಯವಾಗಿರಬೇಕು. ನಾನು ಅವನ ಸಮೀಪವೇ ಕುಳಿತೆ. ರವಿ ಊಟಕ್ಕೆ ನಡೆದ.

ಮಾಲಿಕನು ನನ್ನನ್ನು ಗಿರಾಕಿಯೆಂತೆಯೇ ಭಾವಿಸಿ ಚಹ ಆಗಬಹುದೆ? ಎಂದನು. ಇದು ಸಾಮಾನ್ಯ ಹೋಟೇಲು ಇಟ್ಟವರ ಲಕ್ಷಣವೆಂದು, ಚಹ ಬೇಡ, ಕಾಫಿ ತರಿಸಿ ಎಂದೆ.

ಕಾಫಿ ಕುಡಿದಾಯಿತು. ಮಾಲಿಕನು ವಿನಯದಿಂದ, "ಸಿಗರೇಟು ಸೇದುವದಿದೆಯೇ?" ಎಂದನು. ಒಂದು ಸಿಗರೇಟು ಕೊಟ್ಟು ಅದು ಕಾಸು ಜಗ್ಗುವದು ಅವನಿಗೆ ಬೇಕಿತ್ತು. ಅವನ ಆಶೆಗೆ ಭಂಗ ತರಬಾರದೆಂದು, "ಆಗಲಿ" ಎಂದೆ. ಸಿಗಾರೇಟಿನ ಜೊತೆ ಮ್ಯಾಚಿಸ್ ಬಂತು. ನನ್ನ ಬಿಲ್ಲಿನ ಜೊತೆ ರವಿಯ ಊಟದ ಬಿಲ್ಲನ್ನೂ ಕೊಟ್ಟು ಕುಳಿತುಕೊಂಡೆ.

ಮಾಲಿಕ ಎಳೆದು ತಂದ ನಗೆಯಿಂದ ಮೀಸೆ ನಿಮಿರಿಸುತ್ತ,

"ಅವರು ತಮ್ಮ ಪರಿಚಯಸ್ಥರೊ?" ಎಂದನು.

"ಹೌದು."

"ಗಡ್ಡ ಬಿಟ್ಟಿದ್ದಾರಲ್ಲ?"

"ಏಕೋ ಬಿಟ್ಟಿದ್ದಾರೆ, ನನಗೂ ಗೊತ್ತಿಲ್ಲ."

"ಹುಚ್ಚರಂತೆ ಕಾಣುತ್ತಾರೆ."

"ಅದು ಹೇಗೆ?"

"ಅವರು ಮನುಷ್ಯರನ್ನು ನೋಡುವದೇ ಇಲ್ಲ."

"ಅವಶ್ಯಕತೆಯಿರಲಿಕ್ಕಿಲ್ಲ."

ಅಷ್ಟರಲ್ಲಿ ರವಿ ಊಟ ಮುಗಿಸಿ, ಬಾಗಿಲ ಬಳಿಯಲ್ಲಿಯೇ ಬರುತ್ತಿದ್ದನು. ಬಂದಾಗ ಸಿಗರೇಟ ಕೊಟ್ಟೆ. "ಸ್ವಲ್ಪ ವೇಳೆಯಲ್ಲಿ ಇವರು ಬರುತ್ತಾರೆ" ಎಂದು ಮಾಲಿಕನಿಗೆ ತಿಳಿಸಿ ಹೊರಟೆವು.

ಇನ್ನೂ ಚೆನ್ನಾಗಿ ನೆನಪಿದೆ. ಸುಮಾರು ಹದಿನೆಂಟು ವರುಷಗಳಿಗೂ ಮೊದಲಾಗಿರಬೇಕು. ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ನಾವಿಬ್ಬರೂ ಸಹಪಾಠಿಗಳಾಗಿದ್ದೆವು. ರವಿವರ್ಮ ಸ್ಕಾಲರನಿದ್ದ. ನಮ್ಮೊಡನೆ ವಿನಯಶಾಲಿ ಯಾಗಿಯೇ ನಡೆದುಕೊಳ್ಳುತ್ತಿದ್ದನು. ಆದರೂ ಹಟವಾದಿ; ಶೀಘ್ರಕೋಪಿ. ಒಂದೇ ವಿಷಯವನ್ನು ಎರಡು ಸಾರೆ ಕೇಳಿದರೆ ಸರಕ್ಕನೆ ಕಣ್ಣು ಕೆಂಪಾಗುತ್ತಿತ್ತು. ಆಟ-ನೋಟಗಳಲ್ಲಿ ಆಸಕ್ತಿಯಿರಲಿಲ್ಲ. ಬದಲಾಗಿ ತಿರಸ್ಕಾರ ನಗೆ ನಕ್ಕು, "ಉಂಡಷ್ಟು ಅಜಗವಿದ್ದರೆ ಹೋಗಲು ಅಡ್ಡಿಯಿಲ್ಲ" ಎನ್ನುತ್ತಿದ್ದನು.

ಒಮ್ಮೆ ನಮ್ಮ ಕಾಲೇಜ ಕ್ರಿಕೆಟ ಟೀಮಿಗೆ ವಿರುದ್ಧವಾಗಿ ಬೊಂಬಾಯಿಯಿಂದ ಕ್ರಿಕೆಟ ಟೀಮು ಬಂದಿತ್ತು. ಬೊಂಬಾಯಿಯಿಂದ ಬಂದ ಟೀಮಿನವರು ಒಳ್ಳೇ ಆಟಗಾರರೆಂದು ಹೆಸರಾಗಿದ್ದವರು. ಆಟ ಆದಿತ್ಯವಾರವೇ ಸುರುವಾಗುತ್ತಿದ್ದುದರಿಂದ ಮುಂಜಾನೆಯೇ ಸ್ನಾನ ತೀರಿಸಿ ಊಟ ಮುಗಿಸಿದೆವು. ನಾವು ಮ್ಯಾಚಿಗೆ ಹೊರಡಲು ತಯಾರಿಯಾಗುವಾಗ ರವಿ ಹಾಸಿಗೆ ಸುರುಳಿ ಬಿಚ್ಚುತ್ತಿದ್ದ. ನನಗೆ ಅವನಲ್ಲಿ ಹೆಚ್ಚು ಸಲಿಗೆಯಿದ್ದುದರಿಂದ ನಗುತ್ತಲೇ "Cigarate please" ( ಸಿಗರೇಟ ಕೊಡುತ್ತೀಯಾ ? ) ಎಂದೆ. ಸಿಗರೇಟಿನ ಶೋಕಿ ಆಗಲೇ ರವಿಗೆ ಬಡಿದಿತ್ತು. ಏನೂ ಹೆದರಿಕೆಯಿಲ್ಲದೆ, ಯಾರ ಮುಂದೆಯೂ ಸೇದದೆ ತನ್ನ ರೂಮಿನಲ್ಲಿಯೇ ಸೇದುತ್ತ ಕುಳಿತುಕೊಳ್ಳುವದು ಅವನ ರೂಢಿಯಾಗಿತ್ತು.

ನನ್ನನ್ನೇ ನೋಡುತ್ತ ರವಿಯೆಂದ :

"ಅಗೋ ಕಪಾಟಿನ ಮೇಲ್ಗಡಿಯಲ್ಲಿದೆ."

ಸಿಗರೇಟ ತೆಗೆದುಕೊಳ್ಳುತ್ತಾ, "ನೀನು ಮ್ಯಾಚಿಗೆ ಬರುವದಿಲ್ಲವೇ ?" ಎಂದೆನು.

"ಇಲ್ಲಯ್ಯಾ !"

"ಬಂದರೇನು? ತಾಸೆರಡು ತಾಸು ಕುಳಿತು ಬೇಸರ ಬಂದರೆ ತಿರುಗಿ ಬರಬಹುದಲ್ಲ."

"ನಾನೇನು ಹೆಚ್ಚು ಊಟ ಮಾಡಿಲ್ಲವಯ್ಯಾ."

"ಅದಕ್ಕಾಗಿಯೇ ಮಲಗಿಕೊಳ್ಳುತ್ತಿರುವೆ ಅಲ್ಲವೇ ?"

ಮತ್ತೊಮ್ಮೆ ಪರೀಕ್ಷಿಸಬೇಕೆಂದು ಕ್ಷಣ ನಿಂತು ಕೇಳಿದೆ :

"ಬರುವಿಯಾ ?"

"ಅದು ನನಗೆ ಸೇರುವದಿಲ್ಲವಯ್ಯಾ."

"ಏತಕದು ?"

"ಅದನ್ನು ನಿನ್ನ ಹತ್ತಿರ ಯಾರು ಕೇಳಿದರು ?"

"ಕೇಳುವವರಾಗಿದ್ರೆ ?"

"[illegible] ಹೋಗುತ್ತೀರೋ ಇಲ್ಲವೋ ? ಇನ್ನು ಕರಕರ ಎನ್ನುತ್ತ ಕುಳಿತರೆ [illegible] ಹೊರಗೆ ತಳ್ಳಿ, ಬಾಗಿಲು ಹಾಕುತ್ತೇನೆ."

"ನೀನು ಅಂಥವನೇ ಮಾರಾಯಾ. ನಮ್ಮ ಹತ್ತಿರ ಆಗುವದಿಲ್ಲವೆಂದು

ಅಡಿಸ್ತಾ ಇದ್ದೀಯಾ ? ”

ಆಸಾಮಿ ಎದ್ದೇ ಬಂತು. ನನಗೆ ರೂಮಿನ ಹೊರಗೆ ತಳ್ಳಿ ಹಾಕುತ್ತಾ ನೆಂದು ಯೋಚಿಸಿ ಅವನು ಬರುವದಕ್ಕಿಂತ ಮೊದಲೇ ನಾನು ಹೊರಗೆ ಓಡಿದೆ. ನಂತರ ಅವನು ಓದುತ್ತ ಕುಳಿತಿರಬೇಕು.

ಅವನ ಪರಿಚಯವಿಲ್ಲದವರು ಅವನನ್ನು ಶುದ್ಧ ಹುಂಬ ಎಂದು ಕರೆಯ ಬಹುದು. ಆದರೆ ಸ್ವಭಾವ ಬಲು ಮೃದು. ಮನಸ್ಸು ಆನಂದದಲ್ಲಿ ಇದ್ದಾಗ ಎಲ್ಲರೊಡನೆಯೂ ಸಿಗರೇಟ ಎತ್ತುವವರಕ್ಕಾಗಿ ಗೇಲಿ ಮಾಡುತ್ತಲಿರುತ್ತಿದ್ದ.

ನಮ್ಮ ‘ ಅಗ್ರಿ. ’ ಪರೀಕ್ಷೆ ಮುಗಿದ ಮೇಲೆ ಬಹುಕಾಲ ನನ್ನ ಮತ್ತು ಅವನ ಭೆಟ್ಟಿಯಾಗಿರಲಿಲ್ಲ. ಅದೂ ವೈಪರೀತ್ಯವೆಂದು ಕಾಣುತ್ತದೆ. ಒಮ್ಮೆ ಅವನು ಇವತ್ತು ಇಳಿದ ಹೊಟೇಲಿನಲ್ಲಿಯೇ ಒಂದು ಮಗ್ಗುಲಿಗೆ ಕುಳಿತಿದ್ದ. ನಾನು ಚಹ ಕುಡಿಯುತ್ತಿರುವಾಗ ಅವನು ನನ್ನನ್ನೇ ನೋಡುತ್ತಿದ್ದ. ಆಗ ಅವನದು ಹುಡುಕುವ ದೃಷ್ಟಿ, ಕುತೂಹಲದ ದೃಷ್ಟಿ, ಮನಸ್ಸಿನ ಆಳೋತ್ತರದ ಏಳು ಬೀಳುವಿಕೆಯ ಸುಖ-ದುಃಖ ಮಿಶ್ರಿತವಾದ ಸ್ಥಿರವಾದ ದೀರ್ಘ ದೃಷ್ಟಿ !

ಅದು ಇಂದಿಗೆ ಹದಿನೆಂಟು ತಿಂಗಳ ಮೊದಲು. ಆ ಹದಿನೆಂಟು ತಿಂಗಳು ನಿನ್ನೆ ಮೊನ್ನೆಯಾಗಿ ಈ ಇಂದಿನ ದಿನ ಬಂದುಬಿಟ್ಟಿವೆ ಏನೋ. ಅಥವಾ ನಮಗೆ ಮೋಸ ಮಾಡುವವಕ್ಕಾಗಿಯೇ ದಿನಗಳು ನಮಗೆ ಗೊತ್ತಿಲ್ಲದಂತೆ ಉರುಳುತ್ತವೆ!

ಅದರಡಿಯಲ್ಲಿ ಏನೋ ಬಚ್ಚಿಟ್ಟ ಬಯಕೆಯಿರಬೇಕು.

ಅದೇ ಆ ಮೂಲೆಗೆ ಕುಳಿತ ಗಡ್ಡದ ಸನ್ಯಾಸಿ ನನ್ನನ್ನು ಕೈಬೀಸಿ ಕರೆ ಯಿತು. ನಾನು ಅವಾಕ್ಕಾದೆನು. ಗುರುತಿಲ್ಲ, ಪರಿಚಯವಿಲ್ಲ. ನನ್ನನ್ನೇ ಆ ಎರಡು ಕಣ್ಣುಗಳು ಪಿಳಿಪಿಳಿ ನೋಡುತ್ತಿದ್ದವು. ನಾನು ಆಶ್ಚರ್ಯಚಕಿತನಾಗಿ ಕಣ್ಸನ್ನೆಯಿಂದಲೆ “ ಏನು ? ” ಎನ್ನುವಂತೆ ನೋಡಿದೆ. ಆ ಸನ್ಯಾಸಿ ಕುಳಿತು ಕೊಳ್ಳುವಂತೆ ಸನ್ನೆ ಮಾಡಿದನು. ಮತ್ತು ಆರೆನಿಮಿಷ ನಿಂತು ಕೇಳಿದನು :

“ ತಾವು ಇಲ್ಲೇನು ಮಾಡುತ್ತೀರಿ ? ”

“ ನೌಕರಿ ಮಾಡುತ್ತಿದ್ದೇನೆ. ”

“ ದೊಡ್ಡ ನೌಕರಿಯಲ್ಲಿ ಇರುವಿರಲ್ಲವೇ ? ”

“ ಹೌದು, ಯಾಕೆ ? ”

ಉತ್ತರ ಕೊಡದೆ “ ತಮ್ಮ ಕೈ ನೋಡೋಣ ? ” ಎಂದನು. ಕೈ

ಕೊಟ್ಟನು. ಸುಮಾರು ಐದಾರು ನಿಮಿಷ ನನ್ನ ಎರಡೂ ಅಂಗೈಗಳನ್ನು ನೋಡುತ್ತ, "ತಾವು ಉಚ್ಚ ಶಿಕ್ಷಣ ಪಡೆದವರು" ಎಂದು ನನ್ನ ಕಣ್ಣುಗಳನ್ನೇ ನೋಡಿದನು.

"ತಾವು ಉಚ್ಚ ನೌಕರಿಯಲ್ಲಿದ್ದೀರಿ !"

ಹೌದೆನ್ನುವಂತೆ ತಲೆದೂಗಿದೆ.

"ತಮ್ಮ ಮೊದಲಿನ ಜೀವನ ತುಂಬ ಕಷ್ಟದಾಯಕವಾಗಿತ್ತು. ದೇಹ ದಣಿಯುವಷ್ಟು ಪ್ರವಾಸ ಮಾಡಬೇಕಿತ್ತು. ತಮಗೆ ಪಿತೃಶೋಕ ಕಳೆದು ಹೋಗಿದೆ. ಈಗ ಅನುಕೂಲವಾದ ಎರಡು ಗಂಡುಮಕ್ಕಳೊಡನೆ ಸೌಖ್ಯವಾಗಿ ಇದ್ದೀರಿ."

ಅವನೆಂದುದು ಅಕ್ಷರಶಃ ನಿಜವಾಗಿತ್ತು. ನನಗೇಕೋ ಆ ವ್ಯಕ್ತಿಯ ಬಗ್ಗೆ ಕುತೂಹಲವುಂಟಾಯಿತು. ಆದರವೂ ಉತ್ಪನ್ನವಾಯಿತು. ಅದೇ ವ್ಯಕ್ತಿ "ತಮ್ಮ ಹೆಸರು ಶ್ರೀನಾಥನೇ ?" ಎಂದಿತು.

ನನ್ನ ಮೇಲೆ ನೀರು ಸುರುವಿದಂತಾಯಿತು. ಏನೋ ಸರಸರ ಹಿಂದಿನ ದಿನಗಳು ಮನಃಪಟಲದೆದುರು ಉರುಳತೊಡಗಿದವು. ಇದೇ ವ್ಯಕ್ತಿ ಮಸುಕು ಮಸುಕಾಗಿ, ನಂತರ ಸಾಕಾರವಾಗಿ ಕಂಡಿತು. ಈ ಗಡ್ಡದ ಸನ್ಯಾಸಿ ರವಿವರ್ಮನೇನೋ ಎಂದುಕೊಂಡೆ. ನಾನೇ ಕೇಳಿದೆ, "ತಾವು ಯಾರು ?"

ಆ ವ್ಯಕ್ತಿ ಮಾತಾಡಲಿಲ್ಲ.

"ತಾವೆಲ್ಲಿಗೆ ಹೋಗಬೇಕು ?"

"ರಾಮಪುರಕ್ಕೆ."

"ಇನ್ನೊಂದು ಮಾತು ಕೇಳಬಹುದೆ? ತಾವು ಬೇಸರಪಡುವುದಿಲ್ಲವಷ್ಟೆ ?"

ಅವನ ಮೋರೆಯಲ್ಲಿ ಹಲವು ಬಣ್ಣಗಳ ವಿಕಾರವೆದ್ದಿತು. ಅವೆಲ್ಲವೂ ಒಂದರ ಹಿಂದೊಂದು ಮರೆಯಾಗಿ ಏನೋ ಉದ್ವೇಗವನ್ನು ಹತ್ತಿಕ್ಕುವಂತೆ ಭಾಸವಾಗುತ್ತಿತ್ತು. ಉತ್ತರ ಬಾರದಿರಲು ಕೊಂಚ ಮುಂದುವರಿದು, "ತಾವೆಲ್ಲಿಂದ ಬಂದಿರಿ ?" ಎಂದೆ.

"ಉತ್ತರ ದೇಶದಿಂದ."

"ತಮ್ಮ ಮಾತೃಭಾಷೆ ಕನ್ನಡವೆ ?"

ಅದಕ್ಕೂ ಉತ್ತರವಿಲ್ಲ; ಮೌನ. ಹೌದೆನ್ನುವಷ್ಟು ನನಗೆ ಧೈರ್ಯ ಬಂದಿತು.

“ ತಾವು ಕನ್ನಡಿಗರೆ ? ”

“ ಯಾಕೆ ? ”

ಸನ್ಯಾಸಿಯ ಕಣ್ಣುಗಳು ಮಂಜಾಗತೊಡಗಿದ್ದವು. ನಾನೇ ಗಟ್ಟಿಯಾಗಿ ಕೈ ಹಿಡಿದು, “ ನೀನು ರವಿವರ್ಮನಲ್ಲವೇ ? ” ಎಂದು ಕೇಳಿದೆ. ಉತ್ತರ ಕಣ್ಣೀರು. ನನ್ನ ಹೃದಯಕ್ಕೇನಾಯಿತೋ, ನನಗರಿವಾಗದ ರೀತಿಯಲ್ಲಿ ಬಡಿದು ಕೊಳ್ಳತೊಡಗಿತು. ರವಿವರ್ಮ ಕಲ್ಲಿನಂತೆ ಕುಳಿತಿದ್ದ. ಅವನಿಗೂ ಅದಾವುದೋ ನೋವು ಅಡಗಿಸಲಾರದಷ್ಟು ಬಲವಾಗಿತ್ತು. ತುಟಿಗಳು ಅದುರತೊಡಗಿದ್ದವು. ಹೀಗೆಯೇ ಐದು ನಿಮಿಷ ಕಳೆದಿರಬೇಕು. ‘ ರವಿವರ್ಮ ’ ಎಂದೆ. ‘ ಏನು ? ’ ಎನ್ನುವಂತೆ ನೋಡಿದನು.

“ ಇಂಥ ಕಣ್ಣುಕಟ್ಟುವಂಥ ಸೋಗು ಏಕೆ ಹಾಕಿಕೊಂಡೆ ? ”

“ ನಿನಗೆ ಹಾಗೆ ಕಾಣುವದೇ ? ”

ನನಗೂ ಆ ಮಾತು ಗಂಟಲಿಗೆ ಸಿಕ್ಕಿಕೊಂಡಿತು. ಮೌನವೇ ಇಬ್ಬರಿಗೂ ಮದ್ದಾಯಿತು. ಅದೇಕೋ ಇಷ್ಟು ಕಾಲದ ಅಗಲಿಕೆ ನಮ್ಮಿಬ್ಬರ ಬಾಯಿಗೆ ಬೀಗ ಹಾಕಿತ್ತು. ಕೊನೆಗೆ ಅವನಿಂದ ಇಷ್ಟೇ ತಿಳಿದಿತ್ತು. “ ಏಕೋ, ಭರತ ಖಂಡದ ಕ್ಷೇತ್ರಗಳನ್ನು ಸುತ್ತುವ ಮನಸ್ಸಾಗಿದೆ; ಅದಕ್ಕಾಗಿ ಹೊರಟಿದ್ದೇನೆ. ” ಇನ್ನು ನನ್ನ ಯಾವ ಪ್ರಶ್ನೆಗೂ ಅವನಿಂದ ಸಮರ್ಪಕ ಉತ್ತರ ದೊರೆಯಲಿಲ್ಲ. ಅವನ ಮೊದಲಿನ ಮೈ ಕಳೆದು ಹೋಗಿತ್ತು. ಬಡಕಲು ಎಲುಬಿನ ಗೂಡು ಜೀವ ಕಾದುಕೊಳ್ಳುವ ಮಟ್ಟಿಗೆ ಮಾತ್ರ ಭದ್ರವಾಗಿತ್ತು. ಆ ದಿನ ನಮ್ಮ ಮನೆಗೆ ಬಾ ಎಂದು ಒತ್ತಾಯಪಡಿಸಿದರೂ ಬರಲೊಪ್ಪಲಿಲ್ಲ. ಇನ್ನು ಎಷ್ಟು ದಿನ ಇಲ್ಲಿ ಉಳಿಯುವಿ ? ಎಂದು ಕೇಳಿದುದಕ್ಕೆ ಹಿಂದಿನಿಂದ ತಿಳಿಸುತ್ತೇನೆ, ಎಂದಷ್ಟೇ ಎಂದಿದ್ದ. ಅವರೂ ಮರುದಿನವೇ ಆಸಾಮಿ ನಾಪತ್ತೆ. ಹೋಟೇಲು ಮಾಲಿಕರಲ್ಲಿ ವಿಚಾರಿಸಿದಾಗ, ಅವರು ಮುಂಜಾನೆಯ ಐದು ಘಂಟೆಯ ಬಸ್ಸಿಗೇ ಹೊರಟು ಹೋಗಿರಬೇಕು. ಯಾವ ಕಡೆಗೆ ಹೋದನೋ ನನಗೂ ನಿಶ್ಚಿತ ತಿಳಿಯಲಿಲ್ಲ, ಎಂದರು. ಮನಸ್ಸಿಗೆ ಕಾದ ಪಟ್ಟಿ ಇಟ್ಟಂತಾಯಿತು. ನನಗಿಷ್ಟೇ ಯೋಚನೆ, ಅವನು ಹಾಗೆ ಏಕೆ ಹೋದನೆಂದು. ಅವನಿಗೆ ತನ್ನ ಈ ಪರಿಸ್ಥಿತಿಯಲ್ಲಿ ನನ್ನೊಡನೆ ಮಾತನಾಡಲಾಗಲಿ, ಭೆಟ್ಟಿಯಾಗಲಿಕ್ಕಾಗಲಿ ಮನಸ್ಸಿದ್ದಿರಲಿಕ್ಕಿಲ್ಲ. ಅಥವಾ ನನ್ನ ಬಗೆಗೆ ಇನ್ನೇನು ಭಾವಿಸಿಕೊಂಡನೋ ! ಆ ದಿನ

ಅದೇನೋ ನಿರಾಶೆಯ ಅನಿರ್ವಚನೀಯ ಸ್ಥಿತಿಯಲ್ಲಿ ಜೋಲುಮೋರೆ ಹಾಕಿ ಕೊಂಡು ಮುನೆಗೆ ಹಿಂತಿರುಗಿವೆ.

ಆ ನಾಲ್ಕುನೂರಾ ಎಂಬತ್ತು ನಿನ್ನೆ ಮೊನ್ನೆ ಎನ್ನುವಷ್ಟು ಸನಿಹವಾಗಿ, ಆ ಘಟನೆ ನೆನಪಾದಾಗಲೆಲ್ಲ ನನ್ನ ಹೃದಯ ಹಿಂಡಿದಂತಾಗುತ್ತಿತ್ತು.

ದೈವದ ಮೇಲೆ ಭಾರಹಾಕಿ ಬದುಕ್ತಿರುವ ದಿನಗಳನ್ನು ಆಸ್ತಿಕನಂತೆ ದೂಡುತ್ತಿದ್ದ. ಅಂತಹ ನಿಮಿಷಗಳೆಲ್ಲ ರೋಮಾಂಚಕ ಸನ್ನಿವೇಶಗಳು.

ಒಂದು ವೇಳೆ ಆ ಮನುಷ್ಯ ನಾಸ್ತಿಕನಾಗಿದ್ದರೆ ಅವನ ಆಯುಷ್ಯದ ದಿನಗಳೂ ಕಡಿಮೆಯಾಗಬೇಕಿತ್ತಲ್ಲವೇ ? ಅವೆಲ್ಲ ಅಸ್ಪಷ್ಟ ಜಗತ್ತಿನ ಅನಿಶ್ಚಿತ ಘಟನೆಗಳು.

ಸರಿ ! ಅಂದು ಕೈಕೊಟ್ಟು ಓಡಿದ ಅದೇ ಆಸಾಮಿ ಇಂದು ಪುನಃ ತಾನಾಗಿಯೇ ಬರುವಂತೆ ನನ್ನ ಹತ್ತಿರ ಬಂದಿದೆ. ರಾತ್ರಿ ಒಂಬತ್ತು ಘಂಟೆಗೂ ಮೀರಿರುವದರಿಂದ ಸುಳಿಗಾಳಿ ಸುಳಿಸುಳಿಯಾಗಿ, ಮೈಮೇಲೆಲ್ಲ ಧೂಳು ಸವಾರಿ ಸರಿಮೋಡುತ್ತಿತ್ತು. ಪ್ರಕೃತಃ ಅಂದಿನ ರವಿವರ್ಮನಲ್ಲವಾಗಿದ್ದರೂ ಮಾನಸಿಕವಾಗಿ ಆ ರವಿವರ್ಮನ ಗುರುತು ಬೇಗನೆ ಸಿಗುತ್ತಿತ್ತು. ಇಷ್ಟರಲ್ಲಿಯೇ ಮಾರ್ಗದ ಗುಂಟ ನಾವು ಸುಮಾರು ದೂರ ಸಾಗಿ ಬೈಲು-ಗುಡ್ಡಗಳ ಸಮೀಪಕ್ಕೆ ಬಂದಿದ್ದೆವು. ಅಲ್ಲಲ್ಲಿ ಗುಡಿಸಲುಗಳಲ್ಲಿಯ ಸೂರು ದಾಟಿ ದೀಪದ ಅಸ್ತಿತ್ವಕ್ಕೆ ರುಜು ಎನ್ನುವಂತೆ ಮಿಣುಕು ದೀಪದ ಮಂದ ಛಾಯೆ ಕಣ್ಣಿಗೆ ಬೀಳುತ್ತಿತ್ತು.

ಆದರೆ ಈಗ ರವಿ ಮೊದಲಿಗಿಂತಲೂ ಉಗ್ರವಾಗಿ, ಜೋರಾಗಿ ಸಿಗರೇಟಿನ ಧೂಮಪಾನ ನಡೆಸುತ್ತಿರುವಂತೆ ಕಾಣುತ್ತಿತ್ತು. ಏಕೋ ಮುಗಿಯುತ್ತಿರುವ ಸಿಗರೇಟಿಗೇನೇ ಇನ್ನೊಂದನ್ನು ಹಚ್ಚುತ್ತಿದ್ದ. ತಮಾಷೆಗೆಂದು ನಾನೊಂದು ಮಾತು ಹಾರಿಸಿಬಿಟ್ಟೆ.

" ರವಿ, ದಿನಕ್ಕೆಷ್ಟು ಸಿಗರೇಟ್ ಎಂದು ಲೆಕ್ಕ ಇಟ್ಟಿದ್ದೀಯಾ ? "

" ಇಟ್ಟು ನನಗೇನಾಗಬೇಕು ? "

" ನೀನೆಷ್ಟು ಊಟ ಮಾಡುತ್ತೀಯೆಂದು ಗೊತ್ತಿದೆಯೆ ? "

" ಗೊತ್ತಿದೆ-ಗೊತ್ತಿಲ್ಲ, ಹಸಿವೆ ಮುಗಿಯುವತನಕ ಬೇಕೆನ್ನುವಷ್ಟರತನಕ ಊಟ ಮಾಡುವದು. "

" ಈ ತತ್ವ ಎಂದಿನಿಂದ ಬಂತು ? "

"ಹುಚ್ಚಾ, ಅದೇನನ್ನು ನೀನು ಕೇಳುತ್ತಿರುವದು? ಅವೆಲ್ಲ ಅಂಕೆ ಸಂಖ್ಯೆಗಳಿಂದ ನನಗೇನಾಗಬೇಕು? ಸಿಕ್ಕಾಗ ಊಟ ಎಂಬೇ ಗೃಹಿಕೆ ಹೊರತು, ಸಿಗದಿದ್ದಾಗ ಹಸಿವೆಯಿದೆ ಎಂದು ಯೋಚಿಸುವದಿಲ್ಲ. ಅದು, ಸಿಗದ ವಸ್ತುವನ್ನು ಕನಸಿನ ಸಾಮ್ರಾಜ್ಯದಲ್ಲಿ ಹತ್ತಿರ ಬಚ್ಚಿಟ್ಟುಕೊಂಡು ಸಮಾಧಾನ ಮಾಡಿಕೊಂಡಂತೆಯೆ! ಈಗ ಸಿಗರೇಟೆ ಒಂದೇ ನನ್ನ ಪಾಲಿಗೆ ವಧೂ-ವರ, ಗೆಳೆಯ-ಸಹೃದಯ ಎಲ್ಲರೂ. ಕಾವೇರಿ ನದಿಯಲ್ಲಿ ಧುಮುಕಬೇಕೆಂದು ಹೋದಾಗ ಕಿಸೆಯಲ್ಲಿಯ ಸಿಗರೇಟಿನ ನೆನಪಾಗಿ, ಸೇದುವ ಇಚ್ಛೆಯಾಗಿ ತಿರುಗಿ ಬಂದು, ಹತ್ತಿರದ ಬಂಡೆಯ ಮೇಲೆ ಕುಳಿತುಕೊಂಡಿದ್ದೆ. ಹೆಚ್ಚುಕಡಿಮೆ ಉಳಿಯಬೇಕೆಂಬೇ ಆಶೆಯಿರುವದಾದರೂ ಅದು ಮಾತ್ರ ಬರಿ ಸಿಗರೇಟ ಸೇದುವದಕ್ಕೆಂದೆ! ನನ್ನೊಡನೆ ಸಿಗರೇಟ್ ಇದ್ದಾಗಲೆಲ್ಲ ಹತ್ತು ಕೈಗಳು ನನಗಿದ್ದಂತೆ. ಇಲ್ಲದಿದ್ದಾಗ ಮಾತ್ರ ನಾನು ಭಿಕಾರಿ. ಹರುಕು ಗಡ್ಡದ ಮುದುಕ ಸನ್ಯಾಸಿ ಎಂಬೆಲ್ಲ ಕಲ್ಪನೆಗಳು ಬಂದುಬಿಡುತ್ತವೆ. ಒಬ್ಬನಲ್ಲೆ ಇದ್ದೆ, ಹಿಂದಿನದೆಲ್ಲ ಮರೆತು ಆ ದಾರುಣ, ದುರ್ಗಮ ಕೊತ್ತಳಗಳೆಲ್ಲ ನನ್ನಿಂದ ದೂರ ಸರಿದು ನಿಲ್ಲುತ್ತವೆ."

ನನಗೇಕೋ ಹಸಿಹುಣ್ಣು ಹಿಸುಕಿದಂತಾಯಿತು. ನಾನು ಈ ರೀತಿ ರವಿಯನ್ನು ವಿಚಾರಿಸಬಾರದಾಗಿತ್ತು ಎಂದುಕೊಂಡೆ. ಅಲ್ಲೆ ಹತ್ತಿರದಲ್ಲಿಯ ಸೀಟಿನ ಮೇಲೆ ಕುಳಿತುಕೊಂಡೆವು. ನನಗೆ ಬೇಸರವಾಯಿತೆಂದು ರವಿ ತಿಳಿದಿರಬೇಕು.

"ಶ್ರೀನಾಥ, ಏಕೆ, ನನ್ನೊಡನೆ ಬರುವದೂ ಬೇಸರವಾಯಿತೆ ?"

"ನಾನು ಹಾಗೆಂದೆನೆ ?"

"ಮತ್ತೆ ಮೌನವಾಗಿ ಬಿಟ್ಟೆಯಲ್ಲ? ಶ್ರೀನಾಥ, ಬೇರೇನೂ ತಿಳಿದು ಕೊಳ್ಳಬೇಡ. ಹಸಿದ ಗಾಯಗೊಂಡ ಹುಲಿಯಂತೆ ಕಂಡವರ ಮೇಲೆ ಕಾರಣ ವಿಲ್ಲದೆ ಸಿಡುಕಿ ಬೀಳುವದು ಈಗಿನ ನನ್ನ ಸ್ವಭಾವವಾಗಿಬಿಟ್ಟಿದೆ. ತಪ್ಪೆಂದು ತಿಳಿಯುವಷ್ಟು ಜ್ಞಾನವಿದ್ದರೂ ಅದನ್ನು ತಿದ್ದಿಕೊಳ್ಳುವಷ್ಟು ನನ್ನ ಹೃದಯ ದುರ್ಬಲವಾಗಿಬಿಟ್ಟಿದೆ. ಅದರಲ್ಲಿಯೂ [illegible] [illegible] ಮುಟ್ಟಿದರಂತೂ ಆ ಹಾವು ಮತ್ತೆ ಹೆಡೆ. [illegible] [illegible] [illegible] [illegible] ಬಿಡುವದಿಲ್ಲ. ಅದೇಕೋ ಹಾಗೆ! ಅಥವಾ ಎಲ್ಲರಿಗೂ ಹೀಗೆಯೇ? ಅದನ್ನು

ತಿಳಿಯುವಷ್ಟು ಸಹನೆಯೂ ಇಲ್ಲ; ಶಕ್ತಿಯೂ ಇಲ್ಲ. ನಾನೀಗ ಹರುಕು ಬಾಯಿಯಿಂದ ಏನಾದರೂ ಹೇಳ್ತಾ ಅಂದಿದ್ದರೆ ಗೆಳೆಯನೆನ್ನುವ ಸಹೃದಯತೆ ಯಿಂದ ಅದೆಲ್ಲವನ್ನೂ ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು. ಬದಲಿಗೆ ತಾತ್ಸಾರ ಮಾತ್ರ ಮಾಡಬೇಡ."

ಆತನ ನಡುಗುವ ಧ್ವನಿಯ ಆ ಕೊಂಕು ನುಡಿಗಳು ನನಗೆ ಕಣ್ಣೀರು ತರಿಸಿಬಿಟ್ಟುವು. ಏಕೋ ನನ್ನ ಹಾಗೂ ಅವನ ನಡುವಿನ ಬಾಂಧವ್ಯ ನಿಮಿಷ ನಿಮಿಷಕ್ಕೂ ಹೆಚ್ಚು ಹತ್ತಿರವಾಗುತ್ತಿತ್ತು. ನಾನು ಕೇಳಿದೆ, "ರವಿ, ಹೀಗೇಕೆ ಬದಲಾದೆ ?"

ತಡವಿಲ್ಲದೆ ಉತ್ತರ ಬಂದಿತು. "ನಿನಗೇನು ಕಾಣುವುದು ?"

"ರವಿ, ಹುಚ್ಚು ಮಾತಿನಿಂದ ಇರಿಯಬೇಡ. ಈ ಹಿಂದೆ ನೀನು ಭೆಟ್ಟಿ ಯಾವಾಗ ಅದೇಕೆ ತಿಳಿಸದೆ ಹೋದೆ ?"

"ಸತ್ಯವಾಗಿಯೂ ಆ ಕಾಲಕ್ಕೆ ನನ್ನನ್ನು ಯಾರೂ ಕಾಣುವುದು ಬೇಡ ವಾಗಿತ್ತು."

"ಹಾಗೇಕೆ ?"

"ಅದೇನೋ! ಅದು ಅವ್ಯಕ್ತ ಹೃದಯದ ಘಾಸಿಯಾದುದರಿಂದ ನನಗೆ ಹೇಳಲು ಸಾಧ್ಯವೂ ಇಲ್ಲ; ಹೇಳುವ ಸಾಹಸವೂ ಇಲ್ಲ."

"ಈಗಲೂ ಹಾಗೆಯೇ ಪಲಾಯನ ಮಾಡುವಿಯೋ ?"

"ಇನ್ನೂ ಯೋಚಿಸಿಲ್ಲ ಶ್ರೀನಾಥ! ನನ್ನ ಹೃದಯ ಹೊರಲಾರದಷ್ಟು ಭಾರವಾಗಿದೆ. ಅದನ್ನು 'ರಾಂ....' ಮಾಡಿ ಇನ್ನು ಹೊರಡುವ ಯೋಚನೆ ಮಾಡಬೇಕು."

"ಒಂದು ಮಾತು ಕೊಡಬೇಕು ಶ್ರೀನಾಥ! ನನ್ನಪ್ಪಣೆ ಪಡೆದ ಹೊರತೂ ನೀನೆಲ್ಲಿಯೂ ಹೋಗುವುದಿಲ್ಲವೆಂದು."

"ಅದೇಕೆ ಅಂತಹ ಬಿಗುಬಿನ ಬಂಧನದ ಬೇಡಿ ?"

"ನನ್ನ ಸಮಾಧಾನಕ್ಕೆಂತ."

"ಅದೇ ನನಗೆ ತೊಂದರೆಯಾದರೆ ?"

"ನನಗಾಗಿ ಸಹಿಸಬೇಕು."

"ಅಡ್ಡಿಯಿಲ್ಲ."

" ನಾಳೆ ನಮ್ಮ ಮನೆಯಲ್ಲಿಯೇ ಉಳಿದುಕೊಳ್ಳು. "

" ಬೇಡ. ಈ ಹಾಳು ಮೋರೆ ತೆಗೆದುಕೊಂಡು ಬರಲಾರೆ. ಕ್ಷಮಿಸು. ಸಾಧ್ಯವಿಲ್ಲ. "

" ನೀನು ಹೋಟೇಲಿನಲ್ಲಿಯಾದರೂ ಇರುವೆ ಎಂಬುದಕ್ಕೆ ದೃಢನಂಬಿಗೆ ಏನು ? "

" ಅಂತಹ ವಿಶ್ವಾಸವನ್ನು ಕೊಡಲಿಕ್ಕೆ ನನ್ನೊಡನೆ ಈಗೇನೂ ಇಲ್ಲವಲ್ಲ ! "

" ಕೈ ಕೊಡುವದಿಲ್ಲವಷ್ಟೆ ? "

" ಇಲ್ಲ, ನಿನ್ನಾಣೆಗೂ ! "

" ಹೊಟೇಲು ಬಿಲ್ಲನ್ನು ನೀನು ಕೊಡುವದು ಅಗತ್ಯವಿಲ್ಲ. "

" ನೋಡೋಣ. "

" ಅದಕ್ಕೂ ಸಂಧಿಗ್ಧತೆ ಬೇಡ. "

" ನಾನು ರೂಮು ಬಿಡುವಾಗ ಕೊಡುವದಷ್ಟೆ? ಆ ಕಾಲಕ್ಕೆ ಕುರಿತು ಯೋಚಿಸಿದರಾಯಿತು. "

" ಅದಕ್ಕೇನೂ ಯೋಚನೆಯ ಅಗತ್ಯವಿಲ್ಲ. ನಿನ್ನ ಒಪ್ಪಿಗೆ ಮಾತ್ರ. "

ರವಿ ಮೌನವಾದನು. ಒಪ್ಪಿಕೊಂಡನೆಂದು ನನ್ನ ಮನಸ್ಸಿಗೆ ಸಂತೋಷ ವಾಯಿತು.

ಎಂದಿನಂತೆ ನಿಮಿಷ ತೆರಪಿಲ್ಲದೆ ಬಾಯಲ್ಲಿ ಮಾತ್ರ ಸಿಗರೇಟಿನ ಹೊಗೆ ಬುಸುಗುಡುತ್ತಿತ್ತು. ಒಮ್ಮೊಮ್ಮೆ ನೀರವವಾಗಿ ಕುಳಿತುಬಿಡುತ್ತಿದ್ದನು. ಕರೆದರೂ ಗುರುತಿಲ್ಲದವರಂತೆ ಮಾತಾಡುತ್ತಿರಲೇ ಇಲ್ಲ. ಕಾರಣವನ್ನು ಕೇಳಿದರೂ ಸುಮ್ಮನೇ ರೇಗಿಬೀಳುತ್ತಿದ್ದನು. ಸಿಗರೇಟಿನ ಹೊಗೆಯ ಜಾಡು ಹೊಟ್ಟೆಯಲ್ಲಿ ಸೇರಿ ಕೀಟಲೆ ಕೊಡತೊಡಗಿದುದರಿಂದ ಒಂದೇಸವನೆ ಖಿಕ್ ಖಿಕ್ ಎಂದು ಕೆಮ್ಮತೊಡಗಿದ್ದನು. ಅವನ ಕಣ್ಣುಗಳು ಆ ಕೆಮ್ಮಿನ ರಭಸಕ್ಕೆ ನೀರೊಡೆದಿರ ಬೇಕು. ಸ್ವಲ್ಪ ಸಮಾಧಾನವಾದ ಮೇಲೆ ಅವನೇ ಹೇಳಿದನು. " ಈ ಹಾಳು ಕೆಮ್ಮು ನನ್ನ ಜೀವ ತಿನ್ನತೊಡಗಿದೆ. "

" ಈ ಸಿಗರೇಟಿನ ಪ್ರತಾಪವೇ ಕಾರಣ ನೋಡು. "

" ಏನೆಂದಿ ? "

ಇನ್ನೇನು. ಸ್ವಲ್ಪ ಸಡಿಲಾಗುವದೋ ಎಂದುಕೊಂಡು ನಾನು ಉತ್ತರ ಕೊಡಲಿಲ್ಲ.

" ಈ ಸಿಗರೇಟೇ ಕಾರಣವೆಂದಿಯಲ್ಲಾ ? "

" ಸುಳ್ಳೆಂತಲೆ ? "

" ಅದಕ್ಕಲ್ಲವಯ್ಯಾ, ನನ್ನ ' ಲಕ್ಷ್ಮಿ ' ಅಧಿಕಾರ ನಡೆಸುವ ತನಕ ಈ ಸಿಗರೇಟ್ ನನ್ನ ಬಳಿ ಬರಲು ಹೆದರುತ್ತಿತ್ತು. ಅವಳ ಹೆದರಿಕೆಯಿಂದಲ್ಲ, ಅವಳ ಒತ್ತಾಯಕ್ಕೆ, ಬೇಡುವ ಅವಳ ದೀನ ಕಣ್ಣುಗಳಿಗಾಗಿ ನನ್ನ ಮನಸ್ಸು ಅದನ್ನು ಮುಟ್ಟಲು ಹೆದರುತ್ತಿತ್ತು. ಅವಳು ನನ್ನಿಂದ ದೂರವಾದಂತೆ, ಹೃದಯ ಬರಿದಾದಂತೆ, ಮನಸ್ಸು ಕಠೋರವಾದಂತೆ, ದೇಹ ದಣಿದಂತೆ ಈ ಸಿಗರೇಟ್ ನನ್ನನ್ನು ಒಲಿದು ಕೈ ಹಿಡಿಯಿತು. ನಾವು ಒಲಿದು ಕೈ ಹಿಡಿಯುವ ಹೆಣ್ಣಿಗಿಂತ, ಒಲಿದು ಬಂದ ಹೆಣ್ಣೇ ಹೆಚ್ಚಿನದೆಂದು ಹೇಳುತ್ತಾರೆ ಗೊತ್ತೇ ? ಅದಕ್ಕೂ ಮೀರಿದ ಶೋಚನೀಯ ಸ್ಥಿತಿಯಾಯಿತು ನನ್ನದು. ಒಬ್ಬೊಂಟಿಗ ಜೀವನ; ಯಾರೂ ಹೇಳುವದಕ್ಕಿಲ್ಲ, ಕೇಳುವದಕ್ಕಿಲ್ಲ—ಅನಧಿಕಾರ ಅನಿಯಂತ್ರಿತ ನಿರಂಕುಶ ಪ್ರಭುತ್ವವಾಯಿತು. ಆದರೆ ಇಂದು ಮಾತ್ರ ಯಾವದೂ ಗೊತ್ತುಗುರಿಯಿಲ್ಲದ, ಅನಿಶ್ಚಿತ ಬಯಲಿಗೆ ಬಿಟ್ಟ ಬರದು ಬಾಳಾಗಿದೆ. ಬದುಕಬೇಕೋ, ಬೇಕು ; ಇಲ್ಲವಾದರೆ ಇಲ್ಲ. ಮರುಭೂಮಿಯ ಅಂಚಿಯ ಹಂತದಲ್ಲಿದ್ದೇನೆ. "

" ರವಿ, ಇದೇನು ಹುಚ್ಚುಚ್ಚಾಗಿ ಮಾತನಾಡುತ್ತಿರುವಿ ? ಇಂದ್ರಿಯ ವಿಷಯಾಧೀನ ನೀನು ಎಂದಂತಾಯಿತಲ್ಲ. ನಾವು, ನಮ್ಮ ಮನಸ್ಸು ಗಟ್ಟಿಯಿರುವಾಗ ಇನ್ನುಳಿದ ಕ್ಷುದ್ರ ವಿಷಯಗಳೆಲ್ಲ ನಮ್ಮಲ್ಲಿ ಹೇಗೆ ಆಸುವು ದೊರಕಿಸಿಕೊಳ್ಳಬೇಕು ? "

" ಸರಿ, ಅವು ನಿನ್ನ ತತ್ವ ವಿಚಾರದಲ್ಲಿ. ಆದರೆ ನನ್ನವು ಅವೆಲ್ಲವುಗಳನ್ನು ಮೀರಿ ಹೋದಂತಹವು. ಈಗ ಅವುಗಳ ಸ್ಥಾನ-ಮಾನಗಳನ್ನು ಸಾರಾಸಾರ ವಿಚಾರ ಮಾಡುವಷ್ಟು ಸಹನೆ ನನಗುಳಿದಿಲ್ಲ. "

" ರವಿ, ಏನಾದರೂ ವಿಷಯ ಕೇಳಿದರೆ, ನಿನಗೆ ತಿರಸ್ಕಾರವು ಉಂಟಾಗುವದೋ ? "

" ತಿರಸ್ಕಾರವೆಲ್ಲಿ ಬಂತು ? ತಿರಸ್ಕರಿಸಿಯಾದರೂ ನನಗಿನ್ನು ಏನು ಆಗಬೇಕಾಗಿದೆ ? "

" ನಾನು ಕೇಳುವ ಎಲ್ಲ ವಿಷಯಗಳಿಗೂ ಸಮಾಧಾನವೆಂದರೆ ಉತ್ತರಿಸು ವಿಯಷ್ಟೆ ? ಬೇಸರಪಟ್ಟುಕೊಳ್ಳಬಾರದು."

" ಹೇಳುವ ಮನಸಾದರೆ ಹೇಳುತ್ತೇನೆ."

" ನಿನ್ನ ಲಚ್ಚಿಯ ವಿಷಯವಾಗಿ ಕೇಳಬಹುದೇ ? "

" ನೋಡು, ಇದೂ ನನ್ನ ರೇಗಿಸುವ ಮಾತೆ. ಅವಳು ಲಚ್ಚಿಯಲ್ಲ, ಅವಳು ಲಕ್ಷ್ಮಿ ! ನಾನೊಬ್ಬನೇ ಮಾತ್ರ ಅವಳಿಗೆ, ' ಲಚ್ಚಿ 'ಯೆಂದು ಕರೆಯ ಬಹುದು. "

" ನೋಡು ರವಿ, ನನಗೊಬ್ಬಳು ಲಕ್ಷ್ಮಿಯೆಂಬ ತಂಗಿಯಿದ್ದರೆ ಅವಳಿಗೆ ನಾನು ಪ್ರೀತಿಯಿಂದ ' ಲಚ್ಚಿ 'ಯೆಂದೇ ಕರೆಯುತ್ತಿದ್ದೆ. ಅದು ಯಾರ ಕಣ್ಣಿಗೂ ತಪ್ಪಾಗಲಾರದಷ್ಟೇ ? "

ರವಿ ಮಾತಾಡಲಿಲ್ಲ.

" ಲಚ್ಚಿಯೆಂದರೆ ನಾನೂ ನೀನೂ ಕೂಡಿ ನಿಮ್ಮ ಮನೆಗೆ ಬಂದಾಗ ಚಹ ತಂದು ಕೊಟ್ಟ ಹುಡುಗಿಯಲ್ಲವೇ ? "

ರವಿಯ ಮೋರೆಯಲ್ಲಿ ಬಿಸಿಯುಸಿರು ಇತ್ತು.

" ನಾನೂ ನೀನೂ ಜೊತೆಗೆ ಕುಳಿತಾಗ ' ಇವರಾರು ! ' ಎಂದು ಕೇಳಿದ್ದ ಳಷ್ಟೇ ! ನೆನಪಿದೆಯೇ ? ನೀನು ಹಾಸ್ಯಕ್ಕಾಗಿ ' ಹೆಣ್ಣು ನೋಡಲು ಬಂದವರು ' ಎಂದಿದ್ದೆಯಲ್ಲ. ಮುಗುದೆತನದ ನಾಚಿಕೆಯಿಂದಲೋ ಏನೋ ಅವಳು ಬಾಗಿಲ ಆಚೆ ಮರೆಯಾಗಿದ್ದಳಲ್ಲ. "

ರವಿಯೇಕೋ ಅದುರುವ ತುಟಿಯಿಂದಲೇ ಹೇಳತೊಡಗಿದನು.

" ಅದೇ ಲಚ್ಚಿ ಇನ್ನೂ ಇದ್ದಾಳೆ—ಹಾಗೆನ್ನುವದಕ್ಕಿಂತ ಬದುಕಿದ್ದಾಳೆ ಎನ್ನಬಹುದು. ಆಕೆ ಈಗ ಗರತಿಯಾಗಿ, ಬಚ್ಚೋಲೆ ಗೌರವ್ವಳಾಗಿ ಆದಾರದೋ ಮನೆಯ ಬಾಗಿಲ ಗುಡಿಸುವವಳಾಗಿರಬೇಕು. ಹುಟ್ಟಿಬಂದ ತಪ್ಪಿಗೆ ಬದುಕುವ ಆಶೆಗಾಗಿ ದಿನಗಳನ್ನು ದೂಡುತ್ತಿರಬೇಕು. "

ನನ್ನ ಮೈಗೆ ಕುದಿನೀರು ಚೆಲ್ಲಿದಂತಾಯಿತು. ಹಲವು ನಿದರ್ಶನಗಳು— ರವಿ-ಲಚ್ಚಿಯರ ನಡುವೆ ಹತ್ತಿರದ ಬಾಂಧವ್ಯವಿತ್ತು ಎನ್ನುವದಕ್ಕೆ— ನನಗೆ ಗೊತ್ತಿದ್ದುವು. ನಾನು ಅವನು ಕೂಡಿದ್ದ ದಿನಗಳಲ್ಲಿ ರವಿ ಉಪಯೋಗಿಸುತ್ತಿ ರುವ ಪ್ರತಿಯೊಂದು ಟಾವೆಲ್ಲು ( ಕರವಸ್ತ್ರ ) ಲಚ್ಚಿ ಕೊಟ್ಟುದಾಗಿರಬೇಕು.

ಪ್ರತಿಯೊಂದು ಟವೆಲ್ಲಿನ ಮೂಲೆಗೂ ಕಸೂತಿಯಿಂದ ಬಿಡಿಸಿದ ಹೂವಿನಡಿಯಲ್ಲಿ ಅಸ್ಪಷ್ಟವಾಗಿ ಇಂಗ್ಲಿಷಿನಲ್ಲಿ 'ಲಕ್ಷ್ಮಿ'ಯೆಂದು ಬರೆಯಲ್ಪಟ್ಟಿತ್ತು. ಸಹಜವಾಗಿ ನೋಡಿದರೆ ನನಗದು ಬರೀ ಹೂವೆಂದು ಭಾಸವಾಗುತ್ತಿತ್ತೇ ಹೊರತು ಹೂವಿನ ಮರೆಯಲ್ಲಿ ಏನೋ ಇದೆಯೆಂದು ಕಲ್ಪನೆ ಸಹ ಬರುತ್ತಿರಲಿಲ್ಲ. ಅವನ್ನು ಮೊದಲಿಗೆ ನಾನೇ ಗೊತ್ತು ಹಚ್ಚಿದೆ.

ಒಮ್ಮೆ ಒಂದು ಸಂದರ್ಭದಲ್ಲಿ ರವಿ ನನ್ನ ರೂಮಿನಲ್ಲಿ ಟವೆಲ್ಲನ್ನು ಬಿಟ್ಟು ಹೋಗಿದ್ದ. ಮೊದಲಿಗೆ ಅದು ಯಾರದೆಂದು ಗುರುತಿಸುವುದಕ್ಕೆ ತೊಂದರೆಯಾಯಿತು. ಯೋಚನೆ ಮಾಡುತ್ತ ಕುಳಿತಾಗ ಹೂವಿನ ಮರೆಯಲ್ಲಿ ಮೂಡಿದ್ದ ಅಸ್ಪಷ್ಟ ಅಕ್ಷರಗಳನ್ನು ನಿರೀಕ್ಷಿಸಿದೆ. ಅದು 'ಲಕ್ಷ್ಮಿ'ಯೆಂದು ಗೊತ್ತಾಯಿತು. ಕೆಲವು ಸಂದಿಗ್ಧ ವೇಳೆಯಲ್ಲಿ 'ಲಕ್ಷ್ಮಿ' ಎನ್ನುವ ಶಬ್ದ ನಾಲ್ಕಾರು ಸಾರಿ ರವಿಯ ಬಾಯಲ್ಲಿ ಬಂದಿತ್ತು. ಟವೆಲ್ಲು ರವಿಯದೆಂದು ನಿಶ್ಚಯಿಸಿ ನಾನು ಬೇರೆ ಕಡೆಗೆ ಇಟ್ಟೆ. ರವಿ ಹೊರಟು ಹೋದ ತುಸು ಹೊತ್ತಿನಲ್ಲೇ ತಿರುಗಿ ಬಂದನು. ಹುಡುಕುವ ಕಣ್ಣುಗಳಿಂದ ನನ್ನ ಕೋಣೆಯನ್ನು ಅರಸಿದನು. ನನಗೆ ಸಂಶಯದೊಡನೆ ನಗು ಬಂದುಬಿಟ್ಟಿತು.

"ರವಿ, ಏಕೆ ಅಷ್ಟು ಆತುರದ ನೋಟ?" ಎಂದೆ.

"ಏನಿಲ್ಲವಯ್ಯಾ."

"ಸುತ್ತಲೂ ನೋಡುತ್ತೀಯಲ್ಲ?"

"ಸುಮ್ಮನೆ."

"ಏನೋ ಹುಡುಕುವಂತಿದೆ."

"ಹೌದು: ನೀನು ಒಂದು ಟವೆಲ್ ಕಂಡೆಯಾ?"

"ಯಾರದು?"

"ನನ್ನದೆ. ನನ್ನ ಟವೆಲ್ಲೊಂದು ಕಳೆದಿದೆ."

"ಎಲ್ಲಿಯಾದರೂ ಕಳೆದಿರಬಹುದು."

"ಇಲ್ಲ. ನಾನು ಆಗ ಇಲ್ಲಿ ಕುಳಿತಾಗಲೇ ಬಿಟ್ಟು ಹೋಗಿರಬೇಕು."

"ನಾನೇನೂ ನೋಡಿಲ್ಲ. ಒಂದು ಮೂರಾಣೆಯ ಟವೆಲ್ಲು--ಅಷ್ಟಕ್ಕೆ ಪರದಾಡುವೆ? ಬೇರೆ ಕೊಂಡರಾಯಿತು."

"ಅಯ್ಯೋ! ಹುಚ್ಚ. ಎಂಥ ಬಂಗಾರದಂತಹ ಟವೆಲ್ಲು ಅದು!"

" ಬಂಗಾರವನ್ನೇನೂ ಕಟ್ಟಿರಲಿಕ್ಕಿಲ್ಲವಲ್ಲ. "

ನನಗೆ ನಗು ಬಂದುಬಿಟ್ಟಿತು. ನಗೆಯೇ ಅವನ ವಿಶ್ವಾಸಕ್ಕೆ ಕಾರಣವಾಗಿ,

" ಆ ಟಾವೆಲ್ಲಿನಲ್ಲಿ ಚಿಲ್ಲರೆ ರೊಕ್ಕವಿತ್ತಯ್ಯಾ ! "

" ಕಳೆದುದು ಸಿಗುವಂತಿದೆಯೆ ? ಜೇರೆ ಕೊಂಡರಾಯಿತು. "

ಅವನ ಮೋರೆ ಕೆಂಪಾಯಿತು.

" ನೀನು ಕೊಡುತ್ತೀಯೋ ಇಲ್ಲವೋ ? "

" ಇದ್ದರೆ ಕೊಡುವದಷ್ಟೇ. "

ಪುನಃ ಮೊದಲಿನಂತೆಯೇ ಕೇಳಿದನು. ಮೋರೆ ಊದಿಕೊಳ್ಳತೊಡಗಿತ್ತು. ಒಮ್ಮೆ ಸಿಟ್ಟು ಇನ್ನೂ ಮುಂದುವರಿದರೆ ಬೆನ್ನಿಗೆ: ಬಿಡಲೂ ಹಿಂದು ಮುಂದೆ ನೋಡಲಿಕ್ಕಿಲ್ಲವೆಂದು ತಿಳಿದು ಟಾವೆಲ್ಲು ಕೊಟ್ಟೆ. ಹಸಿದ ಕಣ್ಣುಗಳಿಂದ ಟಾವೆಲ್ಲನ್ನು ನೋಡಿಕೊಂಡು ಕಿಸೆಂಪಲ್ಲಿ ತುರುಕಿಕೊಂಡ. ಟಾವೆಲ್ಲಿನಲ್ಲಿ ರೊಕ್ಕನೆಲ್ಲಿಯೆಂದು ಕೇಳಿದಾಗ ಇದೆಯೆನ್ನುತ್ತ ರಭಸದಿಂದ ಹೊರಟು ಹೋದ.

ಇನ್ನೊಮ್ಮೆ ಮೇಲಿನ ಪ್ರಸಂಗವಾದ ತಿಂಗಳೊಪ್ಪತ್ತಿನಲ್ಲಿ ಅವನ ರೂಮಿಗೆ ನಾನು ಹೋಗಿದ್ದೆ. ಅವನ ಪುಸ್ತಕವೊಂದನ್ನು ಓದುತ್ತಿದ್ದೆ. ಪುಸ್ತಕದ ಕೊನೆಯ ಭಾಗದಲ್ಲಿ ಒಬ್ಬ ಹೆಣ್ಣು ಹುಡುಗಿಯ ಫೋಟೋ ಇತ್ತು. ಅದೇ ಆ ಲಂಗ ಉಟ್ಟ ಲಚ್ಚಿಯ ಫೋಟೋ. ಸೀರೆಯುಟ್ಟಿದ್ದಾಳೆ. ಅವಳೀಗ ಹೆಣ್ಣು ಹುಡುಗಿಯಲ್ಲ. ಹೆಂಗುಸು. ಮೋರೆಯ ಮೇಲೆ ನಾಚಿಕೆ ಮುಗುಳುನಗೆ ಕೂಡಿ ಕಣ್ಣುಗಳು ಅರ್ಧ ಮುಚ್ಚಿವೆ. ಸೂರ್ಯನನ್ನು ನೋಡಿದಾಗ ನಮ್ಮ ಕಣ್ಣುಗಳು ಹೇಗಾಗುತ್ತಿವೆಯೋ ಅಂತೆಯೇ. ನೋಡಿದೆ—ಕೆಳಬದಿಯಲ್ಲಿ " With best wishes from Lachi ( ಶುಭಾಶಯವನ್ನು ಕೋರಿ—ಲಚ್ಚಿ ) " ಎಂದು ಬರೆದಿತ್ತು. ಅದು ಲಚ್ಚಿ ಬರೆದುದಲ್ಲ. ತನ್ನ ಸಮಾಧಾನಕ್ಕೆಂದು ರವಿ ತಾನೇ ಬರೆದುಕೊಂಡಿದ್ದಾನೆ. ತರುಣ ಪ್ರೇಮಿಯ ಹುಚ್ಚು ಕಲ್ಪನೆಯ ವಾಮನಾವತಾರಕ್ಕೆ ನಗೆ ಬಂತು. ಆಗ ರವಿಯನ್ನು ನೋಡಿದೆ. ಅವನು ಅರ್ಥಶಾಸ್ತ್ರದ ಟಿಪ್ಪಣಿ ತೆಗೆಯುತ್ತಿದ್ದ. ಮುಂಗುರುಳು ಗಾಳಿಯ ರಭಸಕ್ಕೆ ಹಾರಾಡುತ್ತಿತ್ತು. ಅವನು ಬರೆಯುವುದರಲ್ಲೇ ತಲ್ಲೀನನಾಗಿದ್ದ. ಆಗ ಅವನ ಮೋರೆಯನ್ನು ನೋಡಿದರೆ ' ನಿರುಪದ್ರವಪ್ರಾಣಿ ' ಎನ್ನಬಹುದಾಗಿತ್ತು. ಅಷ್ಟು ಸೌಮ್ಯವಾಗಿ ಕಾಣು

ತ್ತಿದ್ದ. ಸ್ವಲ್ಪ ರಭಸದಿಂದಲೇ " ರವೀ " ಎಂದೆ. ತಲೆಯೆತ್ತಿದ ಏನು ಎನ್ನುವಂತೆ ತಲೆದೂಗಿದ.

" ನೀನು ಈ ರೀತಿ ನನಗೆ ಮೋಸ ಮಾಡುವುದೇ ? "

ಅವನಿಗೆ ನಾನೆಂದುದು ಸರಿಯಾಗಿ ತಿಳಿದಿರಲಿಕ್ಕಿಲ್ಲ. ನನ್ನ ಕಡೆಗೆ ನೋಡಿದ.

" ನನಗೂ ಕಣ್ಣು ಕಟ್ಟಿದೆಯಲ್ಲಾ ? "

ಆಗವನು ನೇರವಾಗಿ " ಏನು ? " ಎಂದ.

" ಈ ರೀತಿ ಎಂದಿನಿಂದ ಕಲಿತೆ ? "

" ಏನು ? ಹೇಳುವುದಾದರೂ ಸರಿಯಾಗಿ ಹೇಳು. "

ಕಡೆಗಾಗ ಸಮೀಪ ಬಂದ. ಫೋಟೋ ತೋರಿಸಿದೆ. ಕೋಟಿನ ಮಾಲು ಸಹಿತ ನಿನ್ನ ಕಕ್ಕಸಂತಾದ ರವಿ. ಮತ್ತೂ ನನಗೆ ಕಣ್ಣು ಕಟ್ಟುವದಕ್ಕೆ " ಅದು ಆ ಹುಡುಗಿ ಲಕ್ಷ್ಮಿಯದೋ. ಯಾವಾಗಲೋ ನೋಡುವದಕ್ಕೆಂದು ತೆಗೆದು ಕೊಂಡಿದ್ದೆ. ಪುಸ್ತಕದಲ್ಲಿಯೇ ಉಳಿದುಬಿಟ್ಟಿದೆಯೆಂದು ಕಾಣುತ್ತದೆ. " ಎಂದು ಬುದ್ಧಿವಂತಿಕೆಯಿಂದ ಪಾರಾಗಲು ಯತ್ನಿಸಿದ. ನಾನು ನಗೆಯೊಡನೆ ಹೇಳಿದೆ.

" ನಾನು ಯಾರು ಗೊತ್ತೆ ರವಿ? ನನಗೆ ಸಮಾಧಾನ ಮಾಡಲು, ನನ್ನಿಂದ ನಿಜ ವಿಷಯವನ್ನು ಮುಚ್ಚಿಡಲು ನೀನು ಈ ರೀತಿ ಸುಳ್ಳು ಪ್ರಾಸದ ಪ್ರಾಣಾಯಾಮದ ಉತ್ತರ ಕೊಟ್ಟೆಯಲ್ಲಾ—ಕಲಿತ ಬುದ್ಧಿವಂತಿಕೆಯನ್ನು ಖರ್ಚು ಮಾಡಿದೆ. ಆ ದಿನ ಲಕ್ಷ್ಮಿ ಕೊಟ್ಟ ಆ ಟಿಪ್ಪಣಿಗೆ ನೀನು ಬಲಿಯಾದಾಗಲೇ ನನಗೆ ಗೊತ್ತು—ನಡುವನ್ನು ಏನೋ ನಡೆದಿದೆಯೆಂದು. ಇವತ್ತು ಈ ಫೋಟೋ ನನ್ನ ಪರವಾಗಿ ಸಾಕ್ಷಿ ಹೇಳಿ ನಿನ್ನ ಅಪರಾಧವನ್ನು ಸ್ಥಿರೀಕರಿಸಿತು ! ' ಉಪಕಾರವನ್ನು ಕೇಳಿ-ಲಕ್ಷ್ಮಿಯಿಂದ '—ಅದೂ ನೀನೇ ಬರೆದುದು. ನಿನ್ನ ಕೈಯಿಂದಲೇ ನೀನೇ ಅಪರಾಧವನ್ನು ಒಪ್ಪಿಕೊಂಡಂತಾಯಿತು. ಹೇಳು, ನೀನೇ—ಮ್ಯಾಜಿಸ್ಟ್ರೇಟನಾಗಿದ್ದರೆ ಇಷ್ಟರಿಂದ ಏನು ಕೊಡುತ್ತಿದ್ದೆ ? "

ರವಿ ಉತ್ತರ ಕೊಡಲಿಲ್ಲ. ಅವನ ಮುಖಮುದ್ರೆ ಗಂಭೀರವಾಯಿತು. ನನ್ನದೇ ಇಷ್ಟರಿಂದ ಆಗಿದ್ದರೆ ಅದು ಹೀಗೆ: " ರವಿ ಲಕ್ಷ್ಮಿಯನ್ನು ಪ್ರೀತಿಸುತ್ತಾನೆ. " ನಾನು ನಿಜವಾಗಿಯೂ ಬಹಳ ಮೇಲೆ ಹೊರಟ್ಟಿದ್ದೆ ಅದರ ಉತ್ತರ ಮನಸ್ಸನ್ನು ಪಾಲಿಸುತ್ತಿದ್ದೆ.

ಈ ನನ್ನ ನಿಲುವು ನಮ್ಮಿಬ್ಬರ ಗೆಳೆತನವನ್ನು ಎರಡು ಮಡಿಯಷ್ಟು ಬಲಪಡಿ

ಸಿತು. ನಾವು ಪರೀಕ್ಷೆ ಮುಗಿಸಿ ಮನೆಗೆ ಹೋಗುವಾಗ್ಗೆ ರವಿ ಹೇಳಿದ: "ನಮಗಿಷ್ಟು ಬಟ್ಟೆ ಖರೀದಿ ಮಾಡಬೇಕಿತ್ತು."

"ನಿನಗೂ ಲಚ್ಚಿಗೂ ಕೂಡಿಯೋ?"

"ಹೋಗೋ, ಯಾವಾಗಲೂ ಹುಚ್ಚನ ಹಾಗೆ ಹಾಸ್ಯ ಮಾಡುತ್ತಿರುವವಿ?"

"ಹಾಗಾದರೆ ನನ್ನ ಅವಶ್ಯಕತೆಯಿಲ್ಲ."

"ಏ! ನೀನೂ ಬರಬೇಕು."

"ಲಚ್ಚಿಗೂ ಬ್ಲೌಜಿಗೆ ಒಂದು ಪೀಸು ಆರಿಸುವದಾದರೆ...."

"ಬಾ, ಹೇಳುತ್ತೇನೆ."

ಎಂದು ಕೈ ಹಿಡಿದು ಎಳೆದುಕೊಂಡು ಹೋಗಿದ್ದ.

ರವಿಗೆ ಬಟ್ಟೆಯಾರಿಸಿ, ತೆಗೆಸಿ ಹರಿಸಿ ಬಿಲ್ಲು ಮಾಡಿಸಿಯಾಯಿತು. ಬ್ಲೌಜಿಗೆ ಎರಡು ಪೀಸು ತೆಗೆದುಕೊಳ್ಳಬೇಕಲ್ಲವೇ? ಎಂದು ನನ್ನನ್ನು ನೋಡಿದ. ನಾನು ಬೇಡವಯ್ಯಾ ಎಂದು ದೊಡ್ಡದಾಗಿಯೇ ಹೇಳಿದೆ. ಅವನು ನನ್ನನ್ನು ದೃಷ್ಟಿಸಿ ನೋಡಿದ. "ದೊಡ್ಡಕ್ಕೆ ಕೂಗಬೇಡ; ಬೇರೆ ಇದ್ದವರಿಗೂ ಗೊತ್ತಾಗಿ ನಗೆಗೀಡಾಗಬಹುದು" ಎಂಬಂತೆ. ನಾನೂ ಅವನೂ ಕೂಡಿಯೇ ಅರ್ಧ ತಾಸು ಚರ್ಚೆ ಮಾಡಿ, ಬೆವರು ಸುರಿಸಿ ಎರಡು ಉತ್ತಮ—ಒಂದು ಸಿಲ್ಕ್, ಒಂದು ಲಿನನ್ ಪೀಸನ್ನು ಆರಿಸಿ ಬರಿಸಿದೆವು. 'ಜಾರ್ಜೆಟ್ ಸೀರೆ ಬೇಡವೆ?' ಎಂದುದಕ್ಕೆ ಹುಸಿಕೋಪದಿಂದ ರವಿ ಹೊಟ್ಟೆಯಲ್ಲಿಯೇ ನಕ್ಕಿದ್ದನು. ಆ ವ್ಯಾಪಾರಿಗೆ ಅಷ್ಟೇ ಹೇಳಿದ್ದೇ ಹೆಚ್ಚಾಯಿತು. ಜಾರ್ಜೆಟ್ ಸೀರೆಯ ಲಡಿಯನ್ನೇ ತಂದು ನಮ್ಮೆದುರಿಗೆ ಹರವಿಬಿಟ್ಟ. ಗಾಣಕ್ಕೆ ಕೈಕೊಟ್ಟವನಾದ್ದರಿಂದ ತಪ್ಪಿಸಿಕೊಳ್ಳಲು, "ಈ ಸಲ ಬೇಡ. ಮನೆಯಲ್ಲಿ ಹೆಣ್ಣುಮಕ್ಕಳನ್ನು ಒಪ್ಪಿಸಿಯೇ ಇನ್ನೊಮ್ಮೆ ಬರುತ್ತೇವೆ" ಎಂದು ಅನುಭವಿಕ ಸಂಸಾರಿಯೊಂದಿಗನಂತೆ ಅಂದುಬಿಟ್ಟಿದ್ದೆ. ರವಿ ನನ್ನ ಹುಚ್ಚಾಟಿಕೆಗೆ ಹಲ್ಲುಕಡಿದಿರಬೇಕು.

ಅವನು ನನ್ನನ್ನು ಬಿಟ್ಟು ಊರು ಸೇರುವಾಗಲೂ 'ಉಪಿತ್ತು ಉಪ್ಪು ಇರಲಿ' ಎನ್ನುವಂತೆ "ಬ್ಲೌಜು ಪೀಸ ಹೊಲಿಸಲು ಟೇಲರನನ್ನು ಹುಡುಕಲೂ ನಾನು ಬರಬೇಕ?" ಎಂದೆ. ತಿರುಗಿ ಉತ್ತರವೆಂದು ಜಬರಾಗಿ ಬೆನ್ನಿಗೆ ಗುದ್ದು ಕೊಟ್ಟಿದ್ದ.

ಹೀಗೆ ಹಲವು ಸನ್ನಿವೇಶಗಳು ನಮ್ಮಿಬ್ಬರ ಸಂಬಂಧವನ್ನು ತೀರ ಬಲವಾಗಿ ಬೆಸೆದು ಬಿಟ್ಟಿತ್ತು.

ನಾವಿನ್ನೂ ಅದೇ ಕಲ್ಲು ಮಂಚದ ಮೇಲೆಯೇ ಹಾಗೆಯೇ ಕುಳಿತಿದ್ದೆವು. ರಾತ್ರಿ ಹೆಚ್ಚುತ್ತಾ ಹೋಗುತ್ತಿದ್ದುದರಿಂದ ಕಲ್ಲು ಸೀಟು ಹಿಮವಾಗತೊಡಗಿ, ಆ ತಂಪು ನಮ್ಮ ಶರೀರಕ್ಕೂ ಅರಿವಾಗತೊಡಗಿತ್ತು. ಕುಳಿರುಗಾಳಿ ಕಿರ್ರೆಂದು ಬೀಸುತ್ತ, ಕಿವಿಗಳನ್ನು ಸೇರಿ, ಶರೀರಕ್ಕೆ ನಡುಕಹುಟ್ಟಿಸಿ, ಹಲ್ಲುಗಳು ಕಟಕಟ ಕಡಿದುಕೊಳ್ಳತೊಡಗಿದ್ದವು. ಈ ಕೊರೆಯುವ ಚಳಿಗೆ ರಕ್ತ ಹೆಪ್ಪುಗಟ್ಟೀತು ಎಂದು ತಿಳಿದು, "ರವಿ, ಇನ್ನು ಹೋಗೋಣವೆ?" ಎಂದೆ. ರವಿ ಅದಾವುದೋ ಲೋಕದಿಂದ ಎಚ್ಚೆತ್ತವನಂತೆ 'ಊಂ' ಎಂದು ಬಾಯಿ ತೆರೆದನು. ಆಗ ಅದಾವುದೋ ಒಂದು ಗಡಿಯಾರ ಬಾರಿಸತೊಡಗಿತ್ತು. ಎಣಿಸಿದಾಗ ಹನ್ನೆರಡು ಗಂಟೆ ಮಾತ್ರ.

"ರವಿ ಹೋಗೋಣ. ಇನ್ನು ಕುಳಿತರೆ ಪೋಲೀಸಿನವರು ನಮಗೆ ಕಾಟ ಕೊಡುತ್ತಾರೆ."

"ಇಷ್ಟು ಬೇಗ ಹೋಗಿಯಾದರೂ ಏನು ಮಾಡುವುದು?"

"ಗಂಟೆ ಎಷ್ಟು ಗೊತ್ತೆ? ಹನ್ನೆರಡಾಗಿದೆ."

"ಇನ್ನೂ ನಮ್ಮ ಪಾಲಿಗೆ ಆರೇಳು ತಾಸು ರಾತ್ರಿ ಇದೆಯಲ್ಲ!"

"ಇಲ್ಲೇನು ಬಕಧ್ಯಾನ ಮಾಡುವುದೆ?"

"ಮಲಗಿದರೂ ನಿದ್ರೆ ಬರುವುದಿಲ್ಲವಲ್ಲ."

"ಮಗುವಂತೆ ಬೆನ್ನುತಟ್ಟಿ ಮಲಗಿಸುತ್ತೇನೆ ನಡೆ."

"ಅದು ನಿನ್ನಿಂದ ಸಾಧ್ಯವಿಲ್ಲ."

"ಏಕೆ?"

"ಅದೇ ಲಕ್ಷ್ಮಿಯಾಗಿದ್ದರೆ ಅಡ್ಡಿಯಿರಲಿಲ್ಲ. ಅವಳು ನನ್ನ ತಲೆ ನೇವರಿಸುತ್ತ, ಕುಳಿತಿದ್ದರೂ ನಿದ್ರೆ ಬಂದು ಹೋಗಿ ಬಿಡುತ್ತಿತ್ತು."

"ಆ ಲಕ್ಷ್ಮಿಯನ್ನೇ ಕರೆದು ತರಲು ಸಾಧ್ಯವೇ?"

"ಯಾರು ಕರೆದು ತರುವವರು?"

"ನಾನು."

" ಅವಳು ಬರದಿದ್ದರೆ ? "

" ನಾನು ಅವಳನ್ನು ಒತ್ತಾಯಪಡಿಸಿದರೆ ಖಂಡಿತವಾಗಿಯೂ ಬಂದೇ ಬರುವಳು. "

" ಅವಳೆಲ್ಲಿರುವಳು ಎಂಬುದು ಗೊತ್ತೆ ? "

" ನಿನಗೆ ಗೊತ್ತಿರಬೇಕಲ್ಲ. "

" ಗೊತ್ತಿಲ್ಲ. "

" ಹಾಗೇಕೆ ಮಾತನಾಡುತ್ತೀ ? "

" ಸತ್ಯವನ್ನೇ ಹೇಳುತ್ತಿದ್ದೇನೆ. "

" ನಿಜಕ್ಕೂ ? "

" ನಿನ್ನ ಕೊರಳಾಣೆಗೂ. "

ರವಿ ಅಳಲು ತೊಡಗಿದ. ನನಗೂ ವಜ್ರದ ಆಘಾತವಂತಾಯಿತು. ಆದರೂ ಸಾವರಿಸಿಕೊಂಡು ರವಿಯನ್ನೇ ಕೇಳಿದೆ. " ಅವಳೇನಾದಳು ? "

" ಇನ್ನೂ ಇದ್ದಾಳೆ. "

" ಅವಳನ್ನು ಕರೆತರಬಹುದಲ್ಲ? "

" ಅವಳು ಅಂತಹ ಸ್ಥಿತಿಯಲ್ಲಿಲ್ಲ. "

" ಯಾಕೆ ? "

" ಅವಳ ಮದುವೆಯಾ....ಗಿ....ದೆ "

ರವಿಯ ಧ್ವನಿ ಸಣ್ಣದಾಗತೊಡಗಿತ್ತು.

" ಕಾರಣರು ಯಾರು ರವಿ ? "

" ನಾನೂ ಮತ್ತು ಪರಿಸ್ಥಿತಿ. "

ರವಿ ಮಗುವಂತೆ ಅತ್ತುಬಿಟ್ಟ. ನಾನೆಷ್ಟು ಸಂತೈಸಿದರೂ ಅವನನ್ನು ಸಮಾಧಾನಪಡಿಸಲಾಗಲಿಲ್ಲ. ಹೀಗೆಯೇ ತಾಸೆರಡು ತಾಸು ಕಳೆದಿರಬೇಕು. ಕೊನೆಗೆ ಅವನನ್ನು ಅವನ ರೂಮಿಗೆ ಕರೆತಂದು ಅಲ್ಲಿಯೇ ಶೇಷರಾತ್ರಿಯನ್ನು ದುಷ್ಟ ಭೀಕರ ಕನಸುಗಳ ಜಾಳಿಗೆಯಲ್ಲಿ ಬೆಳಗು ಮಾಡಿದೆವು. ರವಿ ಆಗಾಗ ಅರೆನಿದ್ರೆಯಲ್ಲಿ ಬೆಚ್ಚಿಬೀಳುತ್ತಿದ್ದ. ಕನಸಿನಲ್ಲಿಯೇ ಓ-ಓ ಎಂದು ಅಳುತ್ತಿದ್ದ.

---

# ೨

ಉಷೆ ಇನ್ನೂ ಕಾಲಿಡುವುದರಲ್ಲಿದ್ದಳು. ನಿಶೆ ಹರಿದಿರಲಿಲ್ಲ. ಅದೊಂದು ವಿಷವೇಳೆಯಾಗಿರಬೇಕು. ರವಿ ನರಳುತ್ತ, "ಒಂದು ಗ್ಲಾಸು ನೀರು" ಎಂದನು. ಹಣೆಯ ಮೇಲೆ ಕೈ ಇಟ್ಟಾಗ, ಕಾದು ಬಿರಿಯೊಡೆಯುತ್ತಿತ್ತು. ಅದು ಜ್ವರವಾಗಿತ್ತು. ಕೊನೆಯ ಸಾರಿ ಬಂದಿರುವ ಜ್ವರವಾಗಿತ್ತು. ಅವನನ್ನು ಕರಿಮೊಬ್ಬಾಲು ಬಂದಂತಿತ್ತು.

ಮಾಳಿಗೆಯ ಕೆಳಗಿಳಿದು ಜಪ ಮಾಡುತ್ತಿರುವ ಮಾಣಿಯಿಂದ ಸುರಳುತ್ತಿರುವ ನೀರನ್ನು ತಣ್ಣಗಿಸಿಕೊಂಡು ಒಂದು ಗ್ಲಾಸು ತಂದೆ. ಆ ನೀರು ಸದ್ದಿಲ್ಲದೇ ಸರಸರ ಅವನ ಹೊಟ್ಟೆಯಲ್ಲಿ ಹೋಯಿತು. ನಂತರ ಏಳೆಂಟು ನಿಮಿಷಗಳಲ್ಲಿ ಒಂದು ಕಪ್ಪು ಕಾಫಿ ಕುಡಿಸಿದೆ. ಅವನಿಗೆ ಪ್ರಜ್ಞೆಯೇ ಇರಲಿಲ್ಲ. ಕಾಫಿಯೂ ಮೊದಲಿನ ನೀರಿನಂತೆ ಸದ್ದಿಲ್ಲದೇ ಹೋಯಿತು.

ಯಾರೂ ಒಕ್ಕಲಿಲ್ಲದ, ಮನೆ-ಮಠವಿಲ್ಲದ, ಗುರುತಿಲ್ಲದ ಮನುಷ್ಯ. ಗುರುತಿಲ್ಲದ ದೊಡ್ಡ ಒಡೆಯನ ಬಾಡಿಗೆಯ ರೂಮಿನಲ್ಲಿ ವಾಸಿಗೆ ಹಿಡಿದಿದ್ದಾನೆ, ಆಧಾರವಿಲ್ಲ. ಇದರಿಂದು ತಿರುವರಿ, ಮೇಲೆ ಹೆಂಚುಗಳು, ಕೆಳಗಡೆ ಭೂಮಿ! ಅದೂ ತ್ರಿಶಂಕುವಿನ ಕೃತಕ ಸ್ವರ್ಗದ ನರಕದ ಹೆಬ್ಬಾಗಿಲು.

ಇನ್ನೂ ಸರಿಬೆಳಗಾಗಿರಲಿಲ್ಲ. ಬದಿಯಲ್ಲಿದ್ದ ಡಾಕ್ಟರನ ಮನೆಗೋಡಿ ಗೊರಕೆ ಹೊಡೆಯುತ್ತಿರುವ ಅವನನ್ನು ಎಬ್ಬಿಸಿದೆ. ಅವನೂ ಹಾಳಾಗಲಿ ಬಿಸಿ! ಎಂದುಕೊಂಡು ಆ ಪವಿತ್ರ ಮೋರಿಯಲ್ಲಿಯೇ ಹೊರಗೆ ಬಂದಿರಬೇಕು. ನನ್ನನ್ನು ನೋಡಿ ಆಕಳಿಸುತ್ತ "ಏನು?" ಎಂದು ಕೈಯಿಂದಲೇ ಕೇಳಿದ. "ವಿಪರೀತ ಜ್ವರ ಬಂದಿದೆ, ಕಾರಣ ಗೊತ್ತಿಲ್ಲ" ಎಂದೆ. ಔಷಧ ಕೊಡಲು ಬಾಟ್ಲಿ ಕೇಳಿದ; ತಂದಿಲ್ಲವೆಂದೆ. ತನ್ನದೇ ಬಾಟ್ಲಿಯಲ್ಲಿ ಔಷಧ ತಂದು ಕೊಟ್ಟ. ಅದು ಯಾವ ಔಷಧವೋ ಕೊಟ್ಟವನಿಗೇ ಗೊತ್ತು. ಬಂದವನೇ ರವಿಗೆ ಜೋರು ಮಾಡಿ ಔಷಧ ಕುಡಿಸಿದೆ. ಜ್ವರ ಇಳಿಯಲೇ ಇಲ್ಲ. ನನಗೆ ಇಷ್ಟಂತೆಯೇ ಇದೆ ಎಂದು ತೋರುತ್ತಿತ್ತು. ಸುಮಾರು ಹತ್ತು ಗಂಟೆಗೆ ಡಾಕ್ಟರರು ಬಂದು

ಪರೀಕ್ಷಿಸಿದರು. ಅಶಕ್ತಿ ಮತ್ತು ನಿಃಶಕ್ತಿಯಿಂದ ಜ್ವರ ಬಂದಿದೆಯೆಂದರು. ರವಿ ಕೇಳಬೇಕಲ್ಲ. ಅದಕ್ಕಾಗಿಯೇ ಸುಮ್ಮನಾದೆ.

ಸುಮಾರು ಹನ್ನೆರಡರ ವೇಳೆ. ಆ ಹಾಳು ಸಿಗಾರೇಟಿನ ನೆನಪಾಗಿರಬೇಕು. ರವಿ ನನ್ನನ್ನು ಕರೆದು ಒಂದು ಪಾಕೆಟು ಸಿಗಾರೇಟು ತರಿಸಲು ಹೇಳಿದನು. ನಾನು ಬೇಡವೆನ್ನಲು ತಾನೇ ತರಲು ಎದ್ದುಬಿಟ್ಟನು. ಆಗ ಉಪಾಯ ಗಾಣದೆ ನಾನೇ ಸಿಗರೇಟು ತರಿಸಿಕೊಟ್ಟೆ.

ಇಳಿಹೊತ್ತಿನಲ್ಲಿ ನಾನೇ ರವಿಗೆ ಸ್ಥಳ ಬದಲಿಸಲು ಸೂಚಿಸಿದೆ. ಅವನು ಒಪ್ಪಲೇ ಇಲ್ಲ. ಒಮ್ಮೆ ಜೋರು ಮಾಡಿದರೂ ಅವನೆಷ್ಟು ನೊಂದುಕೊಳ್ಳುತ್ತಾನೋ ಎಂದು ಆಗ ಸುಮ್ಮನಾದೆ. ರಾತ್ರಿ ಸಂಜೆಯಲ್ಲಿ ನಿಧಾನವಾಗಿ ಸ್ಥಳ ಬದಲಿಸಲು ಸೂಚಿಸಿದೆ.

" ಹಾಗೆ ಯಾರು ಹೇಳಿದರು ? "

" ಡಾಕ್ಟರರು. "

" ಅವನು ನಿಜವಾಗಿಯೂ ಡಾಕ್ಟರನೋ ? "

" ಹಾಗಿಲ್ಲವಾದರೆ ಔಷಧ ಕೊಡುತ್ತಿದ್ದನೊ ? ಡಾಕ್ಟರನೆಂದು ಹೇಳಿ ಕೊಂಡು ಬರೀ ನೀರನ್ನು ಔಷಧವೆಂದು ಹೇಳಿ ಬಾಟ್ಲಿಯಲ್ಲಿ ತುಂಬಿಕೊಟ್ಟರೂ ನಂಬಬೇಕಲ್ಲ. "

" ಅಂತೂ ನೀನೂ ಡಾಕ್ಟರನೇ ? "

ಬೇರೆ ಕಡೆಗೆ ನೋಡಿ ತಿರುಗಿಬಿಟ್ಟೆನು.

" ರವಿ, ನಿನ್ನ ಇಂತಹ ಅಪಾಯ ಪರಿಸ್ಥಿತಿಯಲ್ಲಿ ಒಂದು ಮಾತು ಕೇಳಲೆ ? "

" ಅದರಿಂದ ನನಗೇನಾಗಬೇಕು ? "

" ನಿನಗೆ ಏನೇ ಇರಲಿ, ನನಗೆ ಬೇಕು. ಒಪ್ಪುತ್ತೀಯಾ ? "

" ಒಪ್ಪುವದಿಲ್ಲವಾದರೆ ? "

" ನಾನು ನಿರಾಶೆಯಿಂದ ಹಿಂತಿರುಗುತ್ತೇನೆ. ಪುನಃ ನಿನ್ನನ್ನು ಮಾತ ನಾಡಿಸಿ ತೊಂದರೆ ಕೊಡಲು ಬಯಸುವದಿಲ್ಲ. "

" ಸರಿ, ಮನುಷ್ಯನ ದುರ್ದೆಸೆ ನಿನಗೆ ಗೊತ್ತಿಲ್ಲ. ಮೊದಲು ನನ್ನ ಹಿಂದೆ ಬರುವವರೆಲ್ಲರೂ ಈಗ ದೂರುತ್ತ ನನ್ನಿಂದ ದೂರವಾಗಿಬಿಟ್ಟಿದ್ದಾರೆ. ನೀನೊಬ್ಬ

ನಿನ್ನೆ ಎಂದು ನನ್ನನ್ನು ಮಾತನಾಡಿಸಿದಿ. ನಿನ್ನನ್ನು ನನ್ನಿಂದ ಕಸಿದುಕೊಳ್ಳ ಬೇಕೆಂದು ನಿರ್ಧರಿಸಿತವಿರಬೇಕು. ಹೋಗು, ಹೊರಟುಹೋಗು. ಇನ್ನು ಯಾವಾಗಲೂ ನನ್ನೆದುರಿಗೆ ಸುಳಿಯಬೇಡ. ಮಾಡಿಸಂತೆಯ ವ್ಯಾಪಾರವೂ ಸಾಕಾಗಿದೆ. ಯಾರೊಡನೆ ಮಾತಾಡುವುದೂ ನನಗೆ ಬೇಡಾಗಿದೆ. ಪರಿಚಯ ಹೆಚ್ಚಿದಂತ ತೊಂದರೆಗಳೂ ಹೆಚ್ಚುತ್ತ ಹೋಗುತ್ತವೆ. ಶ್ರೀನಾಥ! ನಿನ್ನ ಕಣ್ಣಲ್ಲಿ ಏಕೆ ನೀರು ಬಂದು? ಬದುಕುವುದೇ ಕರ್ಮ ಮಾರ್ಗ ನೋಡು. ಬದುಕಲಪೇಕ್ಷಿಸುವವನು ಕರ್ಮ ಮಾರ್ಗವನ್ನೇ ಅನುಸರಿಸಬೇಕು. ಇನ್ನು ನಿನಗೆ ತೊಂದರೆ ಕೊಡುವುದಿಲ್ಲ. ಹೋಗಬಹುದು. ನನ್ನ ದಾರಿ ತೊಂದರೆ ಯದಾಗಿರಲಿ, ಏನೇ ಆಗಿರಲಿ. ಕಣ್ಮುಚ್ಚಿ ನಡೆಯುತ್ತ ಹೋಗುತ್ತೇನೆ.”

ಆವನ ಕಟುಮಾತುಗಳು ವಿಷದಂತಾತೀವ್ರವಾಗಿತ್ತು. ನಾನೇ ಹೇಳಿದೆ.

“ ರಮಾ. ಹಾಗೆ ಹೇಳುವುದರಲ್ಲಿ ನಿನ್ನ ಉದ್ದೇಶವೇನು ? ”

“ ಉದ್ದೇಶವೆಂಬುದು ಮೂಲಕ್ಕಿಂದ ಬಿಟ್ಟಿದೆ ನನಗೆ ಗೊತ್ತಿಲ್ಲ. ”

“ ನನ್ನಿಂದ ನಿನಗೆ ತೊಂದರೆಯಾಗುತ್ತಿರಬೇಕಲ್ಲವೇ ? ”

“ ತೊಂದರೆಯೆಲ್ಲಿಂದ ಬಂತು ? ನನ್ನಿಂದ ನಿನಗೆ ತೊಂದರೆಯಾಗ ದಿದ್ದರಾಯಿತು. ”

“ ಹಾಗಿದ್ದರೆ ನಾನು ನಿನ್ನ ಮಿತ್ರನ ಇಷ್ಟು ವೇಳೆಯತನಕ ಉಳಿಯುವ ಅವಶ್ಯಕತೆಯೂ ಇರಲಿಲ್ಲವಾಗುತ್ತಿತ್ತಲ್ಲ. ”

“ ನನ್ನ ದಾಕ್ಷಿಣ್ಯಕ್ಕೆ ನೀನು ಹಾಗೆ ಮಾಡಿರಬಹುದು. ”

“ ರಮಾ, ಮುಂಚಿನಂತೆ ಮಾತನಾಡಬೇಡ. ಹುಚ್ಚುಚ್ಚು ಮಾತನಾಡಿ ಮನಸ್ಸನ್ನು ನೋಯಿಸಬೇಡ. ನನ್ನ ಜೊತೆ ನೀನೀಗ ಬರಬೇಕು. ”

“ ಎಲ್ಲಿಗೆ ? ”

“ ನಾನು ಕರೆದೊಯ್ದಲ್ಲಿಗೆ. ”

“ ಬರದಿದ್ದರೆ.... ”

“ ಮತ್ತೆ ಹೊಂದುವನ ಸುದ್ದಿ ಮಾಡಿದಿ ನೋಡು. ನೀನೀಗ ಹೊರ ಡಬೇಕು. ಒಂದು ಬಟ್ಟೆ ಕೂಡ ಬೇಕಾಗಿಲ್ಲ. ಮೊದಲಿಗೆ ನಾನು ನಿನ್ನೊಡನೆ ಮಾತು ಕೇಳಿಕೊಂಡದ್ದು ನೆನಪಿದೆಯೇ ? ನೀನು ನನ್ನ ಒಪ್ಪಿ

ಗೆಯ ವಿನಾ ಎಲ್ಲಿಯೂ ಹೋಗಕೂಡದೆಂದು. ಅದನ್ನು ನೆನಪಿಟ್ಟುಕೊಂಡಾದರೂ ನೀನು ಮಾತನಾಡಲಿಕ್ಕಿಲ್ಲ."

ಆ ರಾತ್ರಿ ಅವನ ರೂಮಿನಲ್ಲಿ ನಾನು ಕುಳಿತಿದ್ದೆ. ಅವನಿಗೂ ನಿದ್ರೆಯು ಬಂದಂತಿರಲಿಲ್ಲ. ನಿಜವಾಗಿಯೂ ಬರಲೇ ಇಲ್ಲ. ದೀಪ ಇನ್ನೂ ಚಿಕ್ಕದಾಗಿ ಉರಿಯುತ್ತಲೇ ಇತ್ತು. ರವಿ ನನ್ನನ್ನು ಕರೆದ. ಹತ್ತಿರ ಕೂಡ್ರಿಸಿಕೊಂಡ. ಮೆಲ್ಲಗೆ "ಶ್ರೀನಾಥ, ಗಂಟೆಯೆಷ್ಟು?" ಎಂದ.

"ಹನ್ನೊಂದಾಗಿರಬೇಕು."

"ನಿದ್ರೆ ಬರುತ್ತಿದೆಯೆ?"

"ಇಲ್ಲ, ಏಕೆ?"

"ಸುಮ್ಮನೆ ಏಕೆ ಕೂತುಕೊಳ್ಳುತ್ತೀ? ಮಲಗಿಕೊಳ್ಳು."

ನಾನು ಸ್ವಲ್ಪ ತಡೆದು ಕೇಳಿದೆ. "ಅದೇನು ರವಿ, ಯೋಚನೆ ಮಾಡುತ್ತಿರುವೆ?"

"ಶ್ರೀನಾಥ, ಮನಸ್ಸು ಹಲವು ಕಾರಣಗಳಿಂದ ಭಾರವಾಗಿದೆ. ಅದು ತಡೆದುಕೊಳ್ಳಲಾಗದಷ್ಟು ಭಾರದಿಂದ ದುರ್ಬಲವಾಗಿದೆ. ಆ ಭಾರದ ಕೆಲವು ಪಾಲನ್ನು ನಿನ್ನ ಮೇಲೇರಿಸುತ್ತೇನೆ. ನೀನದನ್ನು ಹೊರಲು ಸಮರ್ಥನಿದ್ದೀಯಾ?"

"ಪಾಲಿಗೆ ಬರುವ ಸುಖವನ್ನು ನಾನು ಬೇಡವೆನ್ನಲಿ?"

"ನೋಡು ಶ್ರೀನಾಥ, ನನ್ನ ಜೀವನದ ಹಲವು ಹಂತಗಳು ಸುಖವಾಗಿ ಕಳೆದುಹೋಗಿವೆ. ಬಹುಶಃ ಇದೇ ಕೊನೆಯ ಹಂತವಾಗಿರಬೇಕು. ನನ್ನ ಪಾಲಿನ ಸುಖ-ದುಃಖಗಳು ನಿನಗೂ ಇರಲಿ ಎಂದು ನಿನಗೆ ಒಪ್ಪಿಸಿ ನೀಡುತ್ತೇನೆ. ಇದರಿಂದ ನನಗೇನು ಲಾಭ ಎಂದು ಕೇಳೀಯೆ. ಸಂಪ್ರದಾಯಬದ್ಧ ಮನಸ್ಸಿನಂತೆ ಹೊಟ್ಟೆಯ ನೋವು ಉಗುಳಿಕೊಂಡರೆ ಕೊಂಚ ಹಗುರಾಗುವದು ಇಷ್ಟೇ."

"ರವಿ, ಲಕ್ಷ್ಮಿಯನ್ನು ಕೈಬಿಡುವ ಸಂದಿಗ್ಧತೆಯೇನು ಬಂತು?"

"ಅದೂ ನನಗೆ ತಿಳಿಯದಾಗಿದೆ."

"ಅಂಥ ಪರಿಸ್ಥಿತಿಯಲ್ಲಿ ನೀನೇನೂ ಯೋಚಿಸಲಿಲ್ಲವೆ?"

"ಯಾರಿಗೆ ಗೊತ್ತು ಹೀಗಾಗುವದೆಂದು? ನಾನಲ್ಲಿ ಹೋದಾಗ ಎಲ್ಲ

ಬರುವತನಕ ಕಾಯುತ್ತೇನೆಂದು ಲಕ್ಷ್ಮಿ ವಚನವಿತ್ತಿದ್ದಳು. ಅದೂ ಜರವು ಸತ್ಯವೆ. ಆದರೂ ಹೆಣ್ಣು ಮದುವೆಯಾಗುವ ತನಕ ಸಾಕಿದ ಮನೆಯವರ ಅಧೀನವಲ್ಲವೆ ? ಅವರಿಷ್ಟದಂತೆ ನಡೆಯಬೇಕಲ್ಲವೆ ? ನಡೆಯುವುದಿಲ್ಲವೆಂದರೆ ಬದುಕುವುದಕ್ಕಾದರೂ ಬೇರೆ ದಾರಿ ಅವರಿಗೆ ಇಲ್ಲವಲ್ಲ. ”

“ ನಿಜ. ಆ ಸಮಯಕ್ಕೆ ನಿನಗದು ಗೊತ್ತಾಗಲಿಲ್ಲವೆ ? ”

“ ಗೊತ್ತಾಗಿತ್ತು. ಅವಳಿಗೆ ಮರುಪತ್ರ ಬರೆದೆ. ‘ ಉದ್ವಿಗ್ನಳಾಗಬೇಡ. ಮನೆಯವರಿಗೆ ತಿಳಿಸು. ಇನ್ನೆರಡು ತಿಂಗಳಲ್ಲಿ ನಾನು ಬರುವೆ. ನಿಮ್ಮ ಮನೆಯವರಿಗೆ ನಾನು ತಿಳಿಸುವೆ. ಒಪ್ಪದಿದ್ದರೆ ಒಂದು ದಿನ ನಾನೂ ನೀನೂ ಹೊರಟು ಬಂದರಾಯಿತು ’ ಎಂದು. ದುರ್ದೈವಕ್ಕೆ ಆ ಪತ್ರ ಅವಳ ಮನೆಯವರಿಗೆ ದೊರೆಯಿತು. ಉರಿಯುತ್ತಿರುವ ಬೆಂಕಿಗೆ ತುಪ್ಪ ಎರೆದಂತಾಯಿತು. ಅವಳಿಗೆ ವಿಶ್ವಾಸವಿತ್ತು. ನಾನು ಅವಳ ಪ್ರತಿಯೊಂದು ಪತ್ರಕ್ಕೂ ಉತ್ತರ ಬರೆಯುತ್ತಿದ್ದೆ. ಮದುವೆಯ ಮುನ್ನಾದಿನವೂ ಅವಳು ಪತ್ರಕ್ಕಾಗಿ ಕಾದಿರಬೇಕು. ಆದರೆ ಆ ವೇಳೆ ನಾನು ಅಂಥ ಸ್ಥಿತಿಯಲ್ಲಿರಲಿಲ್ಲ. ಸಕಾಲಕ್ಕೆ ಅವಳ ಪತ್ರವೂ ಬರಲಿಲ್ಲ. ಮಳೆ ಬಂದು ಹಳ್ಳ ಉಕ್ಕಿ ಹರಿದು, ಗುಡಿಸಲನ್ನು ಉರುಳಿಸಿ, ಅದರ ಅಸ್ತಿತ್ವವೇ ಇಲ್ಲದಂತಾದ ಮೇಲೆ, ಹಳ್ಳ ಮೊದಲಿನಂತಾದ ಮೇಲೆ ನನ್ನ ಮನೆಯೆಲ್ಲಿ ? ಎಂದು ನಾನು ಹುಡುಕುವಂತಾಯಿತು. ಅಲ್ಲೇನಿದೆ ಹೇಳು. ಆಕಾಶದಲ್ಲಿ ಮಳೆಯಾದ ಗುರುತೂ ಕಾಣುವುದಿಲ್ಲ. ಮಿಂಚು ಹೊಳೆದ ಗುರುತೂ ಇಲ್ಲ. ಒದ್ದೆಯಾದ ನೆಲವೂ ಆರಿ ಮೊದಲಿನಂತಾಗಿದೆ. ಅಂಥ ಪರಿಸ್ಥಿತಿಯೇ ನನ್ನದಾಯಿತು. ಮಾಡುವುದೇನು?”

“ ಪತ್ರ ಸಕಾಲಕ್ಕೆ ದೊರೆಯದಿದ್ದ ಕಾರಣ ? ”

“ ನನಗೆ ಜಬ್ಬಲಪುರದಿಂದ ರಾಣಿಗಂಜಕ್ಕೆ ವರ್ಗವಾಗಿತ್ತು. ಹೊಸ ಸ್ಥಳ, ಹೊಸ ವಿಷಯಗಳಾದುದರಿಂದ ಅವಳಿಗೆ ಪತ್ರ ಬರೆಯುವ ನೆನಪೂ ಮರೆತುಹೋಯಿತು. ನಿಧಾನವಾಗಿ ಪತ್ರ ಬರೆದಾಗ ಉತ್ತರ ಬರಲಿಲ್ಲ. ಅಂದರೆ ಮುಂದೆ ಬರೆದ ಹಲವು ಪತ್ರಗಳು ಅವಳ ಮನೆಯವರಿಗೆ ಸಿಕ್ಕಿರಬೇಕು.”

“ ತಪ್ಪು ನಿನ್ನದಲ್ಲವಾದರೂ ವಿಧಿ ವಿಪರೀತ ಬಗೆಯಿತು. ನಂತರ ಅವಳ ವಿಷಯಗಳು ಸರಿಯಾಗಿ ತಿಳಿಯಲಿಲ್ಲ ? ”

“ ತಿಳಿದಿದೆ. ಆದರೂ ಸರಿಯಾಗಿ ಇಲ್ಲ. ಅವಳು ಮದ್ರಾಸ್ಸಿಗೆ ಅವಳಗಂಡನ

ಮನೆಯಲ್ಲಿಯೇ ಉಳಿದಿದ್ದಳು. ಹುಡುಗಿಯರು ಕಾಲೇಜ ಸೇರಿ, ಮನೆಯವರಿಗೆ ಕೈಲಾಸ ತೋರಿಸುವುದೂ ಕಷ್ಟ! ಹೇಗೂ ಅದಾವನೋ ಗಂಡನ ಕೈಕೆಳಗೆ ಉಳಿಯಬೇಕು. ಸಾಮಾನ್ಯ ಎಲ್ಲರ ಅನುಭವವೂ ಇದೇ ರೀತಿಯಾಗಿಬಿಟ್ಟಿದೆ. ಅಂತಹ ದಿಟ್ಟ ಹುಡುಗಿಯರು, ಕಾಲೇಜಗೃಹ ಕಂಡರೂ ಪರಿಣಾಮದಲ್ಲಿ ಅವರು ಹೆತ್ತ ಮನೆಗೆ ತರುವ ಭಾಗ್ಯ ಮಾತ್ರ ಅಪಕೀರ್ತಿಯ ಹೆಸರಿನಲ್ಲಿ. ಎಲ್ಲೋ ಬೆರಳಲ್ಲಿ ಎಣಿಸುವಷ್ಟು ಕುವರಿಯರು ಮಾತ್ರ, ತಮ್ಮ ಶೀಲ ಕಾಯ್ದುಕೊಂಡು ಹೆತ್ತ ತಂದೆಗೆ, ಹೆಸರು ತರದಿದ್ದರೂ ಕೈಹಿಡಿಯುವ ಪತಿಗೆ ಅನುಕೂಲವಾಗಿ ಅವನ ಭಾಗ್ಯದೇವತೆಗಳಾಗುವವರೂ ಇದ್ದಾರೆ. ಅಂಥವರು ಹುಡುಕಿದರೂ ವಿರಳವಾಗಿ ದೊರೆಯುತ್ತಾರೆ. ಇದಕ್ಕೆ ಪ್ರತಿಕೂಲರಾದವರು ಬಿಂಕದ ಸಿಂಗಾರಿಯಂತೆ ದಿನಕ್ಕೊಂದು ಬಣ್ಣ ಕಟ್ಟಿ ಮೆರೆದು, ತಮ್ಮೆದುರಿಗೆ ಸುಳಿಯುವ ಚಿಟ್ಟೆಗಳಿಗಾಗಿ ಅರಳುವ ಕುಸುಮಗಳಾಗಿ, ಕೊನೆಗೆ ತಾಯಿಯಾಗುವ ಲಕ್ಷಣಗಳುಳ್ಳವರಾಗಿ, ಮಾನ-ಅಭಿಮಾನ ಉಳಿಸಿಕೊಳ್ಳಲು ಗುಪ್ತವಾಗಿ ಗರ್ಭಪಾತ ಮಾಡಿಸಿಕೊಂಡು ಕೊನೆಗೆ ಚಿರವಿರಹಿಗಳಾಗಿ, ತಮ್ಮ ಬದುಕಿನ ದಿನಗಳನ್ನು ಕಳೆದುಕೊಳ್ಳುವವರೂ ಉಂಟು. ನಿನಗೂ ಗೊತ್ತಿರಬೇಕಲ್ಲ. ಏಶಿಯಾ ಖಂಡಕ್ಕೆ ಸ್ವಾತಂತ್ರ್ಯದ ಗಾಳಿ ಬೀಸಿದೆ. ಹೆಣ್ಣು ತನ್ನ ರಕ್ಷಣೆಯ ಮಟ್ಟಿಗೆ ಸ್ವಾತಂತ್ರ್ಯ ಉಳಿಸಿಕೊಳ್ಳಲು ಪ್ರಯತ್ನಿಸುವವಳೂ, ಯಾವನೋ ಒಂದು ಗಂಡಿಗೆ ಹೆಣ್ಣು ತಾನಾಗಿ ತನ್ನ ಸ್ವಾಭಿಮಾನವನ್ನು ಕಳೆದುಕೊಳ್ಳಲು ಇಷ್ಟಪಡುವವಳೂ ಆಗಿದ್ದಾಳೆ. ಯಾರು ಎಂಥವರು ಎಂದು ತಿಳಿಯುವುದೂ ಕಷ್ಟವಾಗಿದೆ. ದೂರದ ಮಾತೇಕೆ? ನಮ್ಮ ಕಾಲೇಜಿನ ದಿನಗಳಲ್ಲಿ ನೀನೇ ಕಾಣಲಿಲ್ಲವೇ ? ಎಂತೆಂತಹ ಹೆಣ್ಣುಗಳು ತಮ್ಮ ಮಾಟದ ಮೋಹಜಾಲದಿ ನಮ್ಮೆದುರಿಗೆ ಸುಳಿದು, ನಮ್ಮನ್ನು ತಮ್ಮೆಡೆಗೆ ಎಳೆದುಕೊಳ್ಳಲು ಯತ್ನಿಸುತ್ತಿದ್ದುದು ? ಯುವಕರೇನು ಅದಕ್ಕೆ ಕಡಿಮೆಯೇ ? ಅಂತಹ ಸನ್ನಿವೇಶಗಳ ಸದುಪಯೋಗವನ್ನು ಸಕಾಲಕ್ಕೆ ಪಡೆದುಕೊಂಡು ತಮ್ಮ ಬಸಿರು ಬೆಳೆದ ನಂತರ ಏನೂ ಸಂಬಂಧವಿಲ್ಲದವರಂತೆ ಅವರೆದುರಿಗೆ ಮೀಸೆ ತಿರುವಿ ನಡೆಯುತ್ತಿದ್ದುದು ? ಅಂತವುಗಳೆಲ್ಲವೂ ನಮ್ಮೆದುರೇ ಸುಳಿದುಹೋಗಿವೆ. ಆದರೆ ಅವೆಲ್ಲವೂ ಈಗೀಗ ಕಲ್ಪನಾಸಾಮ್ರಾಜ್ಯದ ಕಲ್ಪಿತಗಳಾಗಿ ಬಿಟ್ಟಿರಬಹುದು !”

“ ರವಿ, ಹಿಂದಿನದೆಲ್ಲಾ ನೆನೆದುಕೊಂಡು ನನಗೇನಾಗಬೇಕಿತ್ತು ? ”

"ಸರಿ, ಶ್ರೀನಾಥ. ನನ್ನ ಸ್ಮೃತಿಯೇ ನನ್ನಾಧೀನವಲ್ಲಿಲ್ಲ. ನನ್ನ ಹೃದಯದ ಕತ್ತಲಾಗಿದ್ದ ಲಜ್ಜೆ ಮರೆಯಾಗಿ ಆ ಎಲ್ಲ ಸುಬ್ಬಲಕ್ಷ್ಮಿಯರೂ ನನ್ನೆದುರಿಗೆ ಸುಳಿದು ಹೋಗಿರಬೇಕು. ಹೇಗೆ ರೆಕ್ಕೆ ಕಡಿದ ಪಕ್ಷಿಯಂತೆ ನನ್ನವೇ ನನಗೆ ಗೊತ್ತಿಲ್ಲ. ಹೀಗೆ ಎಷ್ಟೋ ವೇಳೆ ನನ್ನ ಮಾತಿನಲ್ಲಿ ವಿಷಯಾಂತರವಾಗುತ್ತಿರಬೇಕು. ಅದಕ್ಕಾಗಿಯೇ ಎಂದು ಕಾಣುತ್ತದೆ, ನನ್ನ ಗುರುತಿನ ಎಷ್ಟೋ ಗೆಳೆಯರು ಮೋರೆ ಹಿಂಡಿಕೊಂಡು ನನ್ನಿಂದ ದೂರವಾದರು. ತಾಯಿಯನ್ನು ಕಳೆದುಕೊಂಡ ತಬ್ಬಲಿ ಮರಿಹಕ್ಕಿಯ ಪಾಡಾಗಿದೆ ನನ್ನದು."

ರವಿಯ ಮೋರೆ ವಿಕಾರವಾಗತೊಡಗಿತ್ತು. ಅದೇನೋ ನೋವುಗಳ ಪ್ರತಿಚ್ಛಾಯೆಯಂತಿತ್ತು, ಅವನ ಮೋರೆಯಲ್ಲಾಗುವ ಏರು-ಬೀಳುಗಳ ರೀತಿ. ಏನೆಂದು ತಿಳಿದುಕೊಳ್ಳಲು ಕೇಳಿದೆ—

"ರವಿ, ಏನೆ ನೋಯುತ್ತಿದೆಯೆ?"

"ಏಕೆ, ನನ್ನ ಈ ಹಾಳು ಪುರಾಣಗಳು ನಿನಗೂ ಬೇಸರ ಬಂದಿರಬೇಕಲ್ಲವೆ?"

"ಬೇಸರ ಬಂತೆಂದಲ್ಲ. ಸುಮ್ಮನೆ ಕಂಠಶೋಷಣೆ ಮಾಡುವುದರಿಂದ ನಿನ್ನ ಶರೀರದ ಮೇಲೆ ಪರಿಣಾಮವಾಗುವಂತಿದ್ದರೆ, ಈಗ ವಿಶ್ರಾಂತಿ ತೆಗೆದುಕೋ. ಇನ್ನೂ ಬೆಳಗು-ಬೈಗುಗಳು ಆಗುತ್ತಲೇ ಇರುವುವು."

"ನೋವಾಗುತ್ತಿಲ್ಲವೆಂದಲ್ಲ. ಈ ಹೃದಯದ ಭಾರ ಕಡಿಮೆಯಾಗುತ್ತಿರುವಾಗ ಆ ನೋವುಗಳ ಎಣಿಕೆ ಅತಿ ಕ್ಷುಲ್ಲಕವಾದದ್ದು."

"ನೀನು ನಿದ್ದೆಯನ್ನು ಮಾಡಿಲ್ಲವಲ್ಲ."

"ಇನ್ನೆಲ್ಲಿಯ ನಿದ್ದೆ ಶ್ರೀನಾಥ. ಆ ಸುಖದ ನಿದ್ದೆಗಳೆಲ್ಲವೂ ಕಳೆದುವು. ಇನ್ನು ಬರುವುದು ಮಾತ್ರ ಶಾಶ್ವತ ಸುಖದ ನಿದ್ದೆ."

"ರವಿ, ಹೊತ್ತಿಲ್ಲದ ಹೊತ್ತಿನಲ್ಲಿ ಅಪಶಬ್ದವನ್ನು ಮಾತಾಡಬೇಡ."

"ನನಗೆಲ್ಲವೂ ಒಂದೇ. ಇಲ್ಲಿ ಮೇಲು-ಕೀಳುಗಳ ವಿಷಮತೆಯಿಲ್ಲ."

"ಬರೇ ಮಾತಾಡಿದರೆ ಗಂಟಲು ಒಣಗುತ್ತದೆ. ನಿನಗೆ ಬಾಯಾರಿಕೆ ಆಗುವದೇ?"

"ಬಾಯಾರಿಕೆಯಾದರೆ ಏನನ್ನು ಕುಡಿಯುವೆ?"

"ಕಾಫಿ ಆಗಬಹುದೆ?"

" ಅದೇ ಅಡ್ಡಿಯಿಲ್ಲ. ನಾನು ಬೇರೆಯೇ ತಿಳಿದುಕೊಂಡಿದ್ದೆ. ಏನೋ ಆ ಕಹಿ ಕಷಾಯ ಇದೆಯಲ್ಲಾ. ಅದನ್ನೆಲ್ಲ ಗಂಟಲಿಗೆ ಸುರುವಿಕೊಂಡು ಗಂಟಲನ್ನ ಕೆಡಿಸುವ ಪ್ರಸಂಗ ಬರುತ್ತದೋ ಎಂದು ಯೋಚಿಸಿದ್ದೆ. "

" ಕಷಾಯ ಕಹಿಯಾದುವಾದರೆ ಆಗದೆ ? "

" ಆಗದು ಎಂತೇನಲ್ಲ. ಬೇಕಾದಷ್ಟು ಕಹಿ ಮದ್ದು ಕುಡಿದು ಕುಲಗೆಡಿಸಿಕೊಂಡಾಗಿದೆ. ಇನ್ನೂ ಅದೇ ಕುಡಿಯುತ್ತ ಕೂಡುವದರಲ್ಲಿ ಅರ್ಥವೇನು ? "

ರವಿ ಒಮ್ಮೊಮ್ಮೆ ಹಾಗೆಯೇ. ಮಕ್ಕಳಿಗಿಂತಲೂ ಚಿಕ್ಕ ಸ್ವಭಾವ ; ಅವರಿಗಿಂತಲೂ ಮುಗ್ಧ ಮಾತುಗಳು. ತಲೆಯೆತ್ತಲೋ ತಿರುಗಿ ಲೋಕಾಚಾರದ ಮಾತೆತ್ತಿದನೆಂದರೆ ಆವನೇನು ಹೇಳುವನೋ ಅವನಿಗೇ ಗೊತ್ತಿರುವದಿಲ್ಲ. ನಾನೇ ಹೋಗಿ ಬಿಸಿಗಿಟ್ಟ ಕಾಫಿಯನ್ನು ತಂದೆ. ಕಾಫಿ ಕುಡಿದ ನಂತರ ರವಿಯ ಮೋರೆ ಮತ್ತೆ ಮಿನುಗಿತು. ಏನೋ ಸ್ವಲ್ಪ ಉಲ್ಲಾಸ ಬಂದಂತಿರಬೇಕು. ಆಚೀಚೆ ನೋಡುತ್ತ ಕೇಳಿದ.

" ಏನೋ, ಸಿಗರೇಟು ಪಾಕೀಟು ಇದ್ದಲ್ಲಿಂದಲೇ ಮಾಯವಾಗಿಬಿಟ್ಟಿದೆ ! "

" ನಿನ್ನನ್ನು ನೋಡಿ ಅವಕ್ಕೂ ಜಿಗುಪ್ಸೆಯಾಗಿರಬೇಕು. "

" ಇಲ್ಲ. ಅವೆಲ್ಲೋ ಮರೆಯಲ್ಲಿ ನಿಂತು ಹಾಸ್ಯ ಮಾಡುತ್ತಿರಬೇಕು. "

" ಸಿಗರೇಟು ಬೇಡ. ಹಾಗೆಯೇ ಮಲಗಿಕೋ. "

" ಅಯ್ಯೋ, ಮಂಕೇ ! ನೀನೂ ಹಾಗೆ ಹೇಳುತ್ತೀಯಾ ? ಒಂದು ಡೋಸ್ ಕಾಫಿಯನ್ನು ಔಷಧವೆಂದು ಮುಗಿಸ್ಯಾಗಿದೆ. ಆದರೆ ಪಥ್ಯಕ್ಕೆಂದು ಒಂದು ಸಿಗರೇಟೂ ಇರಲಿ. ಅಂದರೆ ನನಗೆ ಸ್ವಲ್ಪ ಹುಷಾರಾದಂತಾಗುತ್ತದೆ. "

" ನನಗೆ ಗೊತ್ತಿಲ್ಲ. ಒಳಗಡೆ ಕೇಳು. "

" ನಿಮ್ಮ ಸತೀರಮಣಿಯರಿಗೋ ? "

ಆಗ ಶೀಲಾ ನಮ್ಮ ಮಾತು ಕೇಳಿ ಬಾಗಿಲಿಗೆ ಬಂದಿದ್ದಳು. ಅವಳು ರವಿಯನ್ನು ಉದ್ದೇಶಿಸಿ ಹೇಳಿದಳು. " ನಿಮ್ಮ ಈ ಪರಿಸ್ಥಿತಿಯಲ್ಲಿ ನೀವು ಸಿಗರೇಟು ಸೇದುವದು ಬೇಡ್ರೀSS. " ಅದಕ್ಕೆ Vote ಕೊಡಲೆಂಬಂತೆ ನಾನೂ ಒಂದು ಮಾತು ಸೇರಿಸಿದೆ. " ಇವಳ ಒತ್ತಾಯದಿಂದಲೇ ನಾನೂ ಸಿಗರೇಟು ಸೇದುವದನ್ನು ಬಿಟ್ಟೆನಯ್ಯಾ ! "

"ಅಲ್ಲಯ್ಯಾ, ಆಗ ಎಲ್ಲಿಯವರೆಗೆ ಹೇಳಿದ್ದೆ ?"

"ಅವಳು ಮ್ಯಾಟ್ರಿಕ್ ಆದಳೆಂದು."

ಏನನ್ನೋ ನೆನಪು ಮಾಡಿಕೊಳ್ಳುವವರಂತೆ ಸ್ವಲ್ಪ ನಿಂತನು. ಸರಿ, ಇನ್ನು ಹೀಗೆ ಎಂದು ಸುರು ಮಾಡಿದನು.

"ಅವಳು ಮ್ಯಾಟ್ರಿಕ್ ಪಾಸಾದ ನಂತರ...."

ಅಷ್ಟಿಗೇ ಬಿಟ್ಟು ಕೇಳಿದನು :

"ಅವಳ ನನ್ನ ಮೊದಲಿನ ಪರಿಚಯ ಹೇಳಿದ್ದೇನೆಯೆ ?"

"ಇಲ್ಲ."

"ಅದನ್ನೇ ಮೊದಲು ಹೇಳುತ್ತೇನೆ."

ಮುಗಿಯುವ ಸಿಗರೇಟಿಗೆ ಇನ್ನೊಂದನ್ನು ಹಚ್ಚುತ್ತ ಹೇಳತೊಡಗಿದನು—

"ಇಂದಿಗೆ ಸುಮಾರು ಹದಿನೇಳು ವರುಷದ ಮೊದಲು, ಕುಮಟಾದಿಂದ ಸಿರಸಿಗೆ ಬರುತ್ತಿರುವಾಗ ನನ್ನೆದುರಿಗೆ ಒಬ್ಬ ವ್ಯಕ್ತಿ ಕುಳಿತಿದ್ದರು. ತಲೆಗೂದಲು ಅಲ್ಲಲ್ಲಿ ಬಿಳುಪಾಗುತ್ತಿದ್ದವು. ದುಂಡನೆಯ ಮುಖ; ನಡುವಯಸ್ಸು ಮೀರಿದವರು; ಗಂಭೀರ ಮೋರೆ ಅವರ ವಿಚಾರಪರತೆಯನ್ನು ಸೂಚಿಸುತ್ತಿತ್ತು. ಅವರು ತೊಟ್ಟಿದ್ದು ಅಚ್ಚ ಖಾಕಿ ಶರ್ಟು. ಕುಚಿಗೆ ಕೆಂಪು ಪಟ್ಟಿಯ ಅಂಚುಗ ಹಾಕಿತ್ತು. ಅವರು ಯಾವುದೋ ನೌಕರಿಯಲ್ಲಿದ್ದವರು ಎಂದು ತಾನಾಗಿ ತೋರುತ್ತಿತ್ತು. ನನಗಾಗ ವಾಸ್ತವ ಜಗತ್ತಿನ ಪರಿಚಯವಿರಲಿಲ್ಲ. ಮೈ ತುಂಬ ಬಟ್ಟೆ ಧರಿಸಿದವರು, ಅವರ ತಲೆ ಸ್ವಲ್ಪ ತುಂಬಿರಬೇಕು ಎಂದು ಭಾವನೆಯಿತ್ತು. ನಾನೇನೂ ಅರಿಯದವನಂತೆ ಎದುರಿಗೆ ಕುಳಿತಿದ್ದೆ. ಅವರೆದುರಿಗೆ ಒಬ್ಬ ಹುಡುಗಿ ಸುಮಾರು ಎಂಟು ವರುಷದವಳು, ಕೈಯಲ್ಲಿ ಜಪಾನಿ ಗಿರಿಗಿಟ್ಟಿ ಹಿಡಿದು ಕುಳಿತಿದ್ದಳು. ಅವರ ಮಗಳಾಗಿರಬೇಕು. ತಂದೆಯಂತೆಯೇ ಗೌರವರ್ಣ, ಬಟ್ಟಲು ಮುಖ, ಆಕರ್ಷಕ ಕಣ್ಣುಗಳು. ಪುಟ್ಟ ಲಂಗ, ಪುಟ್ಟ ಬ್ಲೌಜು ತೊಟ್ಟಿದ್ದಳು. ನೆನಪಾದಾಗಲೆಲ್ಲ ಗಾಳಿಗೆ ತಿರುಗುವ ಚಕ್ರ—ಜಪಾನಿ ಗಿರಿಗಿಟ್ಟಿಯನ್ನು ಹಿಡಿದು, ಅದು ತಿರುಗಲು ತಂದೆಯನ್ನು ನೋಡಿ ನಗುವಳು. ಕೈ ಚಪ್ಪಾಳೆ ಬಾರಿಸುವಳು. ಅಲ್ಲಿ ಅವಳದೇ ಕಲ್ಪನೆಯ ವಿಚಾರ ಲೋಕ. ಮಲೆಯವನರಾಜಿಗಳಲ್ಲಿ ಮಾರ್ಗ ಓಡುತ್ತಿದ್ದುದರಿಂದ ದುಂಬಿ, ಚಿಟ್ಟೆ, ಜೀರುಹಕ್ಕಿಗಳ ಮೃದು-ಕರ್ಕಶ ನಿನಾದಕ್ಕೇನೂ ಕಡಿಮೆಯಿಲ್ಲ. ಆಕಾಶವನ್ನು ಮುಟ್ಟುವ

ಹಿಡಿದ ನಿನಗೂ ಇಂತಹ ವಿಷಯಗಳ ಅರಿವಿರಬೇಕು.

" ಸಿರ್ಸಿಯಲ್ಲಿ ಬಸ್ಸನ್ನು ಇಳಿಯುವಾಗ ಅವರು ನನ್ನನ್ನು ನೋಡಿ ನಕ್ಕಂತೆ ನನಗೆ ಭಾಸವಾಯಿತು. ನನ್ನನ್ನು ನೋಡಿ ಅವರಿಗೆ ತಿರಸ್ಕಾರವುಂಟಾಗಿರಬೇಕು ಎಂದುಕೊಂಡೆ. ಅವರ ಕೆಂಪು ಪೆಟ್ಟಿಗೆಯ ಆಳು ಅವರಿಗಿಂತ ಮೊದಲೇ ಇಳಿದು ಅತಿ ಚುರುಕು ಪ್ರಾಣಿಯಂತೆ ಸಾಮಾನನ್ನು ಇಳಿಸತೊಡಗಿತ್ತು. ಇಬ್ಬರಿಗೂ ಕೂಡಿ ಹೊರಲು ಭಾರವಾಗುವಂತಹ ಒಂದು ಬೆಡ್ಡಿಂಗ ಮಾತ್ರವಿತ್ತು. ಕೈಯಲ್ಲೊಂದು ಕೆನ್ವಾಸು ಬ್ಯಾಗು ಬೇರೆ. ನಾನು ಇಳಿಯುವಾಗ ಅವರೇ ನನ್ನನ್ನು ಮಾತನಾಡಿಸಿದರು :

‘ ಎಲ್ಲಿಗೆ ಹೋಗುವಿ ಮಗು ? ’

‘ ಇಲ್ಲಿಗೇ. ’

‘ ಇಲ್ಲಿ ನಿಮ್ಮ ಮನೆಯಿದೆಯೋ ? ’

‘ ಇದೆ. ’

‘ ಎಲ್ಲಿಂದ ಬಂದಿ ? ‘

‘ ಕುಮಟಾದಿಂದ. ’

‘ ಅಲ್ಲಿ ಏನು ಮಾಡುತ್ತಿ ? ’

‘ ಇಂಗ್ಲಿಷ ಶಾಲೆಗೆ ಹೋಗುತ್ತೇನೆ. ’

‘ ಯಾವ ಕ್ಲಾಸು ? ’

" ಇವನಿಗೆಲ್ಲ ಈ ಅಧಿಕಪ್ರಸಂಗವೇಕೆ? ಇವನು ಯಾವನೋ ? ನಾನು ಯಾರೋ? ನನ್ನದೆಲ್ಲ ವಿಷಯವನ್ನು ತಿಳಿದುಕೊಂಡು ಇವನೇನು ಹೆಣ್ಣು ಕೊಡುತ್ತಾನೆಯೋ? ಹೀಗೆಲ್ಲ ವಿಚಾರ ಆಗಿನ ಎಳೆತನಕ್ಕೆ ಬರುವ ಭಾವನೆಯಂತೆ ಬಂದುಬಿಟ್ಟಿತು. ಆಗಿನ್ನೂ ನನಗೆ ಹದಿನೈದು ವರುಷ. ಜನರ ಮೋರೆಯನ್ನು ಕಂಡು ಮೋರೆಯ ಗುರುತನ್ನು, ಸುಗುಣಗಳನ್ನು ಅರಿಯುವಷ್ಟು ಜ್ಞಾನವಿರಲಿಲ್ಲವಾದರೂ, ಅವರ ದಪ್ಪ ಮೋರೆಯ ಬಗ್ಗೆ ಏನೇನೋ ಹುಟ್ಟಿದ ಭಾವನೆ ಮನಸ್ಸಿನಲ್ಲಿ ತೇಲುತ್ತಿರುವುದು ವಯೋಮಾನದ ಸ್ವಭಾವಕ್ಕೆ ಸಹಜವಷ್ಟೇ ? ಸ್ವಲ್ಪ ಸಾವರಿಸಿಕೊಂಡೇ ಅವರ ಪ್ರಶ್ನೆಗೆ ಉತ್ತರ ಕೊಟ್ಟೆ :

‘ ಆರನೇ ಇಯತ್ತೆ. ’

"ಅವರೂ ನನ್ನನ್ನು ಅರಳುವ ಕಣ್ಣುಗಳಿಂದ ನೋಡಿದರು. ‘A very

ಎಂದಳು. ‘ ಹೌದಮ್ಮ. ಅಣ್ಣ ನೋಡು ಹೇಗೆ ಜಪ ಕುಡಿದ. ನೀನೂ ಬೇಗ ಕುಡಿ ’ ಎಂದರು. ಆ ಹುಡುಗಿ ಆರಿದ ಜಪವನ್ನು ನನ್ನನ್ನೇ ನೋಡುತ್ತ, ಗುಟುಕು ಗುಟುಕಾಗಿ ನುಂಗತೊಡಗಿದಳು. ಕುಡಿದ ನಂತರ ತನ್ನ ಲಂಗ ಕೊಡಹಿಕೊಳ್ಳುತ್ತಾ ‘ ಜಾಗಾವರಿ ಅವನ ಪತ್ತ್ರರ ಹೀಪಿ ಎಷ್ಟ್ಯದೆ ? ’ ಎಂದು ನನ್ನನ್ನು ನೋಡುತ್ತ ತಂದೆಯನ್ನು ಕೇಳಿದಳು. ‘ ಮನೆಯಲ್ಲಿದೆಯಮ್ಮ ’ ಎಂದರು. ‘ ಹೌದೆ ’ ಎಂದು ನನ್ನನ್ನು ಕೇಳಿದಳು. ನಾನು ಮಾತನಾಡದೆ ತಲೆ ತೂಗಿದೆ. ಅವರನ್ನು ಅಗಲುವಾಗ ನಾನು ಹೋಗುವೆನೆಂದೆ. ಅವರು ನಗುತ್ತ ತಲೆದೂಗಿದರು. ಅಬ್ಬ, ಅದೆಂತಹ ನಗು ! ಹಾಗೆ ನಗುವವರನ್ನು ನಾನು ಯಾರನ್ನೂ ನೋಡಿಲ್ಲ. ಆ ಹರುಷದ ನಗು ನನ್ನ ಹೃದಯವನ್ನು ತುಂಬಿತ್ತು.

“ ನಂತರ ಅವರ ಪರಿಚಯ ನನಗಿಲ್ಲ. ಮನೆ ಮುಟ್ಟುವತನಕ ಅವರ ಬಗ್ಗೆ ಏನೇನೋ ಗೌರವಾರ್ಹವಾದ ಭಾವನೆ ನನಗೆ ಉಂಟಾಯಿತು. ಮನೆ ಮುಟ್ಟಿದಾಗ ನನ್ನ ಒಂದೇ ಪ್ರಶ್ನೆಗೆ ಉತ್ತರ ಸಿಗದಿದ್ದುದು. ಅವರು ಯಾರು ? ಎಂದು. ಅಯ್ಯೋ ! ಅವರ ಹೆಸರನ್ನೂ ಕೇಳಲಿಲ್ಲವಲ್ಲ ಎಂದು ನನ್ನ ಮೂರ್ಖತನಕ್ಕೆ ನಾನೇ ಕೋಪಿಸಿಕೊಂಡೆ. ”

ಇನ್ನೂ ರವಿ ಏನೇನೋ ಹೇಳುವವನಿದ್ದ. ಅದೇ ಹೊಟ್ಟೆಯ ನೆನಪು ಬಂದು ಗಡಿಯಾರದತ್ತ ನೋಡಿದೆ. ಹನ್ನೆರಡು ಗಂಟೆಯಾಗಿತ್ತು. ಅಡಿಗೆ ಮನೆಯಲ್ಲಿ ಒಗ್ಗರಣೆಯ ವಾಸನೆ ಆಗಲೇ ಮೂಗಿಗೆ ಬಡಿದಿತ್ತು.

“ ರವಿ, ನಿನಗೂ ಹಸಿವಾಗಿರಬೇಕು ; ಊಟ ಮಾಡೋಣ. ”

“ ಇಷ್ಟು ಬೇಗನೇ ! ”

“ ಗಂಟೆ ಹನ್ನೆರಡಾಯಿತು. ”

“ ಅದೆಂತಹ ಗಡಿಯಾರವೋ ? ”

“ ನೀನು ಬಂದಿರುವೆಯೆಂದು ಅದರ ವೇಗವೂ ಜೋರಾಗಿರಬೇಕು. ”

“ ಶ್ರೀನಾಥ, ನನಗೆ ಸ್ನಾನ ಮಾಡಬೇಕಲ್ಲ. ”

“ ನಿನಗೆ ಜ್ವರ ಬಂದಿದೆ. ಸ್ನಾನ ಮಾಡುವುದು ಬೇಡ. ”

“ ಸ್ನಾನ ಮಾಡಿದರೆ ಏನಾಗುವುದು ? ”

"ನೋಡು, ಮೈಯಲ್ಲಿ ಇನ್ನೂ ಸಣ್ಣಗೆ ಜ್ವರವಿದೆ. ತಡಿ, ಅವಳನ್ನ ಕೇಳುತ್ತೇನೆ" ಎಂದು ಶೀಲಾಳನ್ನು ಕರೆದೆ. ಅವಳಿನ್ನೂ ಬಾಗಿಲಿಗೆ ಬಂದಿರಲಿಲ್ಲ. ರವಿ ನಕ್ಕು, "ಏನಯ್ಯಾ, ಸ್ನಾನ ಮಾಡುವದಕ್ಕೂ ನಿನ್ನ ಹೆಂಡತಿಯನ್ನು ಕೇಳಬೇಕೇ? ಇದು ನಿನ್ನ ಹೆಂಡತಿಯದೇ ಮನೆಯೆಂದು ಕಾಣುತ್ತದೆ. ನೀನು ಹೆಂಡತಿಯ ಕೆಳಗೆ ಮನೆಗೆ ಗಂಡಾದುದರಿಂದ ಗಂಡ." ಆಗಲೇ ಬಂದಿದ್ದ ಶೀಲಾ "ಏನೆನ್ನುವಿರಿ?" ಎಂದಳು. "ನಿಮಗೆ ಜ್ವರ ಬಂದಿದೆಯಲ್ಲ. ನೀವು ಸ್ನಾನ ಮಾಡುವದು ಬೇಡ. ರವಿ, ನೀವು ಹಟವೆಲ್ಲ ಬಿಡಬೇಕು."

"ಈಗ ಸ್ವಲ್ಪ ಕಡಿಮೆಯಾಗಿದೆ."

ಶೀಲಳೇ ಎಂದಳು: "ಇವತ್ತು ಜ್ವರ ಬರದಿದ್ದರೆ ನಾಳೆ ಮುಂಜಾನೆ ಸ್ನಾನ ಮಾಡಿದರಾಯಿತು."

"ಅಲ್ಲಿಯತನಕ ಸ್ನಾನ ಬೇಡವೆಂದು ನೀವು ಹೇಳುವದು?"

"ಹೌದು ರವಿ. ಅದೇ ನೆಟ್ಟಗೆ."

"ನೀ ಸುಮ್ಮನಿರು. ಸ್ನಾನ ಮಾಡಿಯೇ ಊಟ ಮಾಡುವೆ. ಏನಾಗುವದೋ ನೋಡೋಣ."

"ರವಿ, ಜ್ವರ ಬಂದ ಮೇಲೆ ನೋಡುವದಿಲ್ಲ. ಜ್ವರ ಬರುವದಕ್ಕಿಂತ ಮೊದಲೇ ನಾವು ಯೋಚಿಸಬೇಕಲ್ಲ. ಜ್ವರ ಬಂದ ಮೇಲೆ ಯೋಚಿಸಿದರೆ ನಮಗೇನು ಲಾಭ?"

ಶೀಲಳೂ ಅದನ್ನು ಸೂಚಿಸುವಂತೆ ಹೇಳಿದಳು: "ಅದೇ ನಿಜ. ಸ್ನಾನ ಬಿಡಬಹುದಲ್ಲವೆ?"

"ನೀವು ಅನ್ನುವದು ನಿಜ, ಶೀಲಮ್ಮನವರೇ. ಆದರೆ ಅನ್ನದ ಒಂದಗುಳೂ ಸಹ ಸ್ನಾನ ಮಾಡದೆ ನನ್ನ ಶರೀರದಲ್ಲಿ ಇಳಿಯಲಿಕ್ಕಿಲ್ಲ."

"ಅನ್ನ ಬೇಡ. ಗಂಜಿ ಕುಡಿದರಾಯಿತು."

"ಗಂಜಿ ಕುಡಿದರೆ ಮತ್ತೂ ಹಸಿವು ಹೆಚ್ಚುತ್ತದೆ. ಗಂಜಿ ಕುಡಿದು ನನಗೆ ಅಭ್ಯಾಸವಿಲ್ಲ. ಸ್ನಾನ ಮಾಡಿ ನೇರವಾಗಿ ಊಟ ಮಾಡಿಯೇ ಬಿಡುತ್ತೇನೆ. ಏನಾಗುವದೋ ಆಗುತ್ತದೆ. ಏನೆಲ್ಲ ಆಗುವದೆಂದು ನಾವು ಸುಮ್ಮನೆ ಕೈಕಟ್ಟಿ ಕೂಡ್ರುವದೆ?"

ರವಿ ಶರ್ಟನ್ನು ತೆಗೆಯುವಾಗ ಕಿಸೆಯಲ್ಲಿದ್ದ ಗಡಿಯಾರ ಹಾಸಿಗೆಯ ಮೇಲೆ ಬಿತ್ತು. ನೆಲದ ಮೇಲೆ ಬಿದ್ದಿದ್ದರೆ ಗಾಜು ಒಡೆದು ಮಷಿನ್ ಹಾಳಾಗುತ್ತಿತ್ತು. ಅವನ ಹತ್ತಿರ ಗಡಿಯಾರವಿದೆಯೆಂದು ನನಗೆ ಕಲ್ಪನೆಯೂ ಇರಲಿಲ್ಲ. ಎತ್ತಿ ನೋಡಿದಾಗ ಅದು ಉತ್ತಮ ಗಡಿಯಾರವಾಗಿತ್ತು. ಆದರೆ ಅದು ಬಂದಾಗಿತ್ತು.

"ರವಿ, ಗಡಿಯಾರ ಹಾಳಾಗಿದೆಯೆ?"

"ಇಲ್ಲ."

"ಕೀಲಿ ಕೊಡಲಿಲ್ಲವೆ?"

"ಇಲ್ಲ, ಸುಮಾರು ಏಳೆಂಟು ದಿವಸಗಳಾದವು."

"ಏಕೆ?"

"ನನ್ನದೇ ನನಗೆ ಭಾರವಾಗಿರುವಾಗ ಅವನ್ನೆಲ್ಲ ನೋಡುತ್ತ ಕುಳಿತುಕೊಳ್ಳುವವರು ಯಾರು? ಜೇಬಿನಲ್ಲಿ ಇದ್ದುದೇ ಪುಣ್ಯ. ನನ್ನ ಹತ್ತಿರ ಯಾವ ವಸ್ತುವೂ ಸ್ಥಿರವಾಗಿ ಉಳಿಯುವದಿಲ್ಲ; ಕಳೆಯುತ್ತವೆ. ಇಲ್ಲವಾದರೆ ತಾವಾಗಿಯೇ ಇಲ್ಲವಾಗಿ ಹೋಗಿಬಿಡುತ್ತವೆ."

ನಾನೇ ಗಡಿಯಾರಕ್ಕೆ ಕೀಲಿ ಕೊಟ್ಟು ಅಲ್ಲೇ ಟೇಬಲ್ಲಿನ ಮೇಲೆ ಇರಿಸಿದೆ. ಸುಮ್ಮನೆ ಹರಟೆ ಹೊಡೆದು ವೇಳೆ ಕಳೆಯುವದು ಬೇಡವೆಂದು ನಾವಿಬ್ಬರೂ ಸ್ನಾನಗೃಹಕ್ಕೆ ಹೋದೆವು. ಶೀಲಾ ನಮ್ಮ ವಾಚಾಳಿತನವನ್ನು ನೋಡಿ ಒಳಗಿನಿಂದಲೇ "ಮಾತಿನಲ್ಲಿಯೇ ಮನೆ ಕಟ್ಟದೆ ಉಳಿದರೆ ಸಾಕು" ಎಂದಳು. ತೆಗೆದ ಬಾಯಿಗೆ ರವಿಯ ಉತ್ತರವಿದೆಯಲ್ಲ. "ಶೀಲಮ್ಮನವರು ಬಹಳ ಬಿರುಸಾದವರಾಗಿದ್ದಾರೆ. ಎಲ್ಲದಕ್ಕೂ ದೋಷ ಹೊರಿಸುತ್ತಾರೆ. ನಾಳೆ ನಾನು ಇಲ್ಲಿಂದ ಹೊರಡುವದಾದರೆ, ಈ ಮನೆಗೆ ಕಾಲಿಟ್ಟ ತಪ್ಪಿಗೆ ಪರ್ಮಿಶನ್ ತೆಗೆದುಕೊಳ್ಳಬೇಕಾಗುವದೇನೋ?"

ಅಲ್ಲಿಯೂ ಸಿಗರೇಟಿಗೆ ಸ್ವಾಗತ! ರವಿಯ ಸಿಗರೇಟ ಮುಗಿಯಲೆಂದು ನಾವು ಸ್ನಾನ ಮಾಡತೊಡಗಿದೆ.

ನೆಂದರೆ, ಅನುಮಾನಕ್ಕೆ ಎಡೆಯಾಗುವದು. ಉತ್ತರಕ್ಕಾಗಿ ನಾನು ದೋಲಾಯಮಾನನಾಗಿ ನಿಂತಿರುವಾಗ ಒಳಗಿನಿಂದಲೇ ರವಿ ಕರೆದನು. "ಗೌರಾ."

ಅವಳ ಮೋರೆ ಅರಳಿತು. ನನ್ನನ್ನು ಲಕ್ಷಿಸದೆ ಒಳನಡೆದಳು. ಅವಳ ಹಿಂದೆಯೇ ನಾನು ರೂಮಿಗೆ ಬಂದಾಗ ರವಿ ಅವಳ ಕೈ ಜಗ್ಗಿ, ಹತ್ತಿರವೇ ಕೂತ್ರಿಸಿಕೊಂಡಿದ್ದ. ಅವಳ ತಲೆಯನ್ನು ನೇವರಿಸುತ್ತ ನೇವರಿಸುತ್ತ, ಮೋರೆಯನ್ನು ನೋಡುತ್ತಿದ್ದನು. ಇಬ್ಬರ ಕಣ್ಣುಗಳಲ್ಲಿಯೂ ನೀರು ಬಂದವು. ಅವಳು ತುಟಿ ಪಿಟಕ್ಕೆನ್ನಲಿಲ್ಲ. ರವಿ ಮಾತಾಡಲಿಲ್ಲ. ಬಾಯಿ ತೆರೆದಾಗ ಶಬ್ದಗಳೇ ಹೊರಡಲಿಲ್ಲ. ನನಗೂ ಏನಾಯಿತೋ ಎಂದು ಸ್ಮೃತಿ ನಶಿಸಿದ್ದಿತು. ಅವಳಿಗೆ ಎದೆಯ ನೋವೆಂದು ಗೊತ್ತಾಗಿರಬೇಕು. ಅವಳು ತನ್ನ ಕೈಯಿಂದ ಎದೆಯನ್ನು ಒತ್ತಿದಳು. ರವಿ ಹಾಗೆಯೇ ಹಾಸಿಗೆಯ ಮೇಲೆ ಉರುಳಿದ. ಎಲ್ಲವೂ ಸ್ತಬ್ಧ; ಎಲ್ಲವೂ ನೀರವ; ಹತ್ತು ನಿಮಿಷಗಳು ಕಳೆದ ಮೇಲೆ ರವಿ ಅವಳ ಮೈಮೇಲೆ ಕೈಯಾಡಿಸುತ್ತ ಮೆಲ್ಲನೆ ಹೇಳಿದನು: "ಸ್ನಾನವಾಗಿಲ್ಲವಲ್ಲ ಗೌರಾ, ಸ್ನಾನ ಮಾಡಿ ಊಟ ತೀರಿಸು. ನಾನು ವಿಶ್ರಾಂತಿ ತೆಗೆದುಕೊಳ್ಳುವೆ." ಶೀಲಾ ಈ ವೇಳೆಯಲ್ಲಿ ಬಾಗಿಲಲ್ಲಿ ನಿಂತುದರಿಂದ ಅವಳು ಗೌರಾನನ್ನು ಬಲುಮೆಯಿಂದ ಕೈಹಿಡಿದು ಒಳಗಡೆ ಕರೆದುಕೊಂಡು ಹೋದಳು. ಅಪರಿಚಿತ ಹೆಂಗಸರು ಪರಿಚಿತರಾಗಿ ಕೂಡಿದ ಮೇಲೆ ಕೇಳುವದೆ? ಅವರ ಬಲುಮೆ ಗೆಳೆಯ-ಗೆಳೆಯರ ಬಲುಮೆಗಿಂತ ಸಾವಿರಾರು ಪಾಲು ಬಲುಮೆಯುಳ್ಳದು, ಬಲವತ್ತರವಾದುದು.

ಈ ದಿನ ರವಿಗೊದಗಿದ ನೋವು ನನಗೆ ಹೊಸದು. ಅದರ ಕಾರಣ ರವಿಯೊಡನೆ ಕೇಳಿದಾಗ ಒಮ್ಮೊಮ್ಮೆ ಆ ರೀತಿಯಾಗುವದುಂಟೆಂದು ಹೇಳಿದನು. ಸ್ವಲ್ಪ ಬಿಸಿನೀರಿನ ಶಾಕ ಕೊಟ್ಟರೆ ನೋವು ಕಡಿಮೆಯಾಗುವದಂತೆ.

ಗೌರಾ ಲಕ್ಷ್ಮಿಯ ತಂಗಿಯಂತೆ.

ಅವರಿಗೂ, ಇವಳಿಗೂ ಏನೂ ಹೆಚ್ಚು-ಕಡಿಮೆಯಿರಲಿಲ್ಲ. ಇಷ್ಟೇ— ಇವಳು ಸ್ವಲ್ಪ ತೆಳ್ಳಗೆ, ಮತ್ತು ಒಂದು ಚೂರು ಎತ್ತರವಾಗುವಳೇನೋ. ಬಣ್ಣ ಭೇದವೆಣಿಸಲಾರದಷ್ಟು ಸ್ವಲ್ಪ ಹೆಚ್ಚು ಬಿಳುಪಂತೆ, ರವಿ ಹೇಳಿದ. ಅಕ್ಕ-ತಂಗಿಯರನ್ನು ಒಟ್ಟಿಗೆ ನಿಲ್ಲಿಸಿದರೆ ಒಂದೇ ಬಸುರಿಂದ ಬಂದವರಂತೆ ಕಾಣುವಂದು ಇರಬೇಕು. ನಾನೀಗಲೇ ಗೌರಳನ್ನು ನೋಡಿದ್ದು. ಲಕ್ಷ್ಮಿಯನ್ನು ನೋಡಿದ್ದರೆ ಅದು ಬಹುಕಾಲದ ಹಿಂದೆ. ಅದೂ ಹಾದಿಯಲ್ಲಿ ಹಾದು ಹೋಗು

ತ್ತಿರುವ ಹೆಣ್ಣುಮಗಳನ್ನು ನೋಡುವಂತೆ. ಹೀಗಿರುವಾಗ ಅವಳ ನಿಶ್ಚಿತ ರೂಪು ರೇಷೆ ನನಗೆ ಸರಿಯಾಗಿ ತಿಳಿಯುವುದು ಹೇಗೆ ?

ಗೌರಾ ಈಗ ತಲೆ, ಮೈ ಸ್ನಾನ ಮಾಡಿ ಊಟ ಮಾಡಲು ಹೋಗಿದ್ದಳು. ಶೀಲಾ-ಗೌರಾ ಇಬ್ಬರೇ ಒಳಗಡೆ. ಅವರದೇ ಸ್ವತಂತ್ರ ಸಾಮ್ರಾಜ್ಯ. ಹೆಣ್ಣುಮಕ್ಕಳ ಸ್ವಭಾವದಂತೆ ಅದೇನನ್ನೋ ಸಣ್ಣಾಗಿ ಮಾತಾಡುತ್ತಿದ್ದರು. ಗೌರಾ ಬೇಡ ಬೇಡವೆಂದರೂ ಇನ್ನೂ ಸ್ವಲ್ಪ ಎಂದು ಅತ್ತೆಯರಿಗೆ ಊಟ ಮಾಡಿಸುವಂತೆ ಊಟ ಮಾಡಿಸುತ್ತಿದ್ದಳು ಶೀಲಾ. ನಾನು ಒಳಗಡೆ ಹೋದಾಗ “ ನೀವಿಲ್ಲೇಕೆ ಬಂದಿರಿ ? ” ಎಂದು ಶೀಲಾ ಕೇಳಿದಳು.

“ ನೀವೇನಾದರೂ ನಮ್ಮ ಗುಟ್ಟನ್ನು ಆಲಿಕೊಳ್ಳುತ್ತಿದ್ದರೆ ? ”

“ ಅದೇನು ದೋಷವಲ್ಲವಲ್ಲ ? ”

“ ಇನ್ನೊಬ್ಬರ ಗುಟ್ಟನ್ನು ಮಾತಾಡುವದು ದೋಷ. ”

“ ಅದನ್ನು ಕೇಳುವದು ? ”

“ ನಾನು ಕೇಳಲಿಕ್ಕೆ ಬರಲಿಲ್ಲವಲ್ಲ ? ”

ಗೌರಾ ನನ್ನ ಮೋರೆ ನೋಡುತ್ತ ನುಡಿದಳು :

“ ನೀವೂ ಸಹ ಭಾರೀ ಆಸಾಮಿ. ”

“ ಹಾಗೇಕೆ ಹೇಳುವಿರಿ ? ”

“ ನಾನು ರವಿಯಣ್ಣನಿದ್ದಾನೆಯೇ ಎಂದು ಕೇಳಿದಾಗ ನೀವು ಉತ್ತರ ಕೊಡದೆ ಅನುಮಾನಸ್ಥರಾಗಿ ನಿಂತಿರಿ. ”

“ ನಿಜ ; ನೀವು ಯಾರು ಎನ್ನುವ ಯೋಚನೆಯಲ್ಲಿ ಬಿದ್ದೆ. ನಿಮಗೂ ಗೊತ್ತಿರಬೇಕು. ರವಿ ಒಮ್ಮೊಮ್ಮೆ ಯಾರೊಡನೆಯೂ ಮಾತಾಡಲಿಚ್ಛಿಸುವದಿಲ್ಲ. ಕಾರಣ ಅದಕ್ಕಾಗಿಯೇ ತಾವು ಯಾರು ? ಎಂದೆಲ್ಲ ಕೇಳಿದೆ. ರವಿ ಆಗ ನಿಮ್ಮನ್ನು ಕರೆಯುವದಿದ್ದರೆ ನಾನೇ ಅವನನ್ನು ವಿಚಾರಿಸಿ ಅವನ ಒಪ್ಪಿಗೆಯಿದ್ದರೆ ನಿಮ್ಮನ್ನು ಒಳಗಡೆ ಕರೆದೊಯ್ಯುತ್ತಿದ್ದೆ.”

“ ಅವರು ಮಲಗಿದ್ದರೆ ನನ್ನನ್ನು ಹಾಗೇ ಕಳಿಸುತ್ತಿದ್ದಿರಿ. ”

“ ಅಂತಹ ಪ್ರಸಂಗವೇನೂ ಬರಲಿಲ್ಲವಲ್ಲಾ. ”

ಶೀಲಾ ನಗುತ್ತ, “ ಅವಳ ಊಟ ಆಗಲಿ, ದಣಿದು ಬಂದಿದ್ದಾಳೆ. ನಂತರ

ನಿಮ್ಮ ಪ್ರಾಣವೆಲ್ಲ ಉರುಳಲಿ" ಎಂದಳು. ಗೌರಾ ಊಟ ಮುಂದುವರಿಸಿದಳು. ನಾನು ಹೊರಗೆ ಬಂದೆ; ಆಗ ರವಿಗೆ ನಿದ್ರೆ ಹತ್ತಿತ್ತು.

ನಾನು ಹೊರಗಡೆ ಹೋದವನು ತಿರುಗಿ ಬರುವಾಗ ರವಿ ಅಸ್ತವ್ಯಸ್ತವಾಗಿ ಮಲಗಿಬಿಟ್ಟಿದ್ದನು. ಅವನಿಗೂ ಚೆನ್ನಾಗಿ ನಿದ್ರೆ ಬಂದಿರಬೇಕೆಂದು ತೋರುತ್ತದೆ. ಒಳಗಡೆ ಶೀಲಾ ಚಹಾ ಮಾಡುವ ಕೆಲಸದಲ್ಲಿ ತೊಡಗಿದ್ದಳು. ಗೌರಾ ಸೀರೆ ತೊಳೆಯುತ್ತಿದ್ದಳು. ಬಹುಶಃ ಅವಳೂ ಮಲಗಿ ಈಗ ತಾನೇ ಎದ್ದಿರಬೇಕು. ಸ್ನಾನ ಮಾಡುವಾಗ ಬಿಚ್ಚಿದ ತಲೆ ಇನ್ನೂ ಕಟ್ಟಿರಲಿಲ್ಲ. ಕಣ್ಣುಗಳು ಕೆಂಪಾಗಿದ್ದವು. ನಾನು ಬಂದುದನ್ನು ಕಂಡು, ತುಟಿಯನ್ನು ನಸು ಬಿಚ್ಚಿದಳು. "ನಿದ್ರೆ ಮುಗಿಯಿತೆ ?" ಎಂದೆ ನಾನು.

"ಮುಗಿದಂತಾಯಿತು."

"ರವಿ ಏಳಲೇ ಇಲ್ಲವೆಂದು ಕಾಣುತ್ತದೆ."

"ಅವರು ಇನ್ನೂ ಎದ್ದಿಲ್ಲವೆಂದು ಶೀಲಕ್ಕನವರು ಎನ್ನುತ್ತಿದ್ದರು."

"ನಿಮಗೆ ಈ ಊರು ಹೊಸದಲ್ಲವೆ ?"

"ಇಲ್ಲ; ನಾವು ಮೊದಲು ಇಲ್ಲಿದ್ದೆವು."

"ಯಾವಾಗ ?"

"ನಾನಾಗ ಸಣ್ಣ ವಯಸ್ಸಿನವಳಿದ್ದೆನು."

"ನಾನು ದೊಡ್ಡ ಆಶೆಯನ್ನಿಟ್ಟುಕೊಂಡಿದ್ದೆ."

"ನಮ್ಮ ಕಾರವಾರ ತೋರಿಸಬೇಕೆಂತಲೆ ?"

"ಇದೊಂದೇ ಅಲ್ಲ. ಇಲ್ಲಿಯ 'ಕಾನ್ವೆಂಟ ಸ್ಕೂಲ' ಅಲ್ಲಿಯ 'ಫಾದರ್ಸ ಮದರ್ಸ' ಹಾಗೂ ಬದಿಯಲ್ಲಿರುವ ಕಲೆಕ್ಟರ, ಜಜ್ಜ ಇವರುಗಳ ಬಂಗ್ಲೆಗಳು, ಇನ್ನು ಇಲ್ಲಿಯೇ ಸಮೀಪದಲ್ಲಿರುವ ಸದಾಶಿವಗಡ. ಅಲ್ಲಿಯ ಕೋಟೆ ಪ್ರಸಿದ್ಧ ಹಾಗು ಸುಂದರವಾದದ್ದು."

"ಈ ನಿಮ್ಮ ಆಶೆಗಳನ್ನು ತೀರಿಸಲು ಸಾಧ್ಯವಿಲ್ಲ."

"ಕಾರಣ ?"

"ನಾನು ಇಲ್ಲಿ ಬಹಳ ದಿನ ಇರುವಂತಿಲ್ಲ."

"ಹಾಗಾದರೆ ಇಷ್ಟು ಗಡಿಬಿಡಿಯಲ್ಲಿ ಬಂದೂ ಪ್ರಯೋಜನವಾಗಲಿಲ್ಲವಲ್ಲ."

"ನಾನು ಇಲ್ಲಿಗೆ ಬರುವ ಯೋಚನೆಯಲ್ಲಿರಲಿಲ್ಲ. ರವಿಯಣ್ಣ ಇಲ್ಲಿ ಇದ್ದಾರೆಂದು ಧಾರವಾಡದಲ್ಲಿ ತಿಳಿಯಿತು. ಅವರನ್ನೊಮ್ಮೆ ನೋಡಿಯೇ ಹೋಗೋಣವೆಂದು ಅಕ್ಕನಿಗೆ ಪತ್ರ ಹಾಕಿ ಇತ್ತ ಹೊರಳಿದೆ. ನೀವೂ ಸಹ ರವಿಯಣ್ಣನನ್ನು ತೋರಿಸದೆ ತಿರುಗಿ ಕಳಿಸುವ ಯೋಚನೆಯಲ್ಲಿ ಇದ್ದಿರಿ." ಎಂದು ನನ್ನನ್ನು ನೋಡಿ ನಕ್ಕಳು.

"ತೆಗೆದ ಬಾಯಿಗೆ ಬಾಣ ತಯಾರಿಸಿಯೇ ಇಟ್ಟಿರುವಿರಿ."

"ಅವೂ ಸಮಯಕ್ಕೆ ಬೇಕಾಗುತ್ತವೆ."

ಶೀಲಾಳದು ಚಹಾ ಮಾಡಿ ಆಗಿತ್ತು. "ಚಹಾ ಕುಡಿದುಕೊಂಡು ನಿಮ್ಮ ಪುರಾಣ ಬಿಚ್ಚಿ" ಎಂದಳು. ನನಗೂ ಅಷ್ಟೇ ಬೇಕಾಗಿತ್ತು. ಬಂದು ಚಹಾದ ಕಪ್ಪಿಗೆ ಕೈಹಾಕಿದೆ. ಅವಳಿಗೆ ರವಿಯ ನೆನಪಾಗಿರಬೇಕು. "ಮನೆಯಲ್ಲಿ ಯಾರಿದ್ದಾರೆಂದೂ ಗೊತ್ತಾಗುವದಿಲ್ಲ; ನಿಮ್ಮ ಗೆಳೆಯರನ್ನು ಕರೆಯುವದಿಲ್ಲವೆ ?" ಎಂದಳು.

"ಅವರು ಎದ್ದಿದ್ದಾರೋ ?" ಗೌರಾಳ ಪ್ರಶ್ನೆ.

"ಇಲ್ಲ." ಎಂದೆ.

"ಹಾಗಾದರೆ ಅವರು ಎದ್ದ ನಂತರ ಚಹಾ ಕೊಟ್ಟರಾಯಿತು." ಗೌರಾ ಶೀಲಾ ಎತ್ತಿದ ಫಿರ್ಯಾದಿಯನ್ನು ರಾಜಿಗೆ ತಂದಳು.

ಶೀಲಾ ಚಹ ಕುಡಿಯುತ್ತಿರುವಾಗ ಗೌರಾಳಿಗೆ ಹೇಳಿದಳು, "ಗೌರಾ, ಚಹ ಕುಡಿದ ನಂತರ ತಲೆ ಬಾಚಿಕೋ. ದಿನಾಲು ಇವರೇ ತಿರುಗಾಡಿಕೊಂಡು ಬರುತ್ತಾರೆ. ನಾನೊಬ್ಬಳೇ ಆದುದರಿಂದ ಎಲ್ಲಿಗೆ ಹೋಗಲೂ ಬೇಸರವಾಗುತ್ತಿತ್ತು. ಇವತ್ತು ನಾನೂ ನೀನೂ ಕೂಡಿ ಸುತ್ತಾಡಿ ಬರೋಣ."

"ಗೌರಾ ಬರುತ್ತಾಳೋ ಕೇಳು ?"

"ಬರದೇ ನಿಮ್ಮ ಹಾಗೇನೂ ಇಲ್ಲದ ನೆಪ ತೆಗೆಯುವದಿಲ್ಲ."

ನಾನೆಂದೆ, "ಗೌರಾ ಬಲು ಜಾಣೆ; ಇನ್ನೂ ನೀವು ಬಂದು ಮೂರು ತಾಸು ಮುಗಿಯಲಿಲ್ಲ. ಈಗಲೇ ಅಧಿಕಾರ ಚಲಾವಣೆಗೆ ಸುರುವಾಯಿತು. ಇವಳು ಮೊದಲೇ ಕಾರವಾರದ ಉಪ್ಪುನೀರು ಕುಡಿದ ಮೇಡಮ್‌ಸಾಬ. ನಾಳೆ ಅಡಿಗೆ ಮಾಡಿ ಎಂದು ಹೇಳಲೂ ನಾಚುವದಿಲ್ಲ."

ಗೌರಾ ನಕ್ಕಳು, ಉತ್ತರ ಕೊಡಲಿಲ್ಲ. 'ಉಪಾಯವಿಲ್ಲ; ಮನೆ ಕಾಯುವ

ಕೆಲಸ ಬಂತಲ್ಲ' ಎಂದು ಗೊಣಗಿದೆ. "ಬಹಳ ದಿನಕ್ಕೆ ಒಂದು ಸಾರೆ ಹಾದರೆ ಏನೂ ಆಗುವದಿಲ್ಲ; ಒಂದು ದಿನವಾದರೂ ನೋಡಿ, ಮನೆ ಕಾಯೋದು ಎಷ್ಟು ಕಷ್ಟಾಂತ." ಎಂದು ಶೀಲಾಳ ಉತ್ತರ ಬಂತು. ಅವಳದು ಯಾವಾಗಲೂ ತೆಗೆದ ಮಾತಿಗೆ ಉತ್ತರ ಕಿಡಿಯಾಗಿರೋದೇ.

"ಅಡಿಗೆಯನ್ನು ಮಾಡಬೇಕೆ ?"

"ಮಾಡಿದರೂ ಅಡ್ಡಿಯಿಲ್ಲ."

ಗೌರಾ ಕೇಳಿದಳು, "ನಿಮಗೆ ಅಡಿಗೆ ಮಾಡಲು ಬರುವದೆ ?"

"ಬರುವದಿಲ್ಲ. ಆದರೆ ಈ ಆಸಾಮಿ ಬಿಡಬೇಕಲ್ಲ? ಶುದ್ಧ ಕಾರಭಾರಿ ಹೆಂಗಸು ಎಂದೆನಲ್ಲ. ಬುದುದೇನೂ ಒಂದು ಚೂರು ಹೆಚ್ಚು ಹರಿತದೆ; ನನಗೇ ಪಾಠ ಹೇಳುತ್ತಾಳೆ; ಅದು ಹಾಗೆ ಹೀಗೆ ಎಂದು. ನಾನು ಮಾಡಿದ ಅಡಿಗೆ ಹಾಳಾದರೂ ಅವಳಿಗೆ ಅದು ಬಹು ರುಚಿಯಾಗುವದಂತೆ. ಒಮ್ಮೆ ಬದನೆ ಕಾಯಿ ಸಾಸಿವೆಗೆ ಉಪ್ಪು ಹಾಕಲೇ ಇಲ್ಲ. ನನಗೆ ಅದಕ್ಕೆ ಏನು ಹಾಕುವದನ್ನು ಮರೆತೆ ಎಂದು ಯೋಚನೆ. ಈಕೆಯ ಮಾತೇ ಬೇರೆ; ನನಗೆ ರಾಗ ಮಾಡಿ ಹೇಳುತ್ತಾಳೆ. 'ನನಗಂತೂ ನಿನ್ನೆಯ ಮುಳ್ಳುಗಾಯಿಯ ಪಲ್ಯೆಗಿಂತ ಇವತ್ತಿನ ಸಾಸಿವೆಯೇ ಚೆನ್ನಾಗಿದೆ. ಸ್ವಲ್ಪ ಉಪ್ಪು ಕಡಿಮೆಯಾಗಿರಬೇಕಲ್ಲ?' ಎಂದು ಉಪ್ಪು ಇಸಿದುಕೊಂಡು ಪಟ್ಟಾಗಿ ಹೊಡೆದಳು. ನಾನೂ ಉಪ್ಪು ಹಾಕಿಕೊಂಡಾಗ, ಹೇಗೋ ಒಂದಿಷ್ಟು ಅನ್ನ ಹಸಿದ ಹೊಟ್ಟೆಗೆ ಹೋಯಿತು. ಇದು ಹಿಂದಿನ ಸಾರೆ ಅವಳು ಹೊರಗೆ ಕೂತಾಗ. ಈ ಸಾರೆ ನಾನು ಹೇಳಿಯೇ ಬಿಟ್ಟಿದ್ದೇನೆ—ಹೋಟೇಲಿನಿಂದಲೇ ಊಟ ತರಿಸೋಣ ಎಂದು; ರೂಪಾಯಿಗಳೆರಡು ಕಳೆದರೂ ಚಿಂತೆಯಿಲ್ಲ."

"ಅವರ ಸ್ವಭಾವ ನಿನಗೆ ಗೊತ್ತೇ ಇಲ್ಲ, ಗೌರಾ. ಅವರ ಮಾತು ಕೇಳಬೇಡ; ನೀನಿತ್ತ ಬಾ. ನಮ್ಮ ಮನೆಗೆ ಯಾರಾದರೂ ಬಂದರೆ, ನನ್ನನ್ನು ದೂರಿದ ಹೊರತೂ ಅವರಿಗೆ ಸಮಾಧಾನವಿಲ್ಲ."

ನಡುವೆಯೇ ಗೌರಾ ಕೇಳಿದಳು :

"ಈ ಸಾರೆ ಶೀಲಕ್ಕ ಹೊರಗಾಗದೇ ಇದ್ದರೆ ?"

ಅದರರ್ಥ ನನಗಾಗಲೇ ಇಲ್ಲ. ಶೀಲಾ "ಗೌರಾ, ಅವರೊಡನೆ ಕುಣಿತಕ್ಕೆ ಸುರು ಮಾಡಿದೆಯಾ ?" ಎಂದಳು. ಆಗ ತಿಳಿಯಿತು; ಶೀಲಾಗೆ

ಬಸುರಿಯಾಗುವ ಲಕ್ಷಣ ಬಂದರೆ ಎಂದು. 'ನಿನ್ನ ಬಾಯಿಗೆ ಸಕ್ಕರೆ ಹಾಕಿಸುತ್ತೇನೆ' ಎಂದೆ. ಇನ್ನೂ ಹಾಸ್ಯದ ಎಳೆಹುಡುಗಿ ಗೌರಾ ಶೀಲಾಳ ಮೋರೆ ನೋಡಿ ಹೊಟ್ಟೆತುಂಬ ನಕ್ಕಿದ್ದಳು. ಎಂತಹ ಸಾಧುಹುಡುಗಿ ಎಂದು ಮನಸ್ಸಿನಲ್ಲಿಯೇ ಎಂದುಕೊಂಡೆ.

ನಮ್ಮದಿಷ್ಟೆಲ್ಲ ಪುರಾಣವಾಗುವದರೊಳಗೆ ಹೊರಗಡೆ ರವಿ ಎದ್ದಿದ್ದನು. ಅವನಿಗೆ ಸಿಗರೇಟ ಸೇದಲು ಬೆಂಕಿ ಪೊಟ್ಟಣ ಬೇಕಾಗಿತ್ತೆಂದು ಕಾಣುತ್ತದೆ; ಅದಕ್ಕಾಗಿ ನನ್ನನ್ನು ಕೂಗಿದನು. ಸಿಗರೇಟ ಹೊತ್ತಿಸಿ ಹೊಗೆ ಬಿಡುತ್ತಿರುವಾಗ ಗೌರಾ ಚಹ ತಂದಳು. "ಚಹ ಆರಿ ಹೋಯಿತು; ಬಿಸಿಗೆ ಇಡು. ನಾನೀಗಲೇ ಬರುತ್ತೇನೆ" ಎಂದು ಅವನು ಉದ್ದವಾದ ಹೊಗೆಯ ಸುರುಳಿಯನ್ನು ಬಿಡತೊಡಗಿದನು. ಆ ಮಹದ್ವ್ಯಾಪಾರವನ್ನು ನೋಡಿ, ಗೌರಾಳೂ ಹೌಹಾರಿ ಒಂದೆರಡು ನಿಮಿಷ ಅವನ್ನೇ ನೋಡುತ್ತ ನಿಂತು, ಒಳಗಡೆ ಹೋದಳು. ಅವಳಿಗೂ ಈ ಹೊಗೆಯ ವಿಕಾರರೂಪ ವಿಪರೀತವಾಗಿ ನಾನಾ ಯೋಚನೆಗಳನ್ನು ಉಂಟುಮಾಡಿರಬೇಕು.

ಶೀಲಾ-ಗೌರಾ ತಯಾರಾಗಿ ಹೊರಟು ನಿಂತಾಗ, ಒಮ್ಮೆ ರವಿ ಗೌರಾಳನ್ನು ದಿಟ್ಟಿಸಿ ನೋಡಿದನು. ಗೌರಾ ಒಮ್ಮೆ ನೋಡಿ, ದೃಷ್ಟಿ ತಗ್ಗಿಸಿ, "ನಾವು ಹೋಗಿ ಬಂದರಾಗದೆ?" ಎಂದು ಕೇಳಿದಳು. ರವಿ ಬದಲಿಗೆ ಏನುತ್ತರ ಕೊಡುತ್ತಾನೋ ಎನ್ನುವ ಶಂಕೆಯಲ್ಲಿ ನಾನಿದ್ದೆ. ಸ್ವಲ್ಪ ನಿಂತು ಸಣ್ಣ ದನಿಯಲ್ಲಿ, "ನೀನು ನನ್ನನ್ನು ಹುಡುಕಲು ಬಂದು ಹುಡುಕಿದಿ; ದಿನ ಒಪ್ಪತ್ತು ಉಳಿದು ಹೋಗುವವರಾದ್ದರಿಂದ ಊರೆಲ್ಲ ಸುತ್ತಾಡಿ ಬನ್ನಿ. ಊರಲ್ಲಿ ಏನಿಲ್ಲದಿದ್ದರೂ ಸಮುದ್ರ ದಂಡೆಗೋಡುವ ಮಾರ್ಗ, ಮಾರ್ಗಕ್ಕೆ ನೆರಳು ನೀಡುತ್ತ ಹೊಂದಿ ನಿಂತ ಸಾಲು ಗಾಳಿಯ ಮರಗಳು, ಸಮುದ್ರವನ್ನೇ ಸುತ್ತುತ್ತಿರುವಂತೆ ಕಾಣುವ ಬೆಟ್ಟಗಳ ಸಾಲು, ಎಂತಹ ವಿರಹಿಯನ್ನಾದರೂ ಒಮ್ಮೆ ಸಾನಂದ ಮುದಿಯಾಗಿ ಮಾಡುತ್ತವೆ; ಅವನ ಅಂತರಾತ್ಮವನ್ನು ಅಮರಾನಂದದಿಂದ ಕುಲಿಕಿ ಒಮ್ಮೆಯಾದರೂ ಈ ಜಡಮನಸ್ಸನ್ನು, ಈ ನಶ್ವರ ಶರೀರವನ್ನು ಪುನೀತಗೊಳಿಸುತ್ತವೆ." ಎಂದು ಶೀಲಳನ್ನುದ್ದೇಶಿಸಿ, ನೋಡಿ, "ಗೆಳತಿಯರ ಮನೆಗಳನ್ನು ಸುತ್ತಿಸಿ ಕತ್ತಲೆ ಮಾಡಿಕೊಂಡು ಬರಬೇಡಿ; ಆ ಹುಡುಗಿಗೆ ಇಲ್ಲಿಯ ಹಾಳು ಹನುಮಪ್ಪನ ಗುಡಿಗಳನ್ನು ಸುತ್ತಿಸಿ, ಪಾದ್ರಿಗಳ ಚರ್ಚನ್ನು

ತೋರಿಸಿರಿ, ಮತ್ತೆ. ಊರಿಗೆ ಹೊಸದಾಗಿ ಬಂದ ಹುಡುಗಿ; ಎಲ್ಲವನ್ನೂ ನೋಡಿಕೊಂಡು ಬರಲಿ " ಎಂದನು. ಅವನ ಈ ಒಂದೇ ಶ್ವಾಸದ ಶಬ್ದರಾಶಿಗೆ ನಾನು ಅಜಪ್ಪಾಗಿ ನಿಂತೆ; ಅವರು ತಪ್ಪಿತಸ್ಥ ಕೈದಿಯಂತೆ ಕೋಲಾಗಿ ನಿಂತಿದ್ದರು. ರಾಯರ ಬಾಯಿಯಿಂದ ಮತ್ತೂ ಅಮರ ವಾಣಿ ಬರುವದೋ ಎಂದು ಅವರು ನಿಂತಿರಬೇಕು; ಇಲ್ಲ, ಬರಲಿಲ್ಲ. ರಾಯರು ಕಣ್ಣುಬಿಟ್ಟ ಮೇಲೆ ಶೀಲಾ ತಲೆದೂಗಿ ಗೌರಾಳನ್ನು ಕರೆದುಕೊಂಡು ಹೋಗಿಬಿಟ್ಟಳು. ನಮ್ಮ ರಾಯರು ಅಂದರೆ ರವಿ, ಅವರು ಹೋದ ದಾರಿಯನ್ನೇ ಅವರು ಮರೆಯಾಗುವ ತನಕ ನೋಡುತ್ತಿದ್ದನು.

ನನಗಿದಕ್ಕೇ ನಗೆ. ಈ ಆಸಾಮಿ ಒಮ್ಮೊಮ್ಮೆ ಕೈಕಟ್ಟಿ ಕುಳಿತರೆ ಅವನಿಗೆ ನಾಲಗೆಯೇ ಇರಲಿಕ್ಕಿಲ್ಲ ಎನ್ನಬಹುದು. ಉಂಡೆಗಳನ್ನು ಉರುಳಿಸತೊಡಗಿದರೆ, ಪಂಡಿತ-ಪಾಮರರನ್ನು ಬೆರಗುಗೊಳಿಸಿಯಾನು. ಅವನ ಇಂಗಿತ, ಅವನ ದೃಷ್ಟಿಕೋನವೇ ತಿಳಿಯುವದಿಲ್ಲ. ಎಲ್ಲಿಂದಲೋ ಸುರು ಮಾಡಿ ಏನೇನೆಲ್ಲ ಹೇಳಿ, ಅದು ವಿಷಯಾಂತರವಾಯಿತೆಂದು ನಾವು ಭಾವಿಸಿದಾಗ ಪುನಃ ಮೊದಲಿನ ವಿಷಯಕ್ಕೆ ಬಂದು, ನಮ್ಮನ್ನು ಚಕಿತಗೊಳ್ಳುವಂತೆ ಮಾಡುತ್ತಾನೆ.

ಹೊರಗೋಡಿದ ದೃಷ್ಟಿ ಪುನಃ ನನ್ನ ಕಡೆಗೆ ಬಿತ್ತು; ನಾನು ನಕ್ಕುಬಿಟ್ಟೆ. ಹಾಸ್ಯ ಮಾಡುತ್ತೀಯಾ? ಎಂದು ಕೇಳಿಬಿಟ್ಟ. " ಅಲ್ಲಯ್ಯಾ, ನಿನ್ನ ಈ ಶಬ್ದಭಾಂಡಾರ ಮಾರುದ್ದದ ವಾಕ್ಯವೆಲ್ಲ ಆ ಗೊಗ್ಗ ಹೆಣ್ಣುಗಳಿಗೆ ಅರ್ಥವಾಗುವದೋ? "

" ನೀನು ಹೆಣ್ಣನ್ನು ಎಂದಾದರೂ ನೋಡಿದ್ದಿಯೋ ? "

" ನೋಡಿದ್ದೆ. "

" ಅವರನ್ನು ಪರೀಕ್ಷಾರ್ಥವಾಗಿ ಪರೀಕ್ಷಿಸಿ ಪ್ರಶ್ನಿಸಿದ್ದಿಯೋ ? "

" ಹೌದು. "

" ಅದರಿಂದ ನಿನಗೇನು ಗೊತ್ತಾಯಿತು ? "

" ಅವರ ತಲೆಯಲ್ಲೆಲ್ಲ ಬರೇ ಜೊಳ್ಳು ತುಂಬಿಕೊಂಡಿರುವದೆಂತ. "

" ಬಹುಶಃ ನೀನು ಹಾಗೆಂದು ಯೋಚಿಸಿಕೊಂಡಿರಲಿಕ್ಕಿಲ್ಲ; ಈಗ ತಿಳಿಯಿತು, ನಿನ್ನ ತಲೆಬೊಳಗೇನೂ ಇಲ್ಲ, ಬರೇ ಬುರುಡೆ ಎಂದು. ಹೆಣ್ಣು ಅನೆಂತಹ ತಿರುಗು ಮಂತ್ರ ಊದುತ್ತಾಳೆ ಗೊತ್ತೆ? ಅವಳದೆಷ್ಟು ಹರಿತ

ಮನಸ್ಸು, ಚುರುಕು ದೇಹ! ಅವೆಲ್ಲ ನಿನಗೆ ತಿಳಿದಿರಲಿಕ್ಕಿಲ್ಲ. ಭೂಮಂಡಲಕ್ಕೆಲ್ಲ ನನ್ನ ಹೆಂಡತಿಯೊಬ್ಬಳೆ ಎಂದು. ಅವಳಲ್ಲಿಯೇ ಮುಗ್ಧನಾಗಿ, ಮರುಳಾಗಿ, ಕೂಪಮಂಡೂಕವಾಗಿ ಬಿಟ್ಟಿದ್ದಿ. ನಿನ್ನ ಹೆಂಡತಿಯ ಜೊತೆ ನಿಲ್ಲಿಸಿದರೆ ನಿನಗೆಷ್ಟು ಗುಣದೊರೆಯಬಹುದು ಗೊತ್ತೇ! ಆವಳಿಗೆ ಹತ್ತು ಗುಣಗಳು ದೊರೆತರೆ ನಿನಗೆ ನಾಲ್ಕು ಮಾತ್ರ."

"ಏ ಮಹಾಶಯಾ! ಮರ್ಯಾದೆಯ ಮೂಲೆಗೆ ಕೈ ಹಾಕಿದೆಯಾ!"

"ನೀನೇ ಕೈ ಹಾಕಲು ಹೇಳಿದವನು."

"ಬಿಡೋ, ಬಂಡವಾಳೆಲ್ಲ ಬಿಚ್ಚಬೇಡ; ನನಗೆಲ್ಲ ಗೊತ್ತಿದೆ."

"ನಾವು ಬಂಡವಾಳವನ್ನು ಬಡ್ಡಿಗೆ ಹಚ್ಚಲು ಶೇಠಾಣಿಗಳು ಅಲ್ಲವಯ್ಯಾ. ಅದು ಹೆಚ್ಚಾದರೆ ಪಬ್ಲಿಕ್ ಜಾಗಾದಲ್ಲಿ ಉಚ್ಛಿಬಿಡುವದು; ಅದಕ್ಕೆ ಬಡ್ಡಿ ಕೂಡಿಸಿ ನನಗೇನೂ ತಿರುಗಿ ಕೊಡಬೇಕಿಲ್ಲ. ಆವಶ್ಯಕತೆಯಿದ್ದವರು ಆರಿಸಿಕೊಳ್ಳುತ್ತಾರೆ; ಹಾಗೆಂದು ನಮ್ಮ ಬಂಡವಾಳ ಖರ್ಚಾಗದು. ಹಾಗೆ ಉಚ್ಛಿದ್ದು ಹೆಚ್ಚಾದದ್ದು ಮಾತ್ರ; ತಿಳಿಯಿತೇ ಬೃಹಸ್ಪತಿಗಳೇ? ಬಾಯಿಯಿದೆ, ಜಳ್ಳು ಮನುಷ್ಯ, ಜಂಭ ಕೊಚ್ಚಿಕೊಳ್ಳುತ್ತಾನೆಂದು ಭಾವಿಸಿಕೊಳ್ಳಬೇಡ. ವಿಚಾರಗಳ ಸ್ಥಾನಭ್ರಷ್ಟವಾದರೂ ಅನಿಷ್ಟಕ್ಕೆ ಕಾರಣವಂತೆ. ಮತ್ತೆ—ಆ ಮ್ಯಾಚಿಸ್ ಎಲ್ಲಿ ಅಗಲೇ ಇಲ್ಲೇ ಒಗೆದುಬಿಟ್ಟಿದ್ದೆನಲ್ಲಾ. ಶನಿ ಎತ್ತ ಮಾಯವಾಯಿತೊ?" ಎಂದನು.

ಮ್ಯಾಚಿಸ್ ಹುಡುಕಿ ಕೊಟ್ಟಾಗ ಉಗಿಬಂಡಿಯ ಹೊಗೆಗಿಂಡಿಯೆ ಅವನ ಬಾಯಿ ಆಯಿತು. ಅವನೇನು ವಿಷಯ ಮಾತಾಡುತ್ತಿದ್ದರೂ ಆದರ ವಿಷಯ ಅಲ್ಲಿಗೆ ಮುಗಿಯಿತೆಂದೇ ತಿಳಿಯಬೇಕು. ಆ ಹೊಗೆಗಿಂಡಿಯ ಹೊಗೆ ಕಡಿಮೆಯಾದ ಮೇಲೆ ಮೊದಲಿನದೆಲ್ಲ ಮರೆತು ಹೊಸ ವಿಚಾರಗಳ ಉದಯದೊಡನೆ ಹೊಸ ಮನುಷ್ಯನಾಗಿಬಿಡುತ್ತಾನೆ. ಮತ್ತೆ ಜ್ಞಾಪಿಸಿದರೆ ಬಾಯಿ ಕಳೆದು ಏನು? ಎಂದು ಕೇಳುತ್ತಾನೆ; ಹೇಳುವ ಮನಸ್ಸಿದ್ದರೆ ನಾವು ಕೇಳುವ ಮೊದಲೇ ಆವನು ರೆಡಿ. ನಾವು ಕೇಳಲಿ ಬಿಡಲಿ, ಗೋಡೆಗೆ ಹೇಳುವಂತೆ ಹೇಳಿಯೇ ಬಿಡುತ್ತಾನೆ. ಕೊನೆಗೆ ಮತ್ತೂ ಅದೇನಯ್ಯಾ ಎಂದು ಕೇಳಿದರೆ, "The lost is lost for ever ( ಕಳೆದದ್ದು ಯಾವಾಗಲೂ ಕಳೆದ ಹಾಗೆಯೇ )" ಎಂದು ಬಿಡುತ್ತಾನೆ. ಪುನಃ ತಪಸ್ಸಿಗೆ ಕುಳಿತ ಗೋಸಾವಿಗಳಂತೆ ಎದುರಿಗೆ

ಯಾರೇ ಬಂದರೂ ಮಾತಾಡಿಸದೇ ಸುಮ್ಮನೇ ಇದ್ದುಬಿಡುತ್ತಾನೆ. ”

ಜೋಗಿಗಿಂಡಿಯ ಹೊಗೆ ಖರ್ಚಾಯಿತು. ಅವನಿಗೆ ನಾನು ಸಮೀಪ ದಲ್ಲಿ ಕುಳಿತಿದ್ದೇನೆ ಎಂದು ಆಗ ಗೊತ್ತಾಗಿರಬೇಕು. “ ಶ್ರೀನಾಥ ” ಎಂದನು.

“ ಏನು ಮೊನ್ನದೇವರೆ, ಈಗ ಸನ್ನಿಧಿಗೆ ನನ್ನ ನೆನಪು ಬಂತೆ ? ”

“ ಏನಂದೆ ? ಯಾರು ಮೊನ್ನದೇವರು ? ”

“ ನಿನಗಲ್ಲವಯ್ಯಾ, ಆ ಮೂಕಿಗೆ ಹೇಳಿದ್ದು—ರವಿ, ನಿನ್ನ ನಿಜವಿಚಾರ ವನ್ನು ಹೇಳು. ”

“ ಇಲ್ಲಿಯತನಕ ನಾನು ಹೇಳಿದ್ದು ಸುಳ್ಳು ಎಂತಲೋ ? ”

“ ನೋಡು, ಮತ್ತೆ ಪ್ರಾರಂಭವಾಯಿತು ನಿನ್ನ ಹಟಟಿ. ನೀನು ಬಲು ಹುಷಾರಿ ; ಮಾತು-ಮಾತಿಗೆಲ್ಲ ತಿರುಗಿ ಉತ್ತರ ಕೊಡಬೇಡ; ಹೇಳಿದ್ದು ಮೊದಲು ಕೇಳಿಕೋ. ”

“ ಆದೀತಯ್ಯಾ, ಕಿವಿಯನ್ನು ಮೊದಲು ಸರಿಮಾಡಿಕೊಳ್ಳುವೆ. ”

“ ನೋಡು, ಗೌರಾ ಹೊರಟುಹೋಗುವಾಗ ಅವಳನ್ನು ಹಾಗೇಕೆ ನೋಡಿದೆ ? ”

“ ನೋಡಬಾರದಾಗಿತ್ತೇ ? ”

“ ನೀನು ಗೌರಾ ಹೊರಡುವಾಗ್ಗೆ ನೋಡಿದ್ದನ್ನು ನೋಡಿ ಅವಳ ಕುರಿತು ಏನೋ ಯೋಚಿಸುತ್ತಿರುವೆ ಎಂದು ಭಾವನೆಯಾಯಿತು; ನಿನ್ನ ಮನಸ್ಸು ಆಗ ಕಹಿಯನ್ನು ತಿಂದಂತಿತ್ತು. ”

“ ಶ್ರೀನಾಥ, ನಿಜ ವಿಷಯಕ್ಕೆ ಬಂದಿ ನೀನು. ಯಾಕೆ ಗೊತ್ತಾಯಿತೆ ? ಗೌರಾ ಈಗ ಎಲ್ಲಿಂದ ಬಂದಿದ್ದಾಳೆ, ಹೇಳು. ಅವಳು ಬರೀ ಊರು ನೋಡುವವಕ್ಕಾಗಲಿ ಇಲ್ಲವೆ ಪ್ರವಾಸದ ಸುಖವನ್ನು ಉಣ್ಣುವವಕ್ಕಾಗಲೀ ಬಂದಿರಲಿಕ್ಕಿಲ್ಲ; ಯಾವದೋ ಬುತ್ತಿಯನ್ನು ನನಗೆ ಮುಟ್ಟಿಸಲು ಬಂದಿದ್ದಾಳೆ. ಅದೆಂತಹ ಬುತ್ತಿಯೋ ಅವಳಿಂದಲೇ ತಿಳಿಯಬೇಕು. ಬಹುಶಃ ಇದು ನನಗೆ ಟಿಕೆಟ್ ಖರ್ಚಿಗೆಂದು ಕಾಣುತ್ತದೆ. ಇಲ್ಲವಾದರೆ ಈ ಮುದ್ದು ಮುಗುದೆ ಹುಡುಗಿ ಗೌರಾ ನನ್ನನ್ನು ಹುಡುಕುತ್ತ ಬರುತ್ತಿರಲಿಲ್ಲ. ನೀನು ಅವಳು ಹೊರಗೆ ಹೋಗುವಾಗ್ಗೆ ಸರಿಯಾಗಿ ನೋಡಿರಲಿಕ್ಕಿಲ್ಲ. ಅದೇ ಇನ್ನೊಬ್ಬರ ಮನಸ್ಸನ್ನರಿಯುವ ಕುತೂಹಲ ದೃಷ್ಟಿಯಿದ್ದಿದ್ದರೆ ನೀನೇ ಹೇಳುತ್ತಿದ್ದೆ : ಆ

ಹುಡುಗಿಗೆ ಹೊರಹೊರಡುವ ಮನಸ್ಸು ಸ್ವಲ್ಪವೂ ಇರಲಿಲ್ಲ, ಒತ್ತಾಯಕ್ಕೆ ಹೋದಳು ಎಂದು. ಹೊರಟು ನಿಂತಾಗ ಅವಳ ಕಣ್ಣುಗಳು ಅದನ್ನೇ ನನ್ನೊಡನೆ ಸೂಚಿಸುತ್ತಿದ್ದವು. ಅವಳ ಮನಸ್ಸು ಅದೆಷ್ಟು ಖಿನ್ನವಾಗಿದೆ ಎಂದು ನಾನು ಬಲ್ಲೆ ಶ್ರೀನಾಥ. ಆದರೂ ಹೊಸ ಊರಿನ ವಾತಾವರಣ ಅವಳನ್ನು, ಅವಳ ಕಲಕಿದ ಮನಸ್ಸನ್ನು ಒಂದಿಷ್ಟಾದರೂ ಸಂತೈಸುವದಾದರೆ, ಅದೇ ಅವಳ ಮನಸ್ಸಿಗೆ ನೆಮ್ಮದಿಯೆನ್ನು. ಅದಕ್ಕಾಗಿಯೇ ಅವಳು ಹೊರಡುವಾಗ್ಗೆ ಒಪ್ಪಿಗೆ ಕೊಟ್ಟು ಉತ್ತೇಜನ ಕೊಟ್ಟೆ ತಿಳಿಯಿತೇ ?"

"ಗೌರಾ ಅತಿ ಸರಳ ಸ್ವಭಾವದವಳು ಕಾಣುತ್ತದೆ."

"ಅವಳೆಷ್ಟು ಸರಳವಾಗಿ ಕಾಣುತ್ತಾಳೋ ಅಷ್ಟೇ ಕಠಿಣಳೂ ಹೌದು. ಮಾತುಕೊಟ್ಟರೆ ಅದು ಹೊಟ್ಟೆಗೆ ಚುಚ್ಚಿ ಬೆನ್ನಿಂದ ಹೊರಬೀಳಬೇಕು. ಅದರ ಜೊತೆಗೇನೇ ಅಳುವೂ ಬಂದುಬಿಡುತ್ತದೆ. ಅವಳು ಚಿಕ್ಕವಳಿದ್ದಾಗ ನನ್ನ ತೊಡೆಯಲ್ಲೇ ಕುಳಿತು ಬೆಳೆದಿದ್ದಾಳೆ ಎನ್ನಬಹುದು. ಒಮ್ಮೊಮ್ಮೆ ಅವಳು ನನ್ನೊಡನೆ ತೋರಿಸುತ್ತಿರುವ ಆತ್ಮೀಯತೆಯನ್ನು ನೋಡಿ, ಅವಳ ಕೆನ್ನೆಗೆ ಮುತ್ತು ಕೊಟ್ಟು ತಿಂಡಿಯನ್ನೂ ತಂದುಕೊಡುತ್ತಿದ್ದೆ. ಅವಳೀಗ ದೊಡ್ಡವಳಾಗಿದ್ದರೂ ಅವಳಲ್ಲನ್ನೂ ಅದೇ ಭಾವನೆ ಉಳಿದಿದೆ. ಹೆಣ್ಣು-ಗಂಡು ವರುಷ ವರುಷಕ್ಕೂ ಬದಲಾವಣೆಯಾಗುತ್ತಾರೆ ಗೊತ್ತೆ? ಆದರೆ ನನ್ನ ಈ ಚಿಕ್ಕ ಗೌರಾಳ ಮನಸ್ಸು ಇನ್ನೂ ಮೊದಲಿನಂತೆಯೇ ಶುದ್ಧ ಅಪರಂಜಿಯಾಗಿ ಇದೆ. ಅದಕ್ಕಾಗಿಯೇ ನನಗವಳಲ್ಲಿ ಭಕ್ತಿ-ಆದರ ಬದಲಾಗಿ, ಭಯ ಆಶ್ಚರ್ಯಗಳು ಉಂಟಾಗಿವೆ. ಅವಳು ತಿರುಗಿ ಬಂದ ನಂತರ ಅವಳನ್ನೆಲ್ಲ ವಿಚಾರಿಸಿ ಹಲವು ವಿಷಯಗಳನ್ನು ತಿಳಿಯಬೇಕು."

"ನಿನ್ನದೆಲ್ಲವೂ ಒಂದು ವ್ಯಕ್ತಿಯ ಬಗೆಗಿರುವ ಬಹು ಆಳವಾದ ವಿಚಾರಗಳೇ."

"ನಾವು ಪ್ರತಿಯೊಂದು ವ್ಯಕ್ತಿಯನ್ನು ಅದೇ ದೃಷ್ಟಿಕೋನದಿಂದ ನೋಡಬೇಕು ಶ್ರೀನಾಥ."

ನಾನು ಮಾತನಾಡಲಿಲ್ಲ. ವೈಯಕ್ತಿಕ ಜೀವನದ ಬಗೆಗಿರುವ ಅವನ ಹಲವು ನೋಟಗಳನ್ನು ಕುರಿತು ವಿಚಾರಿಸುತ್ತಿದ್ದೆ. ರವಿಯೇ ಕೇಳಿದನು :

"ಗಂಟೆಯೆಷ್ಟೀಗ ?"

" ಆರಾಗಲು ಬಂತು. "

" ಅವರಿಗೆ ಬರಲು ತುಂಬಾ ತಡವಾಗುತ್ತದೋ ಏನೋ ? "

" ತಡಮಾಡಲಿಕ್ಕಿಲ್ಲ, ಬೇಗನೆ ಬಂದಾರು. ಅಡಿಗೆ ತಾವೇ ಮಾಡ ಬೇಕೆಂದು ಅವರಿಗೆ ಗೊತ್ತಿದೆಯಷ್ಟೆ; ನೋಡುತ್ತಲೇ ಇರು, ಇನ್ನೊಂದು ಕ್ಷಣ ದಲ್ಲಿ ಬರುತ್ತಾರೆ. "

" ಹೆಣ್ಣುಮಕ್ಕಳ ತಿರುಗಾಟ, ಗುರುತಿನ ಹೆಣ್ಣುಮಕ್ಕಳ ಬಣ್ಣದ ಮಾತು ಗಳನ್ನು ಕೇಳುತ್ತಿರುವಾಗ ಅವರಿಗೆ ಮನೆಯ ನೆನಪೂ ಆಗಲಿಕ್ಕಿಲ್ಲ. "

" ನೀನು ಹೇಳೋದು ನಾನು ಅಡಿಗೆ ಮಾಡಲಿಕ್ಕೆ ಹೋಗಬೇಕು ಎಂದಲ್ಲವೆ ? "

" ಅನ್ನವಾದರೂ ಬೇಯಿಸಿಟ್ಟರೆ ಹುಳಿಯನ್ನೋ, ಸಾರನ್ನೋ ಅವರು ಬಂದು ಮಾಡಿಕೊಳ್ಳುತ್ತಾರೆ. ಇಲ್ಲವಾದರೆ ಹೊಸದಾಗಿಯೇ ಅನ್ನ-ಸಾರು ಮಾಡುವಾಗ್ಗೆ, ತಿರುಗಾಡಿ ಬಂದ ದಣುವಿನೊಡನೆ 'ಬೆಕೋ' ಅನ್ನುವಂತೆ ಆದೀತು. "

" ನಾನೂ ಬರುತ್ತೇನೆ ಬೇಕಾದರೆ. "

" ಏನಂದಿ. ಬರುವಿಯೆಂತಲೆ ? ಡಾಕ್ಟರರು ಮಾತಾಡಲೂ ಕೂಡದು ಎಂದಿದ್ದಾರೆ. ಗೆಳೆಯ–ಹೋಗಲಿ–ನನಗೂ ಕುಳಿತುಕೊಳ್ಳುವದಕ್ಕಾಯಿತು ಎಂದು ಸವಲತ್ತು ಕೊಟ್ಟರೆ, ಮತ್ತೆ ನೀನು ಇಳಿದು ತಿರುಗಾಡತೊಡಗಿದರೆ ನಮಗೆಲ್ಲ ಅಯ್ಯೋ ಎನಿಸಿಬಿಟ್ಟೀತು. ಮೈಮುಟ್ಟಿ ನೋಡಿದ್ದೀಯಾ ? ಇನ್ನೂ ಸಣ್ಣ ಜ್ವರವಿದೆ. ನಿನ್ನೆ ರಾತ್ರಿ ಬಲು ಜೋರಾಗಿ ಜ್ವರ ಬಂದಿತ್ತು. ಬಾಯಿಗೆ ಬಂದಂತೆಲ್ಲ ಹಲಬುತ್ತಿದ್ದೆ. "

ಮತ್ತೆ ಮಾತಾಡಲಿಲ್ಲ. ನಾನು ಬೆಂಕಿ ಹೊತ್ತಿಸಿ ಬರುತ್ತಿರುವಾಗ, ಅವನು ಬಾಗಿಲ ಕಡೆಗೇ ನೋಡುತ್ತಿದ್ದನು. " ಏನು, ಸಿಗರೇಟ ಪಾಕೀಟ ಖರೀದಿಗೆ ಓಡಬೇಕೋ ? " ಎಂದೆ. ಅವನಿಗೆ ಇವತ್ತಿಗೆ ಸಾಕಂತೆ. ನಾಳೆ ಗೆಂದು ಇವತ್ತೇ ತಂದಿಟ್ಟರೂ ಬೇಸರವಿಲ್ಲವಂತೆ; ನನಗೇ ಬುದ್ಧಿ ಹೇಳುತ್ತಾನೆ. ನಾನು ಎಸರಿಗೆ ಅಕ್ಕಿ ಸುರಿಸಿ ಬರುತ್ತೇನೆಂದು ನುಡಿದಾಗ, ಬೇಗ ಬಾ ಎಂದಿದ್ದ.

ತಿರುಗಿ ಬಂದಾಗ, " ಶ್ರೀನಾಥ, ನಮ್ಮ ಮುಖ್ಯ ವಿಷಯ ಮರೆತೇ ಬಿಟ್ಟಿದೆ " ಎಂದನು.

" ಏನೆಂದಿ ? "

" ಲಜ್ಜೆಯದು. "

" ನಿನಗೆ ಗುಣವಾಗಲಿ, ಏಕೆ ತೊಂದರೆ ಕೊಡುವುದು ಎಂದು ನೆನಪು ಮಾಡಲಿಲ್ಲ. "

" ತೊಂದರೆಯ ಪ್ರಶ್ನೆಯಲ್ಲ; ಬೇಗನೇ ಹೇಳಿ ಮುಗಿಸಬೇಕು. "

" ಅದೇಕೆ ಅಷ್ಟು ಗಡಿಬಿಡಿ ? "

" ಇಲ್ಲಿಂದ ಬೇರೆ ಕಡೆಗೆ ಹೊರಡಬೇಕೆಂದು ಪ್ರೋಗ್ರ್ಯಾಮ್ ನಿಶ್ಚಯಿಸಿದ್ದೇನೆ. "

" ಎಲ್ಲಿಗೆ ? "

" ಹಾಗೆಲ್ಲಾ ಕೇಳಬಾರದಯ್ಯಾ. ಅಪಶಕುನವೆನ್ನುತ್ತಾರೆ, ನಮ್ಮ ಶಾಸ್ತ್ರದ ಭಾಷೆಯಲ್ಲಿ. "

" ಇನ್ನೂ ಮೈ ಗುಣವಿಲ್ಲ. ನಿನ್ನ ಹೊರಡುವ ಪ್ರೋಗ್ರ್ಯಾಮ್ ಫಿಕ್ಸ್ ಆಯಿತೆ ? "

" ನನ್ನ ಎದೆಯೂ ಬೇರೆ ನೋಯುತ್ತಿದೆ. "

" ಅದು ಗುಣವಾಗಲಿ. "

" ಹಾಗಾಗದು ; ಇದಕ್ಕೂ ಮೊದಲೇ ಅದನ್ನು ಮುಗಿಸಬೇಕು. ನಾನು ಇಲ್ಲಿಂದ ಹೊರಟರೆ ನಿನ್ನನ್ನು ಪುನಃ ಕಾಣುವೆನೆನ್ನುವ ಭರವಸೆಯೂ ಇಲ್ಲ. "

ನಾನು ಅಪ್ರತಿಭನಾದೆ ಮತ್ತೂ ಅವನೇ ಹೇಳಿದನು :

" ಇವತ್ತು ರಾತ್ರಿ ಮುಂದುವರಸುತ್ತೇನೆ. "

ಹೀಗೆ ಹೇಳಿದ ನಾಲಿಗೆಗೂ ಒಂದು ದರ್ಪವಿತ್ತು. ಅದು ನನ್ನನ್ನು ದಂಗು ಬಡಿಸಿತ್ತು.

ಸರಿ ! ನಾನೆಣಿಸಿದಂತೆ ಶೀಲಾ-ಗೌರಾ ಬರಲು ಸ್ವಲ್ಪ ತಡವೇ ಆಯಿತು. ಅವರು ಬರುವಾಗ ಅನ್ನಬೇಯಿಸಿ ಆಗಿತ್ತು. ಒಂದು ಸಾರು ಮಾಡಿದ ಶಾಸ್ತ್ರ ಮಾಡಿ ಊಟ ಮುಗಿಸಿದೆವು. ನಂತರ ಸೌಮ್ಯವಾಗಿ ರವಿ ಕೇಳಿದನು :
" ಗೌರಾ, ಕಾರವಾರ ನೋಡಿದಿಯಾ ? ಚೆನ್ನಾಗಿದೆಯು ? ಈ ಊರಿನ ಬಗ್ಗೆ ಮತ್ತೇನು ಹೇಳಬಲ್ಲೆ ? "

" ಸಮುದ್ರದ ದಂಡೆಯ ಬಳಿ ಹಾಯುತ್ತಿರುವಾಗ ನಮ್ಮೂರಿನ ಮಾರ್ಗಗಳ ನಡುಮಧ್ಯ ಹಾದು ಹೋಗುತ್ತಿರುವಂತೆಯೇ ಆಯಿತು. ಸ್ಥಾನದ ವ್ಯತ್ಯಾಸವನ್ನು ಬಿಟ್ಟರೆ ಈ ಊರು ನಮ್ಮ ರತ್ನಾಗಿರಿಯಂತೆಯೇ. ಒಂದು ವಿಷಯ ಆಶ್ಚರ್ಯ ನೋಡಣ್ಣ ! ಇಷ್ಟು ಸಣ್ಣ ಊರಲ್ಲಿ ದೂರದಿಂದ ಬಂದ ಕ್ರಿಶ್ಚಿಯನ್ನರು ಮೂರು ನಾಲ್ಕು ಚರ್ಚುಗಳನ್ನು ಕಟ್ಟಿದ್ದಾರೆ. ಆದರೆ ಮೂಲ ನಿವಾಸಿಗಳಾದ ಹಿಂದುಗಳು, ಆ ಹಾಳು ಹನುಮಪ್ಪನ ಗುಡಿಯೊಂದನ್ನು ಬಿಟ್ಟರೆ, ಈ ಊರಿನ ಯಾವ ಮೂಲೆಯಲ್ಲೂ ದೇವರೆಂದು ಒಂದು ಹಾಳು ಕಲ್ಲನ್ನೂ ನಿಲ್ಲಿಸಿಲ್ಲ. ಹೊರಗಿನಿಂದ ಊರನ್ನು, ಇಲ್ಲಿಯ ಕೋಟು-ಬೂಟುಗಳ ಜನವನ್ನು ನೋಡಿದಾಗ, ಸಾಂಸ್ಕೃತಿಕ ಉಚ್ಚ ನೈತಿಕ ಮಟ್ಟವಿದೆಯೆಂದು ಭಾವಿಸಿದರೆ, ನಿಜ ಸ್ಥಿತಿಯನ್ನು ಕಂಡಾಗ ಎಲ್ಲವೂ ಸಪ್ಪೆಸಪ್ಪೆಯಾಗಿ ಕಾಣುತ್ತದೆ."

" ಅದಕ್ಕೂ ಒಂದು ಕಾಲ ಬರಬೇಕು, ಗೌರಾ. ಎಲ್ಲ ಧರ್ಮಗಳೂ ತಾಯಿಯ ಹೊಟ್ಟೆಯಿಂದ ಬರುವ ಶಿಶುಗಳಂತೆಯೇ. ಆದಿಯಲ್ಲಿ ಶೈಶವಾವಸ್ಥೆಯ ಇರುವನ್ನು ಕಂಡಿವೆ. ಕಾಲ ಸರಿಯಿತು, ದಿನಗಳು ಕಳೆದವು. ಹಿಂದೂ ಧರ್ಮ ವಯಸ್ಸಿನಲ್ಲಿ ಹಿರಿಯದಾದುದರಿಂದ ತನ್ನ ಮುಪ್ಪಿನ ದಿನಗಳಿಗೆ ಸಮೀಪವಾಗುತ್ತಿದೆ. ಅದೇ ಏಸೂ ಕ್ರೈಸ್ತ, ಮೊನ್ನೆ ಮೊನ್ನೆ ಅಂದರೆ ಎರಡು ಸಾವಿರ ವರುಷಗಳ ಹಿಂದೆ, ತನ್ನವರುಗಳನ್ನು ಬಿಟ್ಟು ಹೋಗಿದ್ದಾನೆ. ಆ ಬಿಟ್ಟವರುಗಳು ಇನ್ನೂ ತಾರುಣ್ಯಾವಸ್ಥೆಯಲ್ಲಿವೆ. ಧರ್ಮವನ್ನು ಹಳಿಯಬೇಕೆನ್ನುವ ಸಣ್ಣ ಮನಸ್ಸಿನಿಂದಲ್ಲ ನಾನಿದನ್ನು ಪ್ರತಿಪಾದಿಸುವುದು; ವಾಸ್ತವಿಕ ವಿಷಯಗಳ ವಿವೇಚನೆ ಮಾಡುತ್ತಿದ್ದೇನೆ ಇಷ್ಟೆ ! ಎಲ್ಲವುಗಳಿಗೂ ಅವುಗಳದೇ ಒಂದು ಕಾಲವಿದೆ. ನಿನಗೂ ಗೊತ್ತಿರಬೇಕಲ್ಲ."

ಆವಳಿಗೂ ಗೊತ್ತು; ರವಿಯಣ್ಣ ಮಾತುರುಳಿಸತೊಡಗಿದರೆ ಮಿತಿಯಿಲ್ಲವೆಂದು. ಆವಳೇ ವಿಷಯ ತಿರುಗಿಸಲು ಬೇರೆ ಮಾತೆತ್ತಿದಳು.

" ಅಣ್ಣಾ, ನಿನ್ನ ಪ್ರಕೃತಿಯೇಕೆ ಹೀಗಾಯಿತು ? "

" ಗೌರಾ, ಹೀಗೇಕೆ ಕೇಳುವೆ ? "

" ನಿನ್ನನ್ನು ನೋಡಿ ನನಗೆ ನೋವಾಗುತ್ತಿದೆ. "

" ಗೌರಾ, ನಿನಗೂ ಬೇಸರವಿಲ್ಲದಿದ್ದರೆ ಕೇಳು; ಸ್ವಲ್ಪ ನಿಂತು ಹೇಳುತ್ತೇನೆ. ಏಕೋ ಎದೆ ನೋಯುತ್ತಿದೆ ಗೌರಾ, ಸ್ವಲ್ಪ ಒತ್ತಿ ಹಿಡಿಯುತ್ತೀಯಾ ! "

ಹೀಗೆ ಹೇಳುತ್ತಿರುವಾಗ ಅವನ ಮೋರೆ ಮುದುಡಿಕೊಂಡಿತು. ಗೌರಾ ಎದೆ ಸವರುತ್ತ ಮಲಗಿಸಿದಳು. ಚಿಂತಾಕ್ರಾಂತಯುಕ್ತವಾದ ರವಿಯ ಮೋರೆ ನನ್ನನ್ನು ಭಯಗ್ರಸ್ತನನ್ನಾಗಿ ಮಾಡಿತು. ಗೌರಾಳ ಕಣ್ಣಿನಿಂದ ನೀರುಂಡಿಗಳು ಉರುಳತೊಡಗಿದುವು. ಅವಳ ಎದೆ ಸವರುತ್ತಿದ್ದ ಕೈ ನಿಂತುಬಿಟ್ಟಿತು; ತಲೆ ತಗ್ಗಿತು. ಎದ್ದು ಒಳಗೋಡಿಬಿಟ್ಟಳು. ರವಿಗೇನಾಯಿತೋ, ಗೌರಾಳನ್ನು ಕರೆಯಲು ನನ್ನೊಡನೆ ಹೇಳಿದ. ಅವಳು ಬರುವಾಗ ಮೋರೆಯನ್ನು ಒರೆಸುತ್ತ ಬರುತ್ತಿದ್ದಳು. ನೀರಿಳಿದ ಕಣ್ಣು ಕೆಂಪಾಗಿತ್ತು. ಅವಳನ್ನು ತನ್ನ ಹತ್ತಿರ ಕುಳ್ಳಿರಿಸಿಕೊಂಡು ಅವಳನ್ನು ನೋಡುತ್ತ, ಗೌರಾ, ಎಂದನು. ಆಗವಳ ರೆಪ್ಪೆಯ ನೀರು ಒಸರಿ ಮಂದವಾಗತೊಡಗಿತ್ತು.

"ಗೌರಾ, ಅಳುತ್ತೀಯಾ ?"

ಮತ್ತೆ ಅವಳ ಎದೆಯಳುಕು ಹೆಚ್ಚಾಯಿತು.

"ಗೌರಾ........"

ಅವಳ ಶ್ವಾಸ ಏದತೊಡಗಿತು.

"ಗೌರಾ, ಮಾತಾಡುವದಿಲ್ಲವೆ? ನೀನಿನ್ನೂ ಚಿಕ್ಕವಳೆ? ಪ್ರಪಂಚ ವ್ಯಾಪಾರದ ಅನುಭವ ನಿನಗೆ ಆಗುತ್ತಿದೆಯಲ್ಲ. ಇನ್ನೂ ಹಸುಮಗುವಿನಂತೆ ಅಳುತ್ತ ಕುಳಿತು ಕಾಮ ಕೆಂಪಗಾದ ನಿನ್ನ ರವಿಯಣ್ಣನನ್ನು ಇನ್ನೂ ಕುದಿಸುತ್ತೀಯಾ ? ಸ್ವಲ್ಪ ಸಮಾಧಾನ ತಾಳು. ನಾನು ಏನೋ ಕೇಳುವದಕ್ಕೆಂದು ನಿನ್ನನ್ನು ಕುಳ್ಳಿರಿಸಿಕೊಂಡಿದ್ದೇನೆ. ಶಾಂತಳಾಗಿ, ನಿಶ್ಚಿಂತಳಾಗಿ ಉತ್ತರ ಕೊಡಲು ಪ್ರಯತ್ನ ಮಾಡು."

ಗೌರಾ ಕಣ್ಣೀರು ಕೊಡಹಿ ಅವನ ಮೋರೆಯನ್ನೇ ನೋಡತೊಡಗಿದಳು.

"ಗೌರಾ, ಮಾತನಾಡಲು ಅನುವೇ ದೊರೆಯಲಿಲ್ಲ. ಸುತ್ತಾಡಿಕೊಂಡು ಬರುವದರಲ್ಲೇ ವೇಳೆ ಕಳೆದುಹೋಯಿತು. ನೀನು ನನ್ನನ್ನು ಕಾಣಲು ತವಕಪಟ್ಟ ಕಾರಣ ಹೇಳುತ್ತೀಯಾ?"

"ನಿನ್ನನ್ನು ನೋಡಲು ಮನಸ್ಸಾಗಿತ್ತು. ಅದಕ್ಕೆಂತಲೇ ಬಂದದ್ದು."

"ನಿನ್ನ ಮಾತನ್ನು ನಾನಲ್ಲದೇ ಬೇರೆಯವರಾಗಿದ್ದರೆ, ಒಪ್ಪಬಹುದಾಗಿತ್ತು. ಗೌರಾ, ನೀನು ನನ್ನನ್ನು ನೋಡಲಷ್ಟೇ ಬಂದಿಲ್ಲವೆಂಬ ನಿನ್ನ ಅಂತರ್ಗತ ಮನಸ್ಸನ್ನು ನಿನ್ನ ಕಣ್ಣು ನನಗೆ ಹೇಳುತ್ತದೆ."

ಗೌರಾ ವಿಲಕ್ಷಣ ದೃಷ್ಟಿಯಿಂದ ಸುತ್ತಲೂ ನೋಡಿದಳು. ಇದನ್ನು ನೋಡಿ ಗೌರಾಳ ಅನುಮಾನ ರವಿಗೆ ಸ್ಪಷ್ಟವಾಯಿತು. ಬೆನ್ನಿನ ಮೇಲೆ ಕೈಯಾಡಿಸುತ್ತ ಮಾತು ಮುಂದುವರಿಸಿದನು.

" ಗೌರಾ, ಇಲ್ಲಿ ಯಾರಿದ್ದರೂ ಎಲ್ಲರೂ ನಮ್ಮವರೆ. ಅವರು ನನ್ನನ್ನು ಬಲ್ಲರು. ನಾನೇನೆಂಬುದನ್ನು ಬಲ್ಲರು. ಸತ್ಯವಾಗಿ ಹೇಳುವದಾದರೆ, ಅವರು ನಿನ್ನನ್ನೂ, ನಿನ್ನ ಅಕ್ಕನನ್ನೂ ಬಲ್ಲವರೆ. ನೋಡಿ ಅಲ್ಲ—ನನ್ನ ಬಾಯಿಯಿಂದ ಕೇಳಿ. "

" ನೀನು ನಮ್ಮನ್ನು ಈ ರೀತಿ ಅನಾಥರನ್ನಾಗಿ ಮಾಡುವದೆ? ನಾನೇನೆಂಬುದು ನಿನಗೆ ಗೊತ್ತಿತ್ತಲ್ಲ. ಹುಲಿಯ ಬಾಯಿಗೆ ನಮ್ಮನ್ನು ಕೊಟ್ಟೆ. ನೀನು ಹುಲ್ಲೆಯಾಗಿ ವನರಾಜ್ಯದಲ್ಲಿ ಜಿಗಿಯುತ್ತ ನಡೆದೆ. "

" ಅದು ಹಿಂದಿನ ಕಥೆ ಗೌರಾ. "

" ನೀನು ಹೊರಡುವಾಗ ಒಂದೂ ಮಾತನ್ನು ಆಡದೇ ಹೊರಟು ಬಂದೆಯಲ್ಲವೆ? ನಾನಂತೂ ನಿನ್ನ ಕಾಠಿಣ್ಯತೆ ನೋಡಿ ಹುಚ್ಚಳಾಗಿ ಬಿಟ್ಟೆ. ನನ್ನದು ಬಿಡು. ನಿನ್ನನ್ನು ನಂಬಿದ ನನ್ನಕ್ಕ—ನೀನು ಒಮ್ಮೆಯೂ ಅವಳನ್ನು ನೋಡದೆ, ಮಾತನಾಡಿಸದೆ ಗೂಬೆಯಂತೆ ತಲೆತಗ್ಗಿಸಿ ಬಂದಾಗ—ಅವಳ ಗತಿ ಏನಾಗಬೇಕು? ನೀನು ಹೊರಡುವಾಗ್ಗೆ ಎಡ್ರೆಸ್ಸು ಕೊಡಲಿಲ್ಲ. ಹಿಂದಿನಿಂದ ಪತ್ರ ಹಾಕೀಯೆ ಎಂದು ಭಾವಿಸಿದರೆ, ನಮ್ಮ ದರಿದ್ರ ಮುಖ ನೆನೆಸಿ ನಿನಗೊಂದು ಪತ್ರ ಹಾಕುವಷ್ಟು ಔದಾರ್ಯ ಬರಲಿಲ್ಲ. ಅದಕ್ಕೆ ನಾನೇನು ಮಾಡಬೇಕು? ನಿರ್ಭಾಗ್ಯರು ಎಂದಿಷ್ಟೇ ತಿಳಿದು ಕೈಕಟ್ಟಿ ಕುಳಿತೆವು. ನಮ್ಮ ಮೋರೆ ನೋಡಿ ಜನ ನಮ್ಮನ್ನು ಅರಿತುಕೊಳ್ಳುವಂತಾಯಿತಣ್ಣ. "

" ಅವೆಲ್ಲ ಬೇಡ ಗೌರಾ, ಹಿಂದಿನದನ್ನು ಮತ್ತೆ ನೀನು ಹೊಡೆದೆಬ್ಬಿಸಿದರೆ ನಾನು ಜೀವಹಿಡಿದು ನಿಲ್ಲುವದೂ ಅಸಾಧ್ಯವಾದೀತು. "

" ನೀನೇ ಯೋಚಿಸು. ನಮ್ಮ ತಂದೆಯಿದ್ದಿದ್ದರೆ ನೀನು ದಿನವೂ ಬಂದು ಅಕ್ಕನೊಡನೆ ಚಕ್ಕಂದವಾಡುತ್ತಿದ್ದೆ. ಇಲ್ಲವೆ ಯಾವದಾದರೂ ಉದ್ಯೋಗ ಹೊಂದಿಸಿ ಅಕ್ಕನ ಮತ್ತು ನಿನ್ನ ದಾಂಪತ್ಯ ನೋಡಬಹುದಾಗಿತ್ತು. ಅವರು ನಮ್ಮನ್ನು ಬಿಟ್ಟದ್ದೇ ತಡ, ಎಲ್ಲರೂ ಒಬ್ಬೊಬ್ಬರಾಗಿ ನಮ್ಮಿಂದ ಕಳಚಿ ದೂರವಾದರು. ನಿನ್ನದೂ ದಿನಕ್ಕೊಂದು ರೀತಿಯ ಮರ್ಜಿಯಾಯಿತು. ನಮ್ಮಂತಹ

ಅನಾಥ ದರಿದ್ರರಿಗೆ ನಿಮ್ಮಂತಹರ ಮರ್ಜಿಯನ್ನು ಕಾಯುವುದೇ ಕಷ್ಟವಾಯಿತು. ನೀನು ಬರುವಾಗಲೆಲ್ಲ ಮೋರೆ ಸಿಂಡರಿಸಿಕೊಂಡೇ ಬರುತ್ತಿದ್ದಿ. ಏನೆಂದು ಕೇಳಿದರೂ ಉರಿದು ಬೀಳುತ್ತಿದ್ದಿ. ನಮ್ಮ ಮನೆಯ ಪರಿಸ್ಥಿತಿಯಂತೂ ನಿನಗೆ ಗೊತ್ತೇ ಇದೆಯಲ್ಲ, ಮತ್ತೇನು ಹೇಳಲಿ ? ”

“ ಗೌರಾ, ಮತ್ತೆ ಆ ಕಹಿ ಮದ್ದನ್ನು ಗಂಟಲಿಗೆ ಹೊಯ್ಯಬೇಡ; ಲಚ್ಚಿಯ ವಿಷಯವೇನು ? ”

“ ಅವಳ ವಿಷಯ ಹೇಳುವದಕ್ಕಿಂತ ಮೊದಲು ಅವಳ ಗತಿಯೇನೆಂಬುದನ್ನು ನಿನ್ನನ್ನೇ ಕೇಳುತ್ತಿದ್ದೇನೆ. ಈಗ ಅವಳನ್ನು ಏನು ಮಾಡಬೇಕೆನ್ನುವೆ ? ಹೋದ ಮನೆಗೂ ಬೇಡ; ಕೊಟ್ಟ ಮನೆಗೂ ಬೇಡ. ಅವಳು ಅನಾಥಳಾದಳಲ್ಲ. ”

“ ಲಚ್ಚಿಯೆಲ್ಲಿದ್ದಾಳೆ ಗೌರಾ ? ”

“ ಎರಡೂ ಮನೆಗೆ ಬೇಡವಾದವಳು ಧರ್ಮಸಾಲೆಯಲ್ಲಿದ್ದಾಳೆಂದು ಹೇಳಿದರೆ ಚೆನ್ನಾಗುತ್ತಿತ್ತೇನೋ ? ಈಗವಳು ನಮ್ಮ ಮನೆಗೇ ಬಂದಿದ್ದಾಳೆ. ಅಣ್ಣ ಮತ್ತು ತಂಗಿಯರಿಗೆಲ್ಲ ಲಚ್ಚಿಯನ್ನು ಕಂಡರೆ ಬಾಯಲ್ಲಿದ್ದ ಎಂಜಲನ್ನು ಉಗುಳಬೇಕೆನ್ನಿಸುತ್ತದೆಯಂತೆ. ಏನೋ ಭೂತದಂತೆ ಸೊಟ್ಟ ಮೋರೆ ಮಾಡಿ ಮಹಡಿಯಿಂದ ಕೆಳಗಿಳಿಯದೆ ಕತ್ತಲೆ-ಬೆಳಕುಗಳನ್ನು ಕಳೆಯುತ್ತಿದ್ದಾಳೆ. ”

“ ಹಾಗೆಂದರೆ ? ”

“ ಗಂಡನ ಮನೆಗೆ ಹೋದ ಹೆಣ್ಣು ಪುನಃ ಹೆತ್ತ ಮನೆಗೆ ಬಂದು ಜಾಂಡು ಹಾಕಿದರೆ ಮದುವೆಯಾಗುವ, ಮದುವೆಯಾಗದ ಅಣ್ಣ-ತಂಗಿಯರಿದ್ದರೆ ಅವರಿಗೇನಾಗಬಹುದು ? ನೀನೇ ಊಹಿಸಿಕೊಳ್ಳು. ಅಣ್ಣ ಮಾತಾಡದೇ ಸುಮ್ಮನಿರುವನು. ಹೆತ್ತ ಮನೆಯಲ್ಲಿ ಹೆತ್ತವರಿಲ್ಲದಿದ್ದರೆ ಅಂತಹ ಹೆಣ್ಣಿನ ಗತಿಯೇನಾಗಬೇಕು ? ಅಣ್ಣಂದಿರಿಗೆ ಸ್ವಲ್ಪ ಕರುಣೆ ಬಂದರೆ, ಆಳಿನಂತೆ ಅತ್ತಿಗೆ ಹೇಳಿದಷ್ಟು ಮಾಡಿ, ಬಯ್ದಷ್ಟು ಕೇಳಲಿಲ್ಲವೆನ್ನುವಂತೆ ಕಿವಿಕೊಡದೆ ಕಾಲ ಹಾಕಬೇಕಲ್ಲ. ತಿರುಗಿ ಉತ್ತರಿಸಿದರೆ ಅತ್ತಿಗೆ ಕೆನ್ನೆಗೂ ಬಿಗಿದಾಳು. ”

“ ಲಚ್ಚಿ ತಿರುಗಿ ಹೋಗುವದಿಲ್ಲವೆ ? ”

“ ಎಲ್ಲಿಗೆ ? ”

ಅವಳ ಮೋರೆ ನೋಡುತ್ತ ರವಿ ಹೇಳಿದನು : " ಅವಳ ಗಂಡನ ಮನೆಗೆ.... "

" ರವಿಯಣ್ಣಾ, ನೀನೂ ಹಾಗೆ ಎನ್ನುವಿಯಾ ? "

" ಶಾಸ್ತ್ರದಂತೆ ಅವಳ ಮದುವೆಯಾಗಿದೆಯಲ್ಲ ? "

" ಶಾಸ್ತ್ರ ಮದುವೆ ಮಾಡಿದೆಯಂತೆ ಯಾರು ಹೇಳಿದರು ? ಒಲ್ಲದವ ಳನ್ನು ಒದ್ದು, ಇನ್ನೊಬ್ಬನ ಕುತ್ತಿಗೆಗೆ ಕಟ್ಟಿವ್ದಾರೆಂಬುದು ನಿನಗೆ ಮರೆತಿರಬೇಕು, ಅಲ್ಲವೆ ? "

" ಈಗ ಏನು ಮಾಡಬೇಕೆನ್ನುವೆ ? "

" ಅವಳು ತಿರುಗಿ ಹೋಗುವದಿಲ್ಲವಂತೆ. "

" ಇಲ್ಲಿ ಎಷ್ಟು ದಿನ ಉಳಿಯಲು ಸಾಧ್ಯ ? "

" ಅವನ್ನೇ ಯೋಚಿಸಬೇಕಾಗಿದೆ. "

" ಗೌರಾ, ಲಚ್ಚಿ ಯಾಕೆ ಹೋಗುವದಿಲ್ಲೆಂತ ಕೇಳಲೆ ? "

" ಕೇಳಿಯಾದ ಮೇಲೆ ಮತ್ತೆ ಕೇಳಲೇ ಎನ್ನುತ್ತೀಯಾ ? ಅತ್ತೆಯಿದ್ದ ಮನೆ, ಅತ್ತೆ ಮೊದಲ ದಿನದಲ್ಲಿ ಚೆನ್ನಾಗಿಯೇ ಕಂಡಳಂತೆ. ಆದರದಿಂದ ನೋಡಿ ಕೊಂಡಳಂತೆ. ತಾಳಿ ಕಟ್ಟಿದ ಗಂಡೊಂದಿದೆಯಲ್ಲ, ಅದಕ್ಕೆ ಹೆಣ್ಣಿನ ಸುಖ-ದುಃಖ ಬೇಕಿಲ್ಲ; ಹೆಣ್ಣಿನ ಮೈ ಬೇಕು. ಅಲ್ಲಿಯೂ ಹಾಗೆಯೇ ಆಯಿತು. ನಾನು ಹಲವು ಸಾರೆ ಪೀಡಿಸಿ ಕೇಳಿದಾಗ, ಆಣೆಯಿಟ್ಟು ಕೇಳಿದಾಗ ಅಕ್ಕನು ನಿಜ ವಿಷಯ ಹೇಳಿದ್ದಾಳೆ. ಅವಳಿಗೆ ತಾಳಿ ಕಟ್ಟಿದವ, ಅವಳನ್ನು ಬಲಾತ್ಕರಿ ಸಲು ಯತ್ನಿಸಿದನಂತೆ. ಅವಳು ಜೀವವೆಂದರೆ ಅವನು ಕೇಳಬೇಕಲ್ಲ ? ಏನೇನೋ ಮಾಡಿದನಂತೆ. ಅಕ್ಕ ರಾವುಗೆಟ್ಟು ಕೂಗಿದಳಂತೆ ; ಮನೆಯಲ್ಲಿ ಎಲ್ಲರಿಗೂ ಗೊತ್ತಾಯಿತು. ಓಡಿ ಬಂದರು ; ಅವನ ಮುಸುಡೆಗೂ ಮರ್ಯಾದೆಯಾಯಿತು. ತಾಯಿಯ ಹತ್ತಿರ ಹೇಳಿದನಂತೆ, ' ಅಕ್ಕ ಹೆಣ್ಣೂ ಅಲ್ಲ, ಗಂಡೂ ಅಲ್ಲ ' ಎಂದು. ಅದನ್ನು ಹೇಳುವಾಗ ಅಕ್ಕ ಕೇಳುತ್ತಿದ್ದಳಂತೆ ; ಇನ್ನೊಬ್ಬರ ಮನೆಯಾದುದ ರಿಂದ ಅವರು ಅಂದುದನ್ನೆಲ್ಲ ತಲೆ ತಗ್ಗಿಸಿ ಕೇಳಬೇಕಲ್ಲ. ಅಣ್ಣಾ, ಇಂತಹ ಮಾತೆಲ್ಲ ಹೆಣ್ಣಾದ ನಾನು ಗಂಡಿನ ಕೂಡ ಉಸುರಬಾರದಿತ್ತು. ಏನೋ ಮನ ಸ್ಸಿನ ಉದ್ವೇಗ ನುಡಿಸಿಬಿಟ್ಟಿತು. "

ಗೌರಾ ಇನ್ನೂ ಎಷ್ಟು ಹೇಳುತ್ತಿದ್ದಳೋ. ಎತ್ತಲೋ ನೋಡಿ ಮಾತಾಡು

ತ್ತಿದ್ದಳು. ರವಿಯ ಅಳುವ ಧ್ವನಿ ಕೇಳಿ, ಅವಳು ಮಾತು ನಿಲ್ಲಿಸಿ, ಅಳುಗಣ್ಣಿನಿಂದ ಅವನತ್ತ ನೋಡಿದನು. ಅವಳ ಕೈ ಅವನ ಅಳುಮೋರೆಯ ಮೇಲಿತ್ತು. ಆದರೂ ಉದ್ವೇಗದ ಬಲದಿಂದ ಮುಂದುವರಿಸಿದಳು. ಆಗವಳ ಮೋರೆ ಗಂಭೀರವಾಗಿತ್ತು. ನಯನಗಳು ಮಿಂಚುತ್ತಿದ್ದವು.

"ರವಿಯಣ್ಣ, ಇವು ನಿನಗೆ ಬೇಡಾದ ಮಾತುಗಳೆಂದು ನನಗೆ ಗೊತ್ತಿತ್ತು. ನಿಜ ಸ್ಥಿತಿಯನ್ನು ಬಚ್ಚಿಟ್ಟು ನಿನಗೆ ಕಣ್ಣುಕಟ್ಟುವದರಲ್ಲೇನೂ ಅರ್ಥವಿಲ್ಲ. ಅಕ್ಕ ಸುರಕ್ಷಿತವಾಗಿ ಬರಲಿಲ್ಲ. ಬರುವಾಗ ಆ ಮನೆಯ ಎಲ್ಲ ಬಂಧನಗಳನ್ನೂ ಕಡಿದುಕೊಂಡೇ ಬಂದಿದ್ದಾಳೆ. ಅಕ್ಕನನ್ನು ನೀನು ಈಗ ನೋಡಿಲ್ಲ; ಒಮ್ಮೆ ನೋಡಿದರೆ ಹೆಣ್ಣು ಜನ್ಮ ಎಷ್ಟು ಹೀನ ಎಂದು ನಿನಗೆ ಜಿಗುಪ್ಸೆಯಾದೀತು. ಹೆಣ್ಣಾಗಿ ಹುಟ್ಟಿದ ಮೇಲೆ ಹೆಣ್ಣಲ್ಲ ಎಂದು ಸಾಧಿಸಿಕೊಳ್ಳಲೇನಾದರೂ ಸಾಧ್ಯವಿದೆಯೆ? ಮದುವೆಯಾದರಂತೂ ತೀರಿತು; ಗಂಡಸಿನ ಕಾಮದ ಗೊಂಬೆಯಾಗಿರಬೇಕು. ಅವನಿಗೆ ಕೈಹಿಡಿದ ಹೆಣ್ಣಿನಲ್ಲಿ ವಿರಕ್ತಿಯುಂಟಾದರೆ ಇನ್ನೊಂದನ್ನು ಹುಡುಕುತ್ತಾನೆ. ಹಾಗೆ ಹೆಣ್ಣೂ ಮಾಡುತ್ತ ಹೋದರೆ ಪೃಥ್ವಿಯ ಅಸ್ತಿತ್ವದಲ್ಲೇ ಸ್ಥಿತ್ಯಂತರವಾದೀತು. ರವಿಯಣ್ಣ, ಒಂದು ಮಾತು ಮಾತ್ರ ನಿಜ—ಅಕ್ಕ ಮೊದಲಿನಂತಿಲ್ಲ. ಮನೆಯಲ್ಲಿ ಹೇಳಿದಷ್ಟು ಕೆಲಸವನ್ನು ಮಾಡುತ್ತಾಳೆ. ಅತ್ತಿಗೆಯ ದರ್ಪ ಬೇರೆ ಸುರುವಾಗಿದೆ. ಅತ್ತಿಗೆಯುಟ್ಟ ಬಟ್ಟೆಗಳನ್ನು ಅಕ್ಕನೇ ಒಗೆಯಬೇಕು. ನನಗದನ್ನು ಕಂಡು ಕಂಡು ಬೇಸರವಾಗಿ ಅಕ್ಕನಿಗೆ ಹೇಳಿದ್ದೆ: 'ಅತ್ತಿಗೆಯ ಬಟ್ಟೆ ಒಗೆಯುವ ಅವಶ್ಯಕತೆ ನಿನಗಿಲ್ಲವೆಂದು.' ಅಕ್ಕ ಮಾತನಾಡಲೇ ಇಲ್ಲ. ತಲೆ ತಗ್ಗಿಸಿ ಅಳುತ್ತ ಒಗೆಯತೊಡಗಿದಳು.

"ಅಕ್ಕ ಈಗೀಗ ಮೌನವಾಗತೊಡಗಿದ್ದಾಳೆ; ನನ್ನಿಂದಲೂ ಒಂದಕ್ಷರವನ್ನು ಅವಳ ಬಾಯಿಯಿಂದ ಹೊರಡಿಸಲು ಸಾಧ್ಯವಿಲ್ಲ. ಮತ್ತೆ ಮತ್ತೆ ಕೇಳಿದರೆ ನನ್ನನಪ್ಪಿಕೊಂಡು ಅತ್ತುಬಿಡುತ್ತಾಳೆ. ಮೊದಲಿಗೆ ನಿನ್ನ ಹೆಸರು ಅಕ್ಕನಿಗೆ ಬೀಜಾಕ್ಷರವಾಗಿತ್ತು, ಅಮೃತಾಕ್ಷರವಾಗಿತ್ತು. ನೀನು ಬರುತ್ತಿರುವ ದಿನ ಅಕ್ಕನ ಸಡಗರ ನೋಡಬೇಕು. ತಾಸುಗಟ್ಟಲೆ ಆರಿಸಿ ಬ್ಲಾವುಜ ತೊಡಬೇಕು, ಸೀರೆಯುಡಬೇಕು, ಕನ್ನಡಿಯ ಮುಂದೆ ಕುಳಿತು ತಲೆಯನ್ನೆಷ್ಟು ಬಾರಿ ಬಾಚಿಕೊಳ್ಳುತ್ತಿದ್ದಳೋ? ಹಾಗೆಯೇ ನೆನಪಾದಾಗಲೆಲ್ಲ ಕನ್ನಡಿಯ ಮುಂದೆ ನಿಂತು ಮುಂಗುರುಳು, ಹಣೆ, ಹುಬ್ಬುಗಳನ್ನು ತೀಡಿಕೊಳ್ಳುತ್ತಿರುವ ಪರಿಯೇ ಬೇರೆ.

ನಾನು ಏನೂ ಗೊತ್ತಿಲ್ಲದ ಮಡ್ಡು ಎಂದು ಹಾಗೇಕೆ ಹೀಗೇಕೆ ಎಂದು ಕೇಳಿದರೆ, ತಿರುಗಾಡಲು ಹೋಗಬೇಕು, ಅಲ್ಲಿಗೆ ಹೋಗಬೇಕು, ಇಲ್ಲಿಗೆ ಹೋಗಬೇಕು—ಹೀಗೆಲ್ಲ ಹೇಳಿ ನಿಜ ವಿಷಯ ಮರೆಸಲು ಯತ್ನಿಸುತ್ತಿದ್ದಳು. ನಾನು ಸುತ್ತಾಡಿ ಬರಲು ದುಂಬಾಲು ಎಬ್ಬಿಸಿದರೆ, 'ನಿನ್ನ ರವಿಯಣ್ಣ ಬರುತ್ತಾರೆ. ಅವರು ಬಂದ ನಂತರ ನಾವೆಲ್ಲ ಹೋಗೋಣವೆ'ಂದು ರಮಿಸುವಳು. ನೀನು ಬಂದರಂತೂ ತೀರಿತು; ಆ ದಿನ ತಿರುಗಾಟ ಅಕ್ಕನ ಕೋಣೆಯಲ್ಲಿಯೆ. ನಿನ್ನ ಅವಳ ಪುರಾಣ ಮುಗಿಯಬೇಕಲ್ಲ. ನಿಮ್ಮಿಬ್ಬರ ಪುರಾಣ ಮುಗಿಯಬೇಕಾದರೆ ರಾತ್ರಿ ಎಂಟು ಗಂಟೆಯಾಗುತ್ತಿತ್ತು. ನಂತರ ತಿರುಗಾಟದ ಪ್ರೋಗ್ರ್ಯಾಮ್ ಮುಂದಿನ ದಿನ ಎಂದು ನೀನು ತಲೆತಟ್ಟಿ ಮಾಯವಾಗಿ ಬಿಡುತ್ತಿದ್ದಿ.

"ಇನ್ನೊಂದು ದಿನ ನೆನಪಿದೆಯೇ? ನೀನು ಬರದೇ ಬಹಳದಿನಗಳಾದವೆಂದು ಅಕ್ಕ ಅಳುತ್ತ ಕುಳಿತಿದ್ದಳು. ಯಾಕೆಂದು ಕೇಳಿದರೆ ತಲೆ ನೋವೆಂದು ನಿಜ ವಿಷಯ ನನ್ನಿಂದ ಮರೆಸಿಬಿಡುತ್ತಿದ್ದಳು. ನಾನೂ ಇರಬಹುದೆಂದು ಬೇಸರಪಟ್ಟುಕೊಂಡೆ; ನೀನು ದೂರದಿಂದ ಬರುವದನ್ನು ನೋಡಿ ಅಕ್ಕನಿಗೆ ತಿಳಿಸಿದೆ; ಅಕ್ಕನ ತಲೆನೋವು ಎಲ್ಲಿ ಓಡಿತೋ. ನೀನು ಮಾಳಿಗೆಯೇರುತ್ತಿರುವಾಗ ಅಕ್ಕ ಅಡಿಗೆ ಕೋಣೆಯಲ್ಲಿ ಮೋರೆ ತೊಳೆಯುತ್ತಿದ್ದಳು. ನಾನು ಅಕ್ಕನಿಲ್ಲ ಎಂದಾಗ ತಿರುಗಿ ಹೋಗಬೇಕೆಂದಿದ್ದಿಯಲ್ಲವೇ? ತಿರುಗಿ ನಕ್ಕು ಅಕ್ಕ ಕೆಳಗಿದ್ದಾಳೆ; ಈಗ ಬರುತ್ತಾಳೆ ಎಂದಾಗ, 'ಅಬ್ಬಾ ಲಾಡಿ' ಎನ್ನುತ್ತ ನನ್ನ ತಲೆತಟ್ಟಿ ಅಕ್ಕನ ಕೋಣೆಯಲ್ಲಿ ನೀನು ಕುಳಿತುಕೊಂಡೆ; ನಾನು 'ಹಾಯ್' ಎಂದುದು ನಿನ್ನ ಆನಂದದ ರಭಸದಲ್ಲಿ ಕೇಳಿರಲಿಕ್ಕಿಲ್ಲ.

"ಅಕ್ಕ ಮೇಲೆ ಬರುತ್ತಿರುವಾಗ ನಾನಿರುವದನ್ನು ಕಂಡು ನನಗೇನೇನೋ ಕೆಲಸ ಹೇಳಿದಳು. ನಾನು ನಿಂತಲ್ಲಿಂದ ಕದಲಲೇ ಇಲ್ಲ. ಅಕ್ಕ ನಿನ್ನ ಸಮೀಪ ಬಂದಾಗ, ಅವಳನ್ನು ನೀನು ಹತ್ತಿರ ಎಳೆದುಕೊಳ್ಳಲಿಲ್ಲವೆ? ನಾನು 'ಅಕ್ಕ ಅಳುತ್ತಿದ್ದಳು' ಎಂದಾಗ ನನ್ನ ಕಡೆ ಕಣ್ಣುಬಿಟ್ಟು ನೋಡಿ, 'ಇಲ್ಲಾ, ಅವಳು ಸುಳ್ಳು ಹೇಳುತ್ತಾಳೆ' ಎಂದಳು. 'ಮೋರೆ ತೊಳೆದುಕೊಂಡು ಬಂದೆಯಾ?' ಎಂದು ನೀನು ಕೇಳಿದುದಕ್ಕೆ ಉತ್ತರಿಸದೇ ಅವಳು ನನ್ನ ಕಡೆಗೆ ಕೈತೋರಿಸುತ್ತ, ನಿನ್ನ ಕಡೆಗೆ ಸೂಚ್ಯವಾಗಿ ನೋಡಿದ್ದಳಷ್ಟೇ? ಆಗ ನಾನಲ್ಲಿದುದು ಅವಳ

ದೃಷ್ಟಿಯಲ್ಲಿ ನಿಮ್ಮ ಪ್ರೇಮಾಲಾಪಕ್ಕೆ ತೊಂದರೆಯುದಾಗಿತ್ತು. ಈಗ ತಿಳಿಯುತ್ತದೆ. ಆಗ ಅದೆಲ್ಲ ಹೇಗೆ ತಿಳಿಯಬೇಕು ? ಅವು ನಮ್ಮ ಜೀವನಕ್ಕೆ ಹೊಸ ಪಾಠಗಳು. ನೀನು ನನ್ನನ್ನು ಅಲ್ಲಿಂದ ಬೇರೆಡೆ ಕಳುಹಿಸಲು, ನನಗೂ ದುಡ್ಡು ಕೊಟ್ಟು, ಸಿಗರೇಟ ತರಲು ಕಳುಹಿಸಿದೆ. ನೀನು ಸಿಗರೇಟ ಸೇದುವದು ಅಕ್ಕನಿಗೆ ಬೇಡವಾದರೂ ತಾತ್ಪೂರ್ತಿಕವಾಗಿ, ನನ್ನ ಗೈರಹಾಜರಿಯಾಗುವದು ಎಂಬ ಉದ್ದೇಶದಿಂದ ಅಕ್ಕ ನನ್ನ ಬೆನ್ನು ತಟ್ಟಿ, "ಗೌರಾ, ಈ ಬದಿಯಿಂದ ಸಿಗರೇಟ ತರಬೇಡ. ಕೆಳಗಿನ ಬಾಝಾರಕ್ಕೆ ಹೋಗಿ ಆ ರಾಮೂನ ಅಂಗಡಿಯಿಂದ ತೆಗೆದುಕೊಂಡು ಬಾ. ಬರುವಾಗ್ಗೆ ಅಜ್ಜಿಯ ಒಳಅಂಗಿಗಳ ಸಾಲಿನಿಂದ ಹಾದು, ನಾವು ಮೊನ್ನೆ ಲಂಗಕ್ಕೆ ಬಟ್ಟೆ ಕೊಟ್ಟಿದ್ದೆವಲ್ಲಾ, ಅದು ಹೊಲಿದಾಗಿದೆಯೋ ಎಂದು ಕೇಳಿಕೊಂಡು ಬಾ" ಎಂದಳು. ನನ್ನ ಕೆಲಸದ ಪಟ್ಟಿ ಉದ್ದವಾಯಿತೆಂದು ನಿನಗೂ ಗೊತ್ತಾಗಿ, 'ಗೌರಾ, ಈ ನಾಲ್ಕಾಣೆ ಇಟ್ಟುಕೋ, ನಿನ್ನ ಖರ್ಚಿಗಾಯಿತು' ಎಂದು ಕೊಟ್ಟು ಕಳುಹಿಸಲಿಲ್ಲವೇ ? ಕೈಯಲ್ಲಿ ದುಡ್ಡಿದೆಯೆಂದು ನಾನು ಹೊರಟುಹೋದೆ ಹೊರತು, ಇಲ್ಲವಾಗಿದ್ದರೆ ಹೊರಡುತ್ತಿರಲಿಲ್ಲ. ಆಗಿನ್ನೂ ಎಳೆಯ ವಯಸ್ಸಾದುದರಿಂದ ದುಡ್ಡು ಕಂಡರೆ ನನಗೂ ತುಂಬ ಜೀವವಾಗಿತ್ತು.

"ಬಹುಶಃ ನಾನು ತಿರುಗಿ ಬರುವಾಗ್ಗೆ, ಒಂದು ತಾಸಾದರೂ ಕಳೆದಿರಬೇಕು. ಆಗ ನಾನು ಸಪ್ಪಳಾಗದಂತೆ ಮೆಲ್ಲನೆ ಮೆಟ್ಟಿಲನ್ನು ಏರಿದೆ. ಬಹುಶಃ ಅಕ್ಕನಿಗಾಗಲೀ, ನಿನಗಾಗಲೀ ಗೊತ್ತಾಗಿರಲಿಕ್ಕಿಲ್ಲ. ಒಮ್ಮೆ ನಾನು ಬರುತ್ತಿದ್ದೇನೆಂದು ಗೊತ್ತಾಗಿದ್ದರೆ, ಅಕ್ಕ ಮೊದಲೇ ನಿನ್ನ ತೊಡೆಯಿಂದ ಎದ್ದುಬಿಡುತ್ತಿದ್ದಳೇನೋ ? ನಾನು ನೇರವಾಗಿಯೇ ಬಂದುಬಿಟ್ಟೆ. ಆಗ ಅಕ್ಕ ಎಷ್ಟಿದ್ದಳು ಗೊತ್ತೇ ? ನಿನಗೂ ಮರೆತಿರಲಿಕ್ಕಿಲ್ಲ. ಅವೆಲ್ಲವು ಜೀವನದಲ್ಲಿಯ ಅಗಮ್ಯ ವ್ಯಾಪಾರದ, ಸ್ತ್ರೀಯಲ್ಲಿ ಮಿಂಚಾಡುವಂತಹ ಘಟನೆಗಳಾದುದರಿಂದ ಅಕ್ಕನಿಗೂ ನಿನಗೂ ಅದು ಹೊಸ ಘಟನೆಯಾಗಿಯೇ, ನಿನ್ನೆ ಮೊನ್ನೆಯದಾಗಿಯೇ ಉಳಿದಿರಬೇಕು. ನನ್ನ ನಾಲಿಗೆಗೂ ತನ್ನ ಚಪಲತೆಯನ್ನು ತೀರಿಸಿಕೊಳ್ಳುವ ಹುರುಪು ಬಂದುಬಿಟ್ಟಿದೆ. ಅದನ್ನು ಹೇಳಿಬಿಡುತ್ತೇನೆ. ಆಗ ಅಕ್ಕ ನಿನ್ನ ತೊಡೆಯ ಮೇಲೆ ಕುಳಿತಿದ್ದಳು. ಅವಳ ಬಲಗೈ ನಿನ್ನ ಕುತ್ತಿಗೆಯನ್ನು ಸುತ್ತಿತ್ತು. ಎಡಗೈಯಿಂದ ಜಡೆಯನ್ನು ಹಿಡಿದುಕೊಂಡಿದ್ದಳು. ನಿನ್ನ ಎಡಗೈ ಅವಳ ಎಡಪಾರ್ಶ್ವವನ್ನು

ಸುತ್ತಿ, ಅವಳನ್ನು ನಿನ್ನ ಎದೆಗೆ ಒತ್ತಿ ಹಿಡಿದುಕೊಂಡಿತ್ತು. ನಾನದನ್ನು ಕಂಡಾಗ ನೀವಿಬ್ಬರೂ ಬೆಚ್ಚಿದರೂ, ನೀನು ಅಕ್ಕನನ್ನು ಏಳಿಸಲು ಅವಳ ಮೈ ದೂಡಿದರೂ ಅವಳು ಎದ್ದಳೆ? ಇಲ್ಲ. ಯಾಕೆ? ಹೆಣ್ಣಿಗೆ ಗಂಡನ್ನೊತ್ತಿ ಇನ್ನೊಬ್ಬರೆದುರಿಗೆ ಕುಳಿತುಕೊಳ್ಳಲು ನಾಚಿಕೆಯಾಗುವದಿಲ್ಲವೆ? ಹಾಗಾದರೆ ಅಕ್ಕ ಆಗೇಕೆ ಏಳ ಲಿಲ್ಲ, ನೀನು ಬಲ್ಲೆಯಾ? ಹೆಣ್ಣು ಗಂಡಿನ ಸಾಮೀಪ್ಯಸುಖವಿಚ್ಛಿಸಿ ಅದು ಕೈ ಸೇರಿದಾಗ ಎದುರಿಗೆ ಯಾರು ಹಾದು ಹೋದರೂ ಅದರ ಪರಿವೆ ಅವಳಿ ಗುಳಿಯುವದಿಲ್ಲ. ಅಂದರೆ ಆ ವೇಳೆ ಅವಳಿಗೆ ರಸನಿಮಿಷಗಳು. ಆಗ ನಾನು ನಿನಗೆ ಸಿಗರೇಟ ಕೊಟ್ಟು ತಿರುಗಿದಾಗ ಅಕ್ಕ ನನ್ನ ಕಡೆ ಕೈತೋರಿಸಿ, ಸನ್ನೆಯಿಂ ದಲೇ ಅವಳಿಗೇನೂ ತಿಳಿಯುವದಿಲ್ಲ ಎಂದಳು. ನೀನು ಆಕೆಯ ಕೆನ್ನೆ ಹಿಂಡಿದಾಗ ನಿನ್ನ ಕೈ ಹಿಡಿದುಕೊಂಡು ಬಾಯಿ ಕಳೆದಳು. ನನಗೆ ಅದು ಹೊಸದೇ ಆದರೂ ನಿಮ್ಮಿಬ್ಬರ ಜೋಡಿ ನೋಡಿ ನನಗೇನೂ ಅರಿಯದ, ಅವ್ಯಕ್ತ ಆನಂದವಾಯಿತು. ತಿನ್ನಲು ಏನು ತಂದಿ? ಎಂದಾಗ ನಾನು ತಂದ ಚಾಕ್ಲೇಟುಗಳನ್ನು ತೋರಿ ಸಿದೆ. ಅವುಗಳಲ್ಲಿ ಎರಡನ್ನು ನೀನು ತೆಗೆದುಕೊಂಡು, ನೀನೇ ಅಕ್ಕನ ಬಾಯಿ ಕಳೆಯಿಸಿ ಒಂದು ಚಾಕ್ಲೇಟ ತುರುಕಿದೆಯಲ್ಲವೆ? ಇನ್ನೊಂದನ್ನು ನೀನು ತಿಂದಿ. ಆದಿನ ನೀನು ಹಾಗೇಕೆ ಮಾಡಿದೆ ಎಂಬ ಪ್ರಶ್ನೆ ನನಗೂ ಪ್ರಶ್ನಾರ್ಥಕವಾಗಿ ಉಳಿಯಿತು. ಅಕ್ಕ ಮಾತ್ರ ಜಂಬದ ಕೋಳಿಯಾಗಿ ನಿನ್ನ ತೊಡೆಯ ಮೇಲೆ ಕುಳಿತುಕೊಂಡು ಹರುಷದಿಂದ ತನ್ನ ಕಾಲುಗಳನ್ನು ಅಲ್ಲಾಡಿಸುತ್ತಿದ್ದಳು. ಅಂತಹ ದಿನಗಳು ಜೀವನದಲ್ಲಿ ಹಲವಿಲ್ಲ. ಹಲವಿದ್ದರೂ ಅದಕ್ಕೆ ಪ್ರಾಧಾನ್ಯತೆ ಇಲ್ಲ. ಅಂದಿನಿಂದ ಮುಂದೆ ನೀವಿಬ್ಬರೂ ಕೋಣೆಯಲ್ಲಿ ಕುಳಿತಿರುವಾಗ ಯಾರಾದರೂ ಬರುವರೋ ಎಂದು ಬಾಗಿಲು ಕಾಯುವ ಕೆಲಸ ನನ್ನದೇ ಆಯಿತು. ಅದಕ್ಕೆ ಬದಲಾಗಿ ನಿನ್ನಿಂದ ನಾಲ್ಕಾಣೆಗಳನ್ನು ನಾನು ಕಿತ್ತು ಕೊಳ್ಳುತ್ತಿದ್ದೆನು."

---

೬

" ರವಿಯಣ್ಣ ! ಏಕೋ ತಲೆತುಂಬ ಹರಟೆ. ತನ್ನ ತಲೆಯನ್ನು ಹಾಳು ಮಾಡುತ್ತಾಳೆಂದು ಭಾವಿಸಬೇಡ. ಹಿಂದಿನ ವಿಷಯವನ್ನು ಪುನಃ ಎಚ್ಚರಿಸಿ ತನ್ನ ಮರ್ಯಾದೆ ಕಳೆದರೆ ಇವಳಿಗಾಗುವ ಲಾಭವೇನು ಎಂದು ನೀನು ಕೇಳೀಯೆ. ಅದೆಲ್ಲದಕ್ಕೂ ಸಮರ್ಪಕವಾಗಿ ಉತ್ತರ ಕೊಡುವಷ್ಟು ನನ್ನ ಬುದ್ಧಿ ಹರಿತವಾಗಿದೆ. ಇವೆಲ್ಲ ವಿಷಯಗಳನ್ನು ನಿನ್ನೆದುರಿಗೆ ಇಟ್ಟು ನಾನು ಸಾಧಿಸುವದು ನಿನ್ನ ಮತ್ತು ಅಕ್ಕನ ಸಾಮೀಪ್ಯತೆಯನ್ನು ಮತ್ತು ನಿನ್ನ ಅವಳ ಸಂಬಂಧವನ್ನು. ನೀನೇ ಪುನಃ ಯೋಚಿಸು—ಅವಳು ಮತ್ತು ನೀನು ಪ್ರಾಸಂಚಿಕ ಬಂಧನದಲ್ಲಿ ಎಲ್ಲಿ ಎಲ್ಲಿ ಇದ್ದಿರಿ ಎಂಬುದನ್ನು; ಕೊನೆಗೂ ನೀನೇ ನಿರ್ಣಯವನ್ನು ಕೊಡು—ಅಕ್ಕ ನಿನ್ನ ಕೈಹಿಡಿಯಲು ಸಮರ್ಥಳೋ ಅಸಮರ್ಥಳೋ ಎಂಬುವನ್ನು.

" ನಿಜ. ಒಂದು ವಿಷಯ ಮಾತ್ರ ನಿಜ ; ನಿನ್ನ ಅವಳ ನಡುವೆ ಒಂದು ಮಹಾ ಕಂದಕವನ್ನೇ ಉಂಟುಮಾಡಿ, ರೂಢಿಮೂಲವಾದ ಶಾಸ್ತ್ರದ ಹೊಳೆಯು ಹರಿದು ಬಿಟ್ಟಿವೆ. ಒಬ್ಬಳು ಹೆಣ್ಣಿದ್ದಾಳೆಂದು, ಅವಳಿಗೆ ಬದುಕಲು ಗಂಡನೊಬ್ಬನ ಅಗತ್ಯವಿದೆಯೆಂದು ಯಾರೋ ಬೀದಿಯಲ್ಲಿ ತಿರುಗುವನೊಬ್ಬ ಗಂಡಿನ ಕುತ್ತಿಗೆಗೆ ಕಟ್ಟಬೇಕೆಂದು ಶಾಸ್ತ್ರ ಹೇಳುತ್ತಿದೆಯೆ ? ಅದೇ ಶಾಸ್ತ್ರವೇ ಗಂಡಿಗೆ ಮದುವೆಯಾದ ಹೆಣ್ಣಿನ ಮೇಲೆ ಮನಸ್ಸಿಲ್ಲದಿದ್ದರೆ, ಬೇರೊಬ್ಬ ಒಪ್ಪುವ ಹೆಣ್ಣಿಗೆ ತಾಳಿಕಟ್ಟಲು ಅಪ್ಪಣೆ ಕೊಡುತ್ತಿದೆಯಲ್ಲವೆ ? ಒಂದೇ ಶಾಸ್ತ್ರ ಎರಡು ರೀತಿಯ ನಿಲುವುಗಳಿಗೆ ನಿಚ್ಚಣಿಕೆಯಿಡಲು ಏಕೆ ಅನುವು ಕೊಡುತ್ತಿದೆ? ಇಷ್ಟೇ ನೋಡಣ್ಣ ! ಶಾಸ್ತ್ರ ಇರುವುದಾದರೆ ಅದು ಕೆಲವು ಸಂದಿಗ್ಧತೆಯ ವೇಳೆಯಲ್ಲಿ ಗಂಡಸಿನ ಬದಿಗೆ ನಿಂತು ಸಾಕ್ಷಿ ಹೇಳುವುದಕ್ಕೆ ಮಾತ್ರ.

" ಇನ್ನೂ ಒಂದು ವಿಷಯ ‘ ತಾಳಿ ಕಟ್ಟಿಸಿಕೊಂಡ ಹೆಣ್ಣು ’ ಎಂದು ಅದಕ್ಕೆ ಅಳುಕುವ ಕಾರಣವಿಲ್ಲ. ಮದುವೆ ಹತ್ತಿರವಾದಾಗ ‘ ಅಕ್ಕ ಒಪ್ಪಿಗೆಯೆ ’ ಎಂದಾಗ ಅಕ್ಕ ಇಷ್ಟೇ ಹೇಳಿದ್ದಳು. ‘ ಗೌರಾ, ಹೆಣ್ಣಿಗಿರುವದು ಒಂದೇ ಮನಸ್ಸು.

ಅದು ಹಲವು ಜನಕ್ಕೆ ನೋಡಾಟಕ್ಕಾಗಿ ಮಾರ್ಕೆಟಿನಲ್ಲಿ ಇಡಲ್ಪಟ್ಟುದಲ್ಲ. ವೇಶ್ಯೆಯರ ವಿಷಯ ಕೇಳೀಯೆ. ಸತ್ಯದ ಅರಿವಾದಾಗ ಪ್ರತಿಯೊಬ್ಬ ವೇಶ್ಯೆಯೂ ಯಾರೋ ತನಗನುಕೂಲವಾದ ಒಬ್ಬನಿಗೆ ಅನುರಕ್ತಳಾಗಿ ಇರುತ್ತಾಳಲ್ಲವೆ ಇನ್ನು ಬೇರೆ ರೀತಿ ಇರುವದಿಲ್ಲ. ಅವಳು ಶರೀರವನ್ನು ದಿನಕ್ಕೊಬ್ಬನಿಗೆ ಬಾಡಿಗೆ ಕೊಡುತ್ತಿದ್ದರೂ ಅದು ಹಸಿದ ಹೊಟ್ಟೆಯ ನೋವಿಗಾಗಿ ಮಾತ್ರ. ಆದರೆ ಆ ವೇಳೆಯಲ್ಲಿ ಅವಳ ಹೃದಯದಲ್ಲಾಗುವ ಬೀಭತ್ಸ ನೋವು ಮಾತ್ರ ಅವಳಿಂದ ತಡೆಯಲಸಾಧ್ಯವಾದುದು. ಹಲ್ಲುಕಚ್ಚಿ, ಕಣ್ಣುಮುಚ್ಚಿ ನೋವನ್ನು ನುಂಗಿಕೊಳ್ಳುತ್ತಾಳೆ, ಅಷ್ಟೇ. ತಂಗೀ, ನನ್ನದೂ ಅದೇ ರೀತಿಯಾಗಿದೆ. ಮಾತಾಡಲು ಉಪಾಯವಿಲ್ಲ. ಮನೆ ಬಿಟ್ಟರೆ ಬೇರೆ ಆಶ್ರಯವಿಲ್ಲ. ನನ್ನ ಹಣೆಯಲ್ಲಿ ಬರೆದಂತಾಗುವದು. ಅಥವಾ ಹೆಣ್ಣಾದ ನಾನು ಅವರನ್ನು ಎಲ್ಲಿದ್ದಾರೆಂತ ಹುಡುಕಿಕೊಂಡು ಹೋಗುವದು ಸಾಧ್ಯವಿದೆಯೆ? ನೆನಪಿನಲ್ಲಿಟ್ಟುಕೋ. ನನ್ನ ಸ್ಥಿತಿಯಂತೂ ಹೀಗಾಯಿತು; ನೀನು ಮಾತ್ರ ಎಂದಿಗೂ ಯಾರನ್ನೂ ಪ್ರೇಮಿಸಬೇಡ. ಚೆನ್ನಾದರೆ ಒಳಿತು, ಇಲ್ಲವಾದರೆ ಮರಣವಾದ್ಯಂತ ಆ ನೋವು ಎದೆಯಲ್ಲಿ ಉಳಿದೀತು.' ಹೀಗೆ ಹೇಳಿ ನನ್ನನ್ನಪ್ಪಿ ಗೋಳೋ ಎಂದು ಅತ್ತುಬಿಟ್ಟಳು. ತಾಳಿಕಟ್ಟಿದ್ದಾರೆಂದು ನೀನು ಹೇಳೀಯೆ. ಅದಕ್ಕೆ ನಾನು ಮಹತ್ವವನ್ನು ಕೊಡಲಾರೆನಣ್ಣಾ. ಆ ತಾಳಿ, ಅಂತಹ ಗಂಡಸಿನ ಅಧಿಕಾರ ಈ ಹೆಂಗಸಿನ ಮೇಲೆ ಇದೆಯೆಂದು ತೋರಿಸುವದಕ್ಕೆ ಮಾತ್ರ. ಅಕ್ಕನಿಗೆ ನಿಜವಾಗಿಯೂ ಅವನು ತಾಳಿ ಕಟ್ಟಲಿಲ್ಲ. ತಾಳಿ ಕಟ್ಟಿದವನು ಮನುಷ್ಯರನ್ನು ದುಡ್ಡು ಕೊಟ್ಟರೆ ಸ್ವರ್ಗಕ್ಕೆ ಕಳಿಸುವ ಆ ಭೂಸುರ ನಾಮಸಂಕೇತವುಳ್ಳ ಆ ಬಡಕಲು ಭಟ್ಟ, ಸುಬ್ಬಾ ಜೋಯಿಸನೆಂಬ ದರಿದ್ರ ಪ್ರಾಣಿಯೇ. ಅವನು ಹೀಗೆಷ್ಟು ಪಾಪ ಮಾಡಿದ್ದಾನೆಯೋ. ಅದಕ್ಕಾಗಿಯೇ ಅವನ ಜೀವ ಇಂದೋ ನಾಳೆಯೋ ಎನ್ನುವಂತಾಗಿದೆ.

"ಇನ್ನೂ ಹಲವು ವಿಷಯಗಳನ್ನು ಹೇಳಿ, ನಿನ್ನ ಮನಸ್ಸನ್ನು ತಿರುಗಿಸಲು ಛಲ ಹೊತ್ತು ಬಂದಿರುವ ಹೆಣ್ಣು, ಮತ್ತು ನೀನು ಪ್ರೀತಿಯಿಂದ ಕರೆಯುವ 'ಗೌರಾ' ನಾನಣ್ಣ. ಅಣ್ಣಾ, ನಿನಗೆ ತೂಕಡಿಕೆ ಬರುತ್ತಿದೆಯೆ?"

ರವಿ ಬೆಚ್ಚಿ ಬಿದ್ದವನಂತಾಗಿ "ಇಲ್ಲ" ಎಂದನು.

"ಕಣ್ಣು ಬಾಡುತ್ತಿವೆಯಲ್ಲ."

" ಅದು ನಿದ್ದೆಯಿಂದಲ್ಲ. "

" ಸುಳ್ಳು ಹೇಳಬೇಡ. "

" ನಿಜಕ್ಕೂ, ನೀನು ಹೇಳುವ ವಿಷಯಗಳನ್ನು ಮನನಮಾಡಿಕೊಳ್ಳುವಾಗ ದೃಷ್ಟಿ ಅಂತರ್ಗತವಾಗುತ್ತಿದೆ. "

" ಶೀಲಕ್ಕನಿಗೂ ನಿನ್ನ ಗೆಳೆಯರಿಗೂ ನನ್ನ ಪುರಾಣ ತೊಂದರೆಯಾಗುವದೇನೋ ! "

ಶೀಲಾ ಮಾತನಾಡಲಿಲ್ಲ.

ನಾನೆಂದೆ, " ಬೆಳಗು ಹರಿದರೂ ಚಿಂತೆಯಿಲ್ಲ. "

" ಶೀಲಕ್ಕ. "

" ಅವಳು ನನಗಿಂತ ಮೊದಲೇ ತಯಾರಿಯಿದ್ದಾಳೆ. "

" ಹಾಗಾದರೆ ರವಿಯಣ್ಣಾ, ಮುಂದುವರಿಸಲೆ ? "

ರವಿ ಅವಳ ಕಡೆ ನೋಡಿದ. ಅಡ್ಡಿಯಿಲ್ಲವೆನ್ನುವಂತೆ ಕಣ್ಸನ್ನೆ ಮಾಡಿದ. ಮತ್ತೆ ಮೊದಲಿನ ಧ್ವನಿ ಮುಂದುವರಿಯಿತು.

" ರವಿಯಣ್ಣಾ, ಹೆಣ್ಣು-ಗಂಡಿನ ಆದಿಯ ಮೂಲ ಬಂಧನದ ಬಗ್ಗೆ ಹೇಳುತ್ತೇನೆ. ವಾಸ್ತವದೆಡೆ ಸೃಷ್ಟಿಗೆ ವಿಚಾರ ಮಾಡುವದಾದರೆ ಅವೆರಡೂ ವಿರುದ್ಧ ಶಕ್ತಿಗಳು ಒಂದಕ್ಕೊಂದು ಪೂರಕ. ಹಾಗಿಲ್ಲವಾದರೆ ಗಂಡು ಹೆಣ್ಣನ್ನೇಕೆ ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ? ಅದರಂತೆಯೇ ಹೆಣ್ಣು ಪ್ರಾಣಿಯೂ ಈ ವಿಷಯದಲ್ಲಿ ಹಿಂದುಳಿದಿಲ್ಲವೆಂದೇ ಹೇಳಬೇಕು. ಅದಕ್ಕಾಗಿಯೇ ನೀನು ಪುನಃ ಯೋಚಿಸಿ ನಿರ್ಧಾರಕ್ಕೆ ಬಾ ಎನ್ನುತ್ತಿರುವದು. ನಿನ್ನ ಮನೋನಿಶ್ಚಯವೇನೋ ನಾನರಿಯೆ. ಆದರೂ ನಾನು ಹೆಣ್ಣಾದುದರಿಂದ, ಹೆಣ್ಣಿನ ಕಡೆಯಿಂದ ಬಂದವಳಾದುದರಿಂದ ನನ್ನಕ್ಕನ ಸ್ವೀಕಾರ ನಿರಾಕಾರದ ಬಗ್ಗೆ ನೀನು ಇನ್ನೊಮ್ಮೆ ಯೋಚಿಸಬೇಕು ಎಂದು ಪ್ರಾರ್ಥಿಸಿಕೊಳ್ಳುತ್ತೇನೆ. ಇನ್ನೊಂದು ಮಹತ್ವದ ಘಟನೆ. ಅದು ಯಾರಿಗೂ ಗೊತ್ತಿಲ್ಲವೆಂದು ನೀವಿಬ್ಬರೂ ಭಾವಿಸಿದ್ದರೂ, ನನಗದು ಗೊತ್ತಾಗಿದೆ ಎಂದಾಗ ನೀನು ಆಶ್ಚರ್ಯ ಪಟ್ಟೀಯೆ. ಯಾಕೆ ಗೊತ್ತೆ ? ಅಂದು ಅಕ್ಕ ನೀನು ವರ್ತಿಸಿದ ನಡತೆ ನಿಮಗೆ ಹರ್ಷದಾಯಕವಾಗಿದ್ದರೂ, ಯಾರಿಗಾದರೂ ಗೊತ್ತಾಯಿತೆ ಎಂಬ ಎದೆಯುಳುಕವಿತ್ತು. ಕೊನೆಗೆ ಯಾರಿಗೂ ಗೊತ್ತಾಗಿಲ್ಲವೆಂದು ನಂಬಿಕೆಯಾದ ಮೇಲೆ, ನೀವು ಮಾಡಿದ ಮಹಾಕಾರ್ಯಕ್ಕೆ

ನೀವು ಹೊಟ್ಟೆತುಂಬ ನಕ್ಕಿರಬಹುದು. ಅಂದು ನೀವು ಕಳೆದ ರಸನಿಮಿಷಗಳು ಇಂದಿನ ವಿಷನಿಮಿಷಗಳ ವೇಳೆಯಲ್ಲಿ ನೆನಪಾದಾಗ ನಿಮ್ಮಿಬ್ಬರ ಕಣ್ಣುಗಳನ್ನು ಹಿಂಡುತ್ತಿವೆಯೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಅದಿರಲಿ. ಏನೋ ದುರ್ದೈವದ ಮೂಲಕ ನೀವಿಬ್ಬರೂ ಬೇರೆ ಬೇರೆಯಾಗಿ ಬೇರೆ ಬೇರೆ ಹೆಣ್ಣು-ಗಂಡುಗಳ ಕೈ ಹಿಡಿದರೂ, ಜೀವನದ ಮೊದಲ ಸಲ, ಅದೂ ತಾರುಣ್ಯಾವಸ್ಥೆಯಲ್ಲಿ, ನಿಮ್ಮ ಪ್ರೇಮಬಾಂಧವ್ಯದ ನೆನಪು ಎಂದಾದರೂ ಮರೆಯಲು ಸಾಧ್ಯವೆ? ಅಷ್ಟೇ ಅಲ್ಲ, ನಿಮ್ಮ ಮುಂದಿನ ಜೀವನದಲ್ಲಿ, ಸನ್ನಿವೇಶ ಒದಗಿದಾಗ, ಒಮ್ಮೆ ಎಲ್ಲಿಯಾದರೂ ನಿಮ್ಮಿಬ್ಬರ ಭೆಟ್ಟಿಯಾದಾಗ್ಗೆ ನಿಮ್ಮ ಎದೆಗಳು ಜಗ್ಗೆಂದು ಸಿಡಿದು ಹೋದಾವು. ಪುನಃ ಅದೇ ವೇಳೆ ನಿಮ್ಮನ್ನು ಕೂರಂಬುಗಳಂತೆ, ಚುಚ್ಚಿ ಚುಚ್ಚಿ ರಕ್ತ ಸುರಿಸೀತು. ಏನಣ್ಣ! ಇದಕ್ಕೊಪ್ಪುತ್ತೀಯಾ? ಇಲ್ಲವೆ ಕಥೆ ಕೇಳುವವನ ಹಾಗೆ ಹೂಂ-ಗಟ್ಟುತ್ತಲಿರುತ್ತೀಯಾ?"

ರವಿ ಕಣ್ಣು ಮುಚ್ಚಿಕೊಂಡಿದ್ದನು. ಆದರೆ ನಿದ್ರೆ ಬಂದಿರಲಿಲ್ಲ.

"ಮುಂದಿನ ಘಟನೆ ಹೇಳಲೆ ಅಣ್ಣಾ!"

"ಹೂಂ."

"ನೀನು ಆಗಾಗಲೇ ಬಿ. ಎ. ಪರೀಕ್ಷೆ ಕೊಟ್ಟು ಬರುವಾಗ್ಗೆ, ಅಕ್ಕ ಚಾತಕಪಕ್ಷಿಯಂತೆ ವರ್ಷಧಾರಾರೂಪವಾದ ನಿನ್ನ ಪತ್ರಕ್ಕೆ ಕಾಯುತ್ತಿದ್ದಳು. ಪೋಸ್ಟಿಗೆ ಹೋಗಿ ನೀನು ಬರೆದ ಕವರುಗಳನ್ನು ಹೊತ್ತುಕೊಂಡು ಬರಲು ನಾನವಳಿಗೆ ಪೇದೆಯಾಗಿದ್ದೆ. ಪೇದೆಯ ಕೆಲಸಕ್ಕೆ ಸಂಬಳ ಗಿಟ್ಟಿಸುತ್ತಿದ್ದೆ. ನಾನು ಪೇದೆಯಾಗಿ ಕೆಲಸ ಮಾಡದಿದ್ದರೆ ನಿನ್ನ ಪತ್ರಗಳು ನಮ್ಮ ಮನೆಯವರಿಗೆ ಸಿಗುವ ಸಂಭವವಿತ್ತು. ತಂದ ಪತ್ರಗಳನ್ನು ನಾನವಳಿಗೆ ತೋರಿಸಿ ಕೊಡದೇ ಇರಬೇಕು—ಅಕ್ಕ ನನ್ನನ್ನು ಆದಷ್ಟು ರೀತಿಯಲ್ಲಿ ರಮಿಸುತ್ತಿದ್ದಳು; ಏನೇನೋ ಆಟದ ಸಾಮಾನುಗಳ ಆಸೆ ತೋರಿಸುತ್ತಿದ್ದಳು. ಆಗಲೂ ನಾನು ಕೊಡದಿದ್ದರೆ, ನಿನ್ನ ದಮ್ಮಯ್ಯಾ ಕಾಲಿಗೆ ಬೀಳುತ್ತೇನೆ ನಿನ್ನಕ್ಕನಲ್ಲವೆ? ಎಂದು ಏನೇನೆಲ್ಲ ಕೊಡುವ ಆಣೆಯಿಟ್ಟು ನನ್ನನ್ನು ಒಪ್ಪಿಸುತ್ತಿದ್ದಳು. ಆಗವಳ ಮೋರೆ ನೋಡಬೇಕು; ಅದೆಂತಹ ವಿರಹ! ಅದೆಂತಹ ಕಾತುರತೆ! ಪತ್ರ ಕೈಯಲ್ಲಿ ಸಿಕ್ಕಾಗ ಕುಣಿದುಬಿಡುತ್ತಿದ್ದಳು. ಅಣ್ಣಾ ಹಾಗೇಕೆ? ನಿನ್ನ ಅವಳ ಸಂಬಂಧ ಅಷ್ಟು ಭದ್ರವಾಗಿರದಿದ್ದರೆ, ಅವಳಲ್ಲೇಕೆ ಅಷ್ಟು ಪರಿವರ್ತನೆಗಳಾಗಬೇಕಿತ್ತು?

ನೀನು ಹೇಳಬಲ್ಲೆಯಾ? ಅಕ್ಕನ ಪತ್ರ ನಿನಗೆ ಬಂದಾಗ ನಿನಗೂ ಹಾಗೆಯೇ ಆಗುತ್ತಿತ್ತೆ? ಆದಕ್ಕೇ ಜೀವನದಲ್ಲಿ ಎರಡು ಹೃದಯಗಳ ಸಾಮೀಪ್ಯತೆಯನ್ನು ತರುವ ಆ ಪತ್ರ ಅಷ್ಟು ಮಹತ್ವದ ಪಾತ್ರವನ್ನು ವಹಿಸುತ್ತದೆ. ಇದಕ್ಕೆಲ್ಲವೂ ಉತ್ತರ ನಿನ್ನಿಂದೇ ಬರಲಿ ಎಂದು ಕಾಯುತ್ತಿದ್ದೇನೆ. ಉದ್ದೇಶ ನನ್ನ ಛಲ ವನ್ನು ಸಾಧಿಸುವದು.

" ನೀನು ಬರುವ ದಿನ ಅವಳಿಗೆ ಗೊತ್ತಿತ್ತು. ಮೂರುದಿನ ಹಿಂದಿನಿಂದಲೇ ಅವಳ ತಯಾರಿ. ಯಾವ ಸೀರೆ ಉಡಬೇಕು? ಯಾವ ರವುಕೆ ತೊಡಬೇಕು? ಮುಡಿಮಕೊಳ್ಳಲು ಯಾವ ಹೂವನ್ನು ಕೊಯ್ದು ತರಬೇಕು? ಹೀಗೆಲ್ಲ ನೀನು ಬರುವ ದಿನ ರಾತ್ರಿಯಿಡೀ ಅವಳಿಗೆ ನಿದ್ದೆಯಿಲ್ಲ. ಆ ದಿನ ತಲೆ ಮೈಗೆಲ್ಲ ಸ್ನಾನ ಮಾಡಿದ್ದಳು. 'ಮೊನ್ನೆ ಸ್ನಾನ ಮಾಡಿದ್ದೆಯಲ್ಲ!' ಎಂದು ಕೇಳಿದರೆ ಆಕೆಗೆ ಅದೇ ಒಂದು ಸಮಾಧಾನ. ನೀನು ಬಂದಿ. ಅದೇ ಕೋಣೆ, ಅದೇ ಖುರ್ಚಿ, ಅದೇ ಅಕ್ಕ. ಅಂದು ನಿಮ್ಮಿಬ್ಬರ ವರ್ತನೆ ನೋಡಿ ಜಗತ್ತೂ ನಾಚಬೇಕು. ಅದೆಲ್ಲ ನನಗೆ ಗೊತ್ತಿತ್ತಾದರೂ ನಿಮ್ಮ ಪ್ರಣಯಕೇಳಿಗೆ ಭಂಗತರಬಾರದೆಂತಲೂ, ಇನ್ನಾದೂ ಅದನ್ನು ನೋಡದಿರುವಂತೆಯೂ ನಾನು ಕೆಲಸ ಮಾಡುತ್ತಿದ್ದೆ. ನಾನು ಮಾಡುವ ಕೆಲಸ ನಿಮ್ಮ ಪಾಲಿಗೆ ದೊಡ್ಡದೇ. ನೀನು ರೂಮು ಬಿಡು ವಾಗ ನನ್ನ ತಲೆ ನೇವರಿಸಿ, 'ಕಳ್ಳಿ' ಎಂದು ಬೆನ್ನು ತಟ್ಟಿ ನೀನು ಮಾಯ ವಾದರೆ ಅದೇ ನನಗೆ ಪರಮ ಸ್ವರ್ಗ.

" ನಾನು ಹೊರಗಡೆ ಕುಳಿತಾಗ ಅಕ್ಕನಿಗೆ ನೀನೊಂದು ಮಾತು ಹೇಳಿದಿ. ಅದರ ಬೆಲೆ ನೀನೇ ಅರಿತುಕೊ."

" ಲಕ್ಷ್ಮಿ, ನಿನ್ನನ್ನು ನೋಡದೇ ಬಹಳ ವರುಷವಾಯಿತಲ್ಲ?"

ಅಕ್ಕ ಮಾತಾಡಿದ್ದು ಕೇಳಿಸಲಿಲ್ಲ. ನೀವೇನು ಮಾಡುತ್ತೀರಿ ಎಂದು ನನಗೂ ನೋಡಲು ಆಸೆಯಿಲ್ಲವೆ? ಕಿಟಕಿಯ ಸಂದಿಯಲ್ಲಿಯ ಮೂಲಕ ನಾನು ನೋಡ ತೊಡಗಿದೆ.

"ಲಕ್ಷ್ಮಿ, ಈ ಸೀರೆ ನಿನಗೆಷ್ಟು ಒಪ್ಪುತ್ತಿದೆ." ಎಂದು ಸೆರಗನ್ನು ನೋಡುತ್ತ, ಅವಳೆದೆಯ ಮೇಲಿನ ಸೆರಗನ್ನು ತೆಗೆಯಲು ಯತ್ನಿಸಿದಿ. ಅಕ್ಕ ನಿನ್ನನ್ನಪ್ಪಿ ನಿನ್ನೆದೆಯಲ್ಲಿ ತನ್ನ ತಲೆಯನ್ನು ಹುದುಗಿಸಿಕೊಂಡು ಬಿಟ್ಟಳು. ಅವಳ ತಲೆ ತಟ್ಟಿ ನೀನೆಂದಿ :

" ಲಚ್ಚಿ, ನೀನು ಬಲು ಜಾಣೆ."

ಅವಳು ತಲೆಯೆತ್ತಿ ನನ್ನನ್ನು ನೋಡಿದಳು. ಅವಳ ಎರಡೂ ಕೆನ್ನೆಗಳನ್ನು ಹಿಡಿದು ನೀನೆತ್ತಿದಾಗ, ಅಯ್ಯೋ! ನೋಯುತ್ತಿವೆ ಎಂದಳು.

" ನೀನು ನನ್ನ ತೊಡೆಗಳ ಮೇಲೆ ಕುಳಿತಿರುವೆಯಲ್ಲ!"

" ಕುಳ್ಳಿರಿಸಿಕೊಂಡವರು ನೀವೆ." ಎನ್ನುವಂತೆ ಅವಳು ನೋಡಿದಳು.

" ನನಗೆ ತೊಡೆ ನೋಯುವದಿಲ್ಲವೆ?"

ಅವಳು ಏಳಲು ಯತ್ನಿಸಿದಳು. ನೀನು ಏಳಲು ಕೊಡಲಿಲ್ಲ. " ಲಚ್ಚಿ, ಇವತ್ತೊಂದು ಮಾತು ಹೇಳುತ್ತೇನೆ. ನೀನು ಒಪ್ಪುತ್ತೀಯಾ?"

ಅಕ್ಕ ಆಶ್ಚರ್ಯದೊಡನೆ ನನ್ನನ್ನು ನೋಡುತ್ತಿದ್ದಳು.

" ಈದಿನ ರಾತ್ರಿ ತಿರುಗಾಡಲು ಹೋಗೋಣವೇ?"

ಅಕ್ಕ, ಸರಿಯಾಗಿ ಕುಳಿತುಕೊಂಡು ' ಎಲ್ಲಿಗೆ?' ಎಂದು ಕೇಳಿದಳು.

" ನಿನಗೆಲ್ಲಿ ಹೋಗಲು ಮನಸ್ಸಿದೆ?"

" ನೀವು ಹೇಳಿದಲ್ಲಿ."

" ಸಮುದ್ರ ದಂಡೆಗೆ ಹೋಗೋಣವೆ?"

" ಅಷ್ಟು ದೂರ?"

" ಏನು ಹೆದರಿಕೆಯಾಗುತ್ತಿದೆಯೆ?"

ಅಕ್ಕ ತಲೆದೂಗಿದಳು.

" ನಿನ್ನ ಜೊತೆ ನಾನಿರುವದಿಲ್ಲವೆ?"

" ಒಮ್ಮೆ ಯಾರಾದರೂ ನೋಡಿದರೆ?"

" ರಾತ್ರಿ ಯಾರು ನಮ್ಮನ್ನು ಗುರುತಿಸುತ್ತಾರೆ?"

" ಒಮ್ಮೆ ಮನೆಯಲ್ಲಿ ಗೊತ್ತಾದರೆ?"

" ಅವರಿಗೆ ಗೊತ್ತಾಗದಂತೆ ಹೋದರಾಯಿತು."

" ಮೆಲ್ಲನೆ ನನ್ನ ಹೆಸರನ್ನು ಹೇಳಿ, " ತಂಗಿಗೆ ಗೊತ್ತಾದರೆ?" ಎಂದು ಲಚ್ಚಿ ಎಂದಳು.

" ಅವಳದೂ ಭಯವೆ? ಅವಳಿಗೆ ಹೇಳಿಯೆ ಹೋಗೋಣ."

ಅಕ್ಕ ತಲೆದೂಗುತ್ತ ' ಹೂಂ' ಎಂದಳು. ನೀನೂ ನಿಜವೆಂದು ಒಪ್ಪಿದೆ. ಮತ್ತೂ ನಿನ್ನ ನಿಶ್ಚಯ ಬಲಪಡಿಸುವದಕ್ಕೆ ಆದೀತಲ್ಲವೆ ಎಂದು ಅವಳ ತಲೆ

ಯಲ್ಲಾಡಿಸಿ ಕೇಳಿದೆ. ಅಕ್ಕ ನಗುತ್ತಲೇ "ನಾನು ಬರುವದಿಲ್ಲ. ಒಮ್ಮೆ ಗೊತ್ತಾದರೆ ನನ್ನ ಫಜೀತಿಯಾದೀತು" ಎಂದಳು. ಎಷ್ಟೆಂದರೂ ಗಂಡಸು, ಹಟ ಮಾಡಿಯಾದರೂ ಹೆಣ್ಣನ್ನು ಒಪ್ಪಿಸುವ ತಲೆ ಅವಕ್ಕಿರುತ್ತದೆ. ಇನ್ನೂ ಏನೇನೋ ಅಕ್ಕನ ಜೊತೆ ಹೇಳಿದೆ. ನನಗದು ಸರಿಯಾಗಿ ಕೇಳಲಿಲ್ಲ. ಮುಂದೆ ಮುತ್ತಿನ ಆಯಾತ-ನಿರ್ಯಾತವಾದ ಮೇಲೆ ಮತ್ತೊಮ್ಮೆ ದೀರ್ಘವಾಗಿ ಅಕ್ಕನ ಮೋರೆ ನೋಡಿ ಅಲ್ಲಿಂದ ಹೊರಟೆ. ನಾನು ಹೀರೆಕಡೆಯಿಂದ ಬಂದವಳಂತೆ ನಟಿಸಿ, 'ಅರೇ, ಇನ್ನೂ ಹೋಗಲಿಲ್ಲವೆ?' ಎಂದೆ. ನೀನು ಈಗಲೇ ಇವಳು ಬಂದಳು ಎಂದು ತಿಳಿದುಕೊಂಡಿ, 'ಹೌದು' ಎನ್ನುವಂತೆ ನನ್ನ ತಲೆ ತಟ್ಟಿ ಹೊರಟುಹೋದಿ.

"ಆಗ ನನಗೆ ನಿಜಕ್ಕೂ ಗೊತ್ತಾಯಿತು. ನೀನು ಅಕ್ಕ ರಾತ್ರಿ ಎಲ್ಲಿಯೋ ಸುತ್ತಾಡಿಕೊಂಡು ಬರಲು ಹೋಗುತ್ತೀರಿ ಎಂದು. ಅಕ್ಕನನ್ನು ಕೇಳೋಣವೇ! ಎನ್ನಿಸಿತು ಒಮ್ಮೆ. ನನಗೆ ವಿಷಯ ತಿಳಿದಿದೆ ಎಂದು ಅಕ್ಕನಿಗೆ ಗೊತ್ತಾದರೆ ಬೇಸರವಾದೀತು ಎಂದು ಭಾವಿಸಿ, ನೇರವಾಗಿ ಅಕ್ಕನಿದ್ದಲ್ಲಿಗೆ ಹೋದೆ. ಅವಳು ಆಲೋಚನೆಯಲ್ಲಿಯೇ ಇದ್ದಳು. ಅವಳನ್ನು ನೋಡಿದಾಗ, ಅವಳು ಹುಸಿ ನಕ್ಕಳು. ಅವಳ ಹಣೆಯಲ್ಲಿ ತಿಲಕವಿರಲಿಲ್ಲ. ಅದೇ ತಿಲಕ ನಿನ್ನ ಹಣೆಗೆ ಅಂಟಿದ್ದನ್ನು ನಾನು ನೋಡಿದ್ದೆ. ಅವಳೇನು ಹೇಳುತ್ತಾಳೆ ಎಂದು ತಿಳಿಯಬೇಕೆಂತಲೇ 'ಅಕ್ಕ, ನಿನ್ನ ಹಣೆಯ ತಿಲಕವೆಲ್ಲಿ ಹೋಯಿತು?' ಎಂದು ಕೇಳಿದ್ದಕ್ಕೆ, ಒಮ್ಮೆಲೆ ಅಪ್ರತಿಭಳಾದರೂ ಅದನ್ನು ಕಾಣಿಸಿಕೊಳ್ಳದೆ 'ಎಲ್ಲೋ ಬೆವರಿಗೆ ಬಿದ್ದುಹೋಗಿದೆಯೇನೋ!' ಎಂದಳು. ಅವರ ಗುಟ್ಟು ನನಗೆ ಹೇಳಬೇಕೆ? 'ದಾಮಣ್ಣನ ಹಣೆಗೆ ಅಂಟಿದೆಯಲ್ಲ?' ಎಂದೆ. 'ಹೋಗ, ಅದು ಹೇಗೆ ಅಲ್ಲಿ ಅಂಟುತ್ತದೆಯೋ? ನೀನು ನೋಡಿದ್ದೀಯಾ?' ಎಂದಳು. 'ಹೌದು' ಎಂದ ಮಾತಾದರೆ ಕನ್ನಡಿಯ ಮುಂದೆ ಹೋಗಿ ಹೊಸ ತಿಲಕ ಇಟ್ಟುಕೊಂಡಳು. ಆದರೂ ಅದು ನನಗೇನೂ ಗೊತ್ತಾಗಿದೆಯೆಂದು ಮನಸ್ಸಿನಲ್ಲೇ ಅಂದುಕೊಂಡಿರಬೇಕು.

"ಅಂದಿನ ನೀನು ಅಕ್ಕನಿಂದ ಪಡೆದುಕೊಂಡ ಮಾತುಗಳು ನಿನಗೆ ನೆನಪಿದೆಯೋ ನನಗೆ ಜ್ಞಾಪಕವಾಗುತ್ತಿತ್ತು. ಅಂದು ಕೃಷ್ಣ ಪಕ್ಷದ ಸಪ್ತಮಿಯ ದಿನವಾದುದರಿಂದ, ಆ ರಾತ್ರಿ ಕಗ್ಗತ್ತಲೆ ಸುತ್ತಲೂ ಕವಿದಿದ್ದಾಗ ಅದರಿಂದ,

ನಭೋಮಂಡಲವನ್ನೆಲ್ಲ ತಾನು ಆಳುವ ಅಧಿಕಾರಿಯಂತೆ ಮೆರೆಯುತ್ತಿತ್ತು. ದಿನ ಬರುವ ಹಾಗೆ ಸುಮಾರು ಒಂಬತ್ತು ಗಂಟೆಗೆ ನೀನು ಬಂದಿ. ಅಕ್ಕ ನನಗೆ ಹಾಸಿಗೆ ಹಾಕಿಕೊಂಡು ಮಲಗಲು ಹೇಳಿದಳು. ನಿಮ್ಮ ಗುಟ್ಟು ಗೊತ್ತಾದುದ ರಿಂದ ನಾನು ಮಲಗಲೇ ಇಲ್ಲ. ನೀನು ಬರುವಾಗ ಕೈಚೀಲದಲ್ಲೇನೋ ತಂದಿದ್ದಿ. ಅದೇನೆಂದು ತಿಳಿದುಕೊಳ್ಳುವ ಕುತೂಹಲ ನನಗಿತ್ತು. ನಾನು ಸುಮ್ಮನೆ ನಿದ್ರೆ ಬಂದವಳಂತೆ ಮಲಗಿಕೊಂಡಿದ್ದೆ. ನೀನು ಬಂದವನೇ 'ಗೌರಾ ಎಲ್ಲಿ ?' ಎಂದು ಅಕ್ಕನನ್ನು ಕೇಳಿದಾಗ ಅವಳು ತನ್ನ ಕೈಯಿಂದ ನಿನ್ನ ಬಾಯನ್ನು ಮುಚ್ಚಿ, ಸುಮ್ಮನಿರುವಂತೆ ಸೂಚಿಸಿದಳು. 'ಮಾತಾಡಬೇಡಿ, ಈಗಲೇ ಕಣ್ಣು ಬಾಡಿ ನಿದ್ದೆ ಹತ್ತಿರಬೇಕು. ಮತ್ತೆ ಮಾತಾಡಿದರೆ ಅವಳಿಗೆ ಎಚ್ಚರಾದೀತು.' ನಂತರ ಗುಜುಗುಜು ಸಪ್ಪಳವಷ್ಟೇ ಕೇಳಿಸಿತು. ಅಕ್ಕ ನಿನ್ನ ಕೈಗಡಿಯಾರವನ್ನು ನೋಡಿ, 'ಹತ್ತೂವರೆಯಾಯಿತು ಅಲ್ಲವೆ ?' ಎಂದಳು. ನೀನು ಹೊರಡೋಣವೇ ? ಎಂದುದಕ್ಕೆ ತಲೆದೂಗಿ 'ಇವೇ ಸೀರೆಯಾಗಬಹು ದಲ್ಲ ?' ಎಂದಳು. ಅದಕ್ಕೆ ನೀನು ಮಾತನಾಡದೆ ನಿನ್ನ ಕೈಚೀಲದಲ್ಲಿಯ ಹಳದಿ ಬಣ್ಣದ ಪೇಂಟನ್ನೂ ಬಿಳಿಯ ಬಣ್ಣದ ಶರ್ಟನ್ನೂ ತೆಗೆದಿ. ಅಕ್ಕ 'ಅದು ಯಾರಿಗೆ ?' ಎಂದು ಕೇಳಿದಳು.

'ನಿನಗೆ !'

'ನನಗ್ಯಾಕೆ ?'

'ನೀನೀಗ ಸೀರೆಯುಟ್ಟುಕೊಂಡು ಬರುವದಲ್ಲ, ಇದನ್ನು ತೊಟ್ಟುಕೊಂಡು.'

'ಅಯ್ಯೋ ! ಅದನ್ನು ಹಾಕಿಕೊಳ್ಳುವದೆ ?'

'ಹೌದು, ನನ್ನ ಸಲುವಾಗಿ.'

'ನಿಮ್ಮ ಸಲುವಾಗಿಯಂತ, ಮೀಸೆಯನ್ನು ಕಟ್ಟಿಕೊಳ್ಳಬೇಕೋ ?'

'ಹೌದು.'

'ಪೇಂಟನ್ನು ತೊಡುವದಾದರೆ ನಾನು ಬರುವದಿಲ್ಲ.'

'ನೀನು ಮಾತು ಕೊಟ್ಟದ್ದು ಇದೆಯಲ್ಲ.'

'ಇದೆ. ಆದರೆ ಇದನ್ನು ತೊಟ್ಟುಕೊಳ್ಳುವದು ಎಂತಹ ನಾಚಿಕೆ ಗೇಡು !'

'ಆದರೆ ಆಗಲಿ.'

‘ ಒಮ್ಮೆ ಯಾರಾದರೂ ನನ್ನನ್ನು ಗುರುತಿಸಿದರೆ ? ’

‘ ಏನೇ ಆದರೂ ನಾನು ನೋಡಿಕೊಳ್ಳುವೆ. ’

‘ ನನ್ನ ಹತ್ತರ ತೊಡಲು ಸಾಧ್ಯವಿಲ್ಲ. ’

‘ ನಾನು ತೊಡಿಸುತ್ತೇನೆ. ’

‘ ಇವೊತ್ತು ಇವನ್ನು ತೊಡಿಸಿರಿ. ನಾಳೆ ಸೀರೆ ಉಡಿಸುತ್ತೇನೆಂದು ಹೇಳಿರಿ.

‘ ಇರಲೆ? ’ ಎಂದು ಅವಳ ಕೆನ್ನೆ ತಟ್ಟಿ ಶರ್ಟು ತೊಡಲು ಆಕೆಗೆ ನೀನು ಹೇಳಿದಿ. ’

“ ಗಂಡಸರು ಏನಾದರೂ ಮಾಡಿಯಾರು ಎಂದುಕೊಂಡೆ ನಾನು. ಅಕ್ಕ ತೊಡುವದಿಲ್ಲವೆಂದರೆ ಕೇಳಬೇಕಲ್ಲ. ಒಮ್ಮೆ ಸಾಧ್ಯವಿಲ್ಲ ಎಂದು ಮಾತು ಮುರಿದರೆ ಕಣ್ಣು ಕೆಂಪಗೆ ಮಾಡುತ್ತೀಯೆ. ನಂತರ ನೀನು ಅಕ್ಕನೊಡನೆ ಮಾತಾಡಲು ಬರುವದಿಲ್ಲ. ಈ ಕಷ್ಟ ಯಾರಿಗೆ ಬೇಕು ? ಇದು ಅಕ್ಕನಿಗೆ ಗೊತ್ತಿಲ್ಲವೆಂದೇ ? ಗೊತ್ತಿತ್ತು. ನನಗೂ ಗೊತ್ತಿತ್ತು. ಆದರೆ ಮಾಡುವ ದೇನು ? ಹೆಣ್ಣು ಗಂಡನ್ನವಲಂಬಿಸಿಯೆ ಬಾಳಬೇಕು ಎಂಬ ಕಾನೂನಿದೆ ಯಲ್ಲವೆ ? ಅಕ್ಕ ಹೇಗೋ ಶರ್ಟು ತೊಟ್ಟಳು. ಪೇಂಟನ್ನು ಹಾಕಿಕೊಂಡಳು. ನಾನಾಗಿದ್ದರೆ ಎಂದೂ ಒಪ್ಪುತ್ತಿರಲಿಲ್ಲ. ನನ್ನ ಹತ್ತರ ಸಾಧ್ಯವೂ ಇರಲಿಲ್ಲ ವಾಗಿತ್ತು. ಉದ್ದವಾದ ಪೇಂಟಿನ ತಳಭಾಗವನ್ನು ನೀನೇ ಮಡಿಚಿ, ಸರಿಯಾದ ಮೇಲೆ ಅಕ್ಕನನ್ನು ಆಪಾದಮಸ್ತಕ ನೋಡಿದಿ. ಅಕ್ಕ ನಾಚಿ ನೀನು ತನ್ನನ್ನು ನೋಡಕೂಡದೆಂದು ನಿನ್ನನ್ನು ತಬ್ಬಿಕೊಂಡುಬಿಟ್ಟಳು. ಹುಚ್ಚಿ ಏನಾಗುತ್ತಿ ದೆಂಪೇ ಎಂತ ಸಮಾಧಾನ ನಿನ್ನದು. ಅಲ್ಲಿಯತನಕ ನಿಮಗೆ ನನ್ನ ನೆನಪೇ ಇಲ್ಲ. ಆಗ ಅದಾಾವದೋ ಗಡಿಯಾರ ಹನ್ನೊಂದು ಬಡಿದುದು ಕೇಳಿಸಿತು.

ನೀನು ‘ ಹೋಗೋಣವೇ ? ’ ಎಂದು ಕೇಳಿದಾಗ, ಅವಳು ನಿಂತಳು. ನನ್ನ ಹತ್ತಿರ ಬಂದು ನೋಡಿ,

“ ನಿದ್ದೆ ಬಿದ್ದಿದೆಯೆಂತ ಕಾಣುತ್ತದೆ ” ಎಂದಳು.

“ ಹೊರಡೋಣವೆ ? ”

“ ನನಗೆ ಹೆದರಿಕೆಯಾಗುತ್ತದೆ. ”

“ ಯಾಕೆ ? ”

" ಕೆಳಗಡೆ ಯಾರಿಗಾದರೂ ಎಚ್ಚರವಿದ್ದರೆ ? "

" ನೀನು ಜೋಲುತ್ತಿರುವ ಅಕ್ಕನ ಎರಡು ಜಡೆಯನ್ನು ಶರ್ಟಿನ ಒಳಗಡೆ ತಗುಲಿಸಿ " ಈಗ ನೀನು ಹುಡುಗನಂತೆ ಕಾಣುವಿ " ಎಂದೆ.

" ನೀವು ಹುಡುಗಿಯಂತೆ ಕಾಣುವಿರಿ. "

" ಲೈಟ ಸಣ್ಣ ಮಾಡು ಲಚ್ಚಿ. "

ಅಂತೆಯೇ ಮಾಡಿದಳು. ಅಕ್ಕನನ್ನು ಹೋಗೋಣವೇ ಎಂದು ಕೈ ಜಗ್ಗಿದಿ. ಬಾಗಿಲು ತೆರೆದ ಸಪ್ಪಳಕ್ಕೆ ನಮ್ಮನೆಯ ನಾಯಿ ಕೆಳಗಿನಿಂದಲೇ ಕೂಗಿತು. ಅಕ್ಕ ಬೆಚ್ಚಿ ನಿನ್ನನ್ನು ಹಿಡಿದುಕೊಂಡಳು. ನಾಯಿ ಮಾಳಿಗೆಯ ಮೇಲಿನ ಸದ್ದೆಂದು ತಿಳಿದು ಸುಮ್ಮನಾಯಿತು. ನೀನು ಹೊರಡಲು ಮುಂದೆ ತಳ್ಳಿದರೂ ಅಕ್ಕ ಕದಲಲಿಲ್ಲ.

' ನನಗೆ ಹೆದರಿಕೆ. '

' ಯಾಕೆ ? '

' ಕತ್ತಲೆ. '

' ಈಗ ತಾನೇ ಚಂದ್ರೋದಯವಾಯಿತು. ಎಲ್ಲಿಡೆಯಲ್ಲಿಯೂ ಬೆಳಕು ಹರಿದಿದೆ. '

' ನನಗೇಕೋ ಹೆದರಿಕೆಯಾಗುತ್ತಿದೆ. ನಿಮ್ಮ ದಮ್ಮಯ್ಯ. ಹೋಗುವುದೇ ಬೇಡ. ಇಲ್ಲೇ ಮಲಗೋಣ. '

' ಹೆದರಿಕೆ ಹಿಡಿದರೆ ಎಲ್ಲವೂ ಭಯವೆ. ಬಿಟ್ಟರೆ ಏನೂ ಇಲ್ಲ. ನಿರ್ಭಯ. '

' ನಾನು ನೋಡಿಕೊಳ್ಳುವೆ. '

" ಅಕ್ಕ ಮೆಟ್ಟಿಲ ಮೇಲೆ ಕಾಲಿಟ್ಟವಳು ಹಿಂತೆಗೆದು ಮತ್ತೊಮ್ಮೆ ಭಯ ವೆನ್ನುವಂತೆ ಸೂಕ್ಷ್ಮವಾಗಿ ನಿನ್ನನ್ನು ನೋಡಿದಳು. ಅಡಿಗೆ ಮಾಡಿ ಊಟಕ್ಕೆ ಬಡಿಸಿಕೊಂಡು ಉಣಲೋ ಬೇಡವೋ ಎಂದು ಯೋಚಿಸುತ್ತ ಕೂಡ್ರುತ್ತಾ ರೆಯೇ ? ಕಪ್ಪು ಅಡವಿ ಸೇರಿ ಮುಂಜಾನೆ ಮನೆಗೆ ಬರುವಾಗ್ಗೆ ತಾನು ಕಪ್ಪ ನೆಂದು ಯಾರಾದರೂ ಕರೆಯುವರೆಂಬ ಬಗ್ಗೆ ಯೋಚಿಸುತ್ತಾರೆಯೇ ?

" ನೀನು ಬಾಗಿಲು ಓರೆ ಮಾಡಿ, ಅಕ್ಕನ ಎರಡೂ ಭುಜ ಹಿಡಿದುಕೊಂಡು, ಮೆಟ್ಟಿಲು ಇಳಿಸಿಕೊಳ್ಳುತ್ತ ಕರೆದುಕೊಂಡು ಹೋದಿ. ನೀವು ಹೊರಟು ಹೋದ

ನಂತರ ನನಗೆ ಯೋಚನೆಗೆ ಮೊದಲಾಯಿತು. ಅಷ್ಟೇ ಅಲ್ಲ, ಹೆದರಿಕೆಯೂ ಆಗತೊಡಗಿತು. ನಾನೊಬ್ಬಳೇ ಈ ರಾತ್ರಿಯೆಲ್ಲ ಕಳೆಯುವದು ಸಾಧ್ಯವೇ ಎಂದು ಬಾಗಿಲಿಗೆ ಅಗುಳಿಯಿಟ್ಟು ಮತ್ತೆ ಹಾಸಿಗೆಯ ಮೇಲುರುಳಿ ಯೋಚಿಸ ತೊಡಗಿದೆ. ನನಗೆ ನೀವೆಲ್ಲಿ ಹೊರಟು ಹೋದಿರಿ ಎಂಬುದೊಂದೇ ಯೋಚನೆ.

"ಅಕ್ಕಾ, ನೀನು ಹೇಳಬಲ್ಲೆಯಾ, ಸಾಮಾನ್ಯ ಒಬ್ಬ ಹೆಣ್ಣು ಅಂತಹ ಕಗ್ಗತ್ತಲೆ ರಾತ್ರಿಯಲ್ಲಿ ತಿರುಗಾಡಲೆಂದೇ ಆಗಲಿ, ಅಥವಾ ಬೇರೆ ಉದ್ದೇಶ ದಿಂದಾಗಲಿ ಗಂಡಿನಂತೆ ಬಟ್ಟೆ ತೊಟ್ಟು, ಗಂಡಿನ ಜೊತೆಗೆ ಹೊರಡಲು ಸಾಧ್ಯವೆ? ನಿಮ್ಮ ಭಾಷೆಯಲ್ಲಿ ನೀವು ಹೇಳಬಹುದು. 'ಹೆಣ್ಣು ಗಂಡನ್ನು ತನ್ನೆಡೆಗೆ ಸೆಳೆದುಕೊಳ್ಳಲು, ತನ್ನವನನ್ನಾಗಿ ಮಾಡಿಕೊಳ್ಳಲು ಮೊದಲು ಒಪ್ಪದಿದ್ದರೂ ಕೊನೆಗೆ ಒಪ್ಪುತ್ತಾಳೆ' ಎಂದು. ನಿಮಗೇನೂ ಇಲ್ಲ. ಯಾರಾದರೂ ಛೀ, ಥೂ ಎಂದರೆ ಎಲ್ಲಿಯಾದರೂ ಓಡಿಬಿಟ್ಟೀರಿ. ಹೆಣ್ಣಿಗೆ ಹಾಗೆ ಸಾಧ್ಯವೆ? ಅವಳು ನಂಬುವದೇ ಒಬ್ಬನನ್ನು. ಅವನು ಕೈಬಿಟ್ಟರೆ ಅವಳ ಆಯುಷ್ಯವೇ ಮುಗಿಯಿತಲ್ಲಿಗೆ. ಮನೆಯವರಿಗೆ ಗೊತ್ತಾದರೆ ತಮ್ಮ ಮನೆಯ, ಮಗಳ ಮಾನ ಕಾಯುವದಕ್ಕಾಗಿ ಯಾವದೋ ಒಂದು ಆ ಒಲ್ಲದ ಗಂಡನನ್ನು ತಂದು ಮದುವೆ ಮಾಡಿಸಿ ಬಿಡುತ್ತಾರೆ. ಆ ಮೇಲೆ ಅಲ್ಲಿಂದ ಪ್ರಾರಂಭ, ಆ ಹೆಣ್ಣಿನ ದುಃಖ ಮಹಾ ಭೀಕರ ನಾಟಕ. ಆ ಮೇಲೆ ಮದುವೆಯಾದ ಗಂಡಿಗೆ ಇವಳ ಮೊದಲಿನ ಪ್ರೇಮಪ್ರಕರಣ ಗೊತ್ತಾದರೆ ಅಲ್ಲಿಗೆ ಮುಗಿಯಿತು ಅವಳ ಕತೆ. ಇತ್ತ ಕೊಟ್ಟಿದ್ದೂ ಇಲ್ಲ, ಬಿಟ್ಟಿದ್ದೂ ಇಲ್ಲ. ಹೀಗಾಗುವದು ಇಂಥ ಲಲನೆಯರ ಬಾಳು.

"ರವಿಯಣ್ಣಾ, ನನ್ನದು ಆಗ ಅಪಕ್ವದ ತಿಳುವಳಿಕೆಯಾದರೂ, ಇನ್ನೂ ಎಷ್ಟೋ ವಿಷಯಗಳು ಗೂಢ ಮಾಯವಾಗಿದ್ದವು. ನಿನಗದನ್ನು ತಿಳಿಯಲು ಸಾಧ್ಯವಿಲ್ಲ. ನಿನಗದು ತಿಳಿಯುವ ಅವಶ್ಯಕತೆಯೂ ಇಲ್ಲ.

"ನೀವು ತಿರುಗಿ ಬರುವಾಗ್ಗೆ ಸುಮಾರು ನಾಲ್ಕು ಗಂಟೆಯಾಗಿರಬಹುದು. ನನಗೆ ನಿದ್ದೆಯೇ ಬಂದಿರಲಿಲ್ಲ. ನೀವು ಮೆಟ್ಟಿಲೇರುವ ಸದ್ದು ಕೇಳಿ, ಬಾಗಿಲಿನ ಅಗುಳಿ ತೆಗೆದು ನಾನು ಮತ್ತೆ ಸುಮ್ಮನೆ ಮಲಗಿಕೊಂಡು ಬಿಟ್ಟೆ. ನೀವಿಬ್ಬರೂ ಬಂದು, ನನಗೇನೂ ಗೊತ್ತಾಗಲಿಲ್ಲವೆಂದು ತಿಳಿದುಕೊಂಡಿರಿ. ಅಕ್ಕ ತನ್ನ ಬಟ್ಟೆ ಬದಲಿಸಿ ಸೀರೆ ಉಟ್ಟುಕೊಂಡಳು. ಬೇರೆ ಹಾಸಿಗೆಯಿರಲಿಲ್ಲವಾದ್ದರಿಂದ ಅಕ್ಕನ

ಹಾಸಿಗೆಯಲ್ಲಿಯೇ ದೀಪವಾರಿಸಿ ನೀನು ಮಲಗಿಕೊಂಡಿ. ಬೆಳಗಾಗುವ ತನಕವೂ ನನಗೆ ನಿದ್ದೆಯೇ ಬರಲಿಲ್ಲ. ನಿಮ್ಮಿಬ್ಬರಿಗೂ ಚೆನ್ನಾಗಿಯೇ ನಿದ್ದೆ ಬಂದಿತ್ತು. ಯಾರಿಗಾದರೂ ಗೊತ್ತಾದರೆ ತೊಂದರೆಯಾದೀತು, ಎಂದು ತಿಳಿದುಕೊಂಡು, ಚೆನ್ನಾಗಿ ಬೆಳಕು ಹರಿಯಲು ಅಕ್ಕನನ್ನು ನಾನೇ ಎಬ್ಬಿಸಿದೆ. ಅಕ್ಕ ಗಡಬಡಿಸಿ ಎದ್ದು, ತುಟಿ ಕಚ್ಚಿ ಯಾರಿಗೂ ಹೇಳಬೇಡವೆಂದು ನನಗೆ ಹೇಳಿ, ನಿನಗೆ ಚಳಿಯಾಗದ ಹಾಗೆ ದುಪ್ಪಟಿ ಹೊದಿಸಿದ್ದಳು.

"ರವಿಯಣ್ಣ! ಹೀಗಿದ್ದಿರಬಹುದೆಂದು ನಿನಗೆ ಕಲ್ಪನೆಯಾದರೂ ಇತ್ತೇ? ಅಕ್ಕ ನಿನ್ನ ಹತ್ತಿರ ಹೇಳಲಿಲ್ಲವೆಂದು ನೀನು ಆಕ್ಷೇಪವೆತ್ತಬಹುದು. ಅಂತಹ ಮಹತ್ವದ ವಿಷಯವಲ್ಲೆಂದು ಅಕ್ಕ ನಿನ್ನೊಡನೆ ಹೇಳಿರಲಿಕ್ಕಿಲ್ಲ. ಈ ರೀತಿ ಒಳಿತಲ್ಲವಾಗಿತ್ತು. ಪ್ರಕೃತಿವಿರುದ್ಧವಾದ ಪ್ರತಿಕ್ರಿಯೆಯಿದು. ಎಲ್ಲರೂ ಹೀಗೆಯೇ ಮಾಡುತ್ತಾರೆಯೇ? ಹೇಳಿ ಕೇಳಿದ ಹೆಣ್ಣನ್ನು ನೋಡಿ ನಿಶ್ಚಯಿಸಿ ಲಗ್ನವಾಗುತ್ತಾರೆ. ಇದು ಸಭ್ಯತೆಯ ರೀತಿ. ಇದಕ್ಕೆ ವ್ಯತಿರಿಕ್ತವಾಗಿ, ನಿಮ್ಮಿಬ್ಬರ ಸಂಬಂಧ ಯಾರಿಗೂ, ಅದೇಕೆ, ನಿಮಗೂ ಅರಿವಾಗದಷ್ಟು ಬೃಹದಾಕಾರವಾಗಿ, ಬೆಳೆದಿತ್ತು. ನೀವಿಬ್ಬರೂ ಕೂಡಿ ನಲಿದು, ಎಲ್ಲ ಸುಖ-ಸೌಖ್ಯಗಳನ್ನನುಭೋಗಿಸಿ, ನಿಮ್ಮಿಬ್ಬರ ಅರಕ್ತಸಂಬಂಧಕ್ಕೆ ಸಾಕ್ಷಿಯಾಗಿ, ಮುಂದಿನ ನೆಚ್ಚಿನ ಬಾಳನ್ನು ಕೂಡಿನಾಗಿಸುವದಕ್ಕೆ ಪಣ ತೊಟ್ಟಿದ್ದಿರಿ. ಇದಲ್ಲದೆ ಇನ್ನೂ ಎಷ್ಟೋ ಗೌಪ್ಯ ಸಂಗತಿಗಳಿದ್ದರೂ ಅವೆಲ್ಲವುಗಳೂ ನಿನಗೆ ಚಿರಪರಿಚಿತವೇ ಆದ್ದರಿಂದ ನಾನು ಬೇರೆ ಹೇಳಬೇಕಾಗಿಲ್ಲ.

"ನಿಜ ಹೇಳಲೇ ರವಿಯಣ್ಣ! ಅಕ್ಕ ನನ್ನನ್ನು ಕಳಿಸಲಿಲ್ಲ. ನಾನೇ ಅವಳನ್ನು ನಿನ್ನ ವಿಷಯವಾಗಿ ಕೇಳಿದ್ದಕ್ಕೆ ಅವಳೇನೂ ಉತ್ತರಿಸಲಿಲ್ಲ. ನಿನ್ನ ಬಗ್ಗೆ ಕೇಳಿದಾಗಲೆಲ್ಲ ಅವಳು ಗಂಭೀರವಾಗುತ್ತಿದ್ದಳು. ಜೊತೆಗೇನೇ ಕಣ್ಣೀರು ಹಣಿಕಿಕ್ಕುತ್ತಿತ್ತು. ಆದರೂ ಅವಳ ಬಾಯಿಂದ ಒಂದಕ್ಷರವನ್ನೂ ಹೊರಡಿಸುವದಾಗಲಿಲ್ಲ. ಅವಳ ನಿರ್ಧಾರವೇನೆಂಬುದೂ ಗೊತ್ತಾಗಲಿಲ್ಲ. ಅವಳ ಮನಸ್ಸು ಪ್ರಾಪಂಚಿಕ ವಿಷಯಗಳ ಬಗ್ಗೆ ಕಟುವಾಗಿ ಹೋಗಿದೆ. ಅವಳ ಹೃದಯದ ಒರತೆ ಬತ್ತಿಹೋಗಿದೆ. ಅವಳು ಬದುಕಿದ್ದಾಳೆ ಎನ್ನುವ ಬಗ್ಗೆ ಅವಳ ಎರಡು ಕಣ್ಣುಗಳೇ ಸಾಕ್ಷಿ. ಎದೆ ಬಿಚ್ಚಿ ಹೋಗಿದೆ; ಶರೀರ ಬಡಕಲಾಗಿದೆ; ಮಿನುಗುವ ಮೋರೆ ಒಣಗಿದೆ, ಇಂತಹ ಪರಿಸ್ಥಿತಿಯಲ್ಲಿ ನೀನು ಅವಳನ್ನೊಮ್ಮೆ

ನೋಡಿದವರೆ ಅಯ್ಯೋ! ಇವಳು ಲಕ್ಷ್ಮಿಯೇ ಎಂದುಕೊಳ್ಳದಿರುತ್ತಿರಲಿಲ್ಲ. ಬೇರೆ ಯವರು ಈಗ ಹಾಗೆಯೇ ಹೇಳುವವರಾಗಿದ್ದಾರೆ. ಇದಕ್ಕೆಲ್ಲ ನಾವು ಯಾರ ಮೇಲೂ ಆರೋಪ ಹೊರಿಸಿ ಪ್ರಯೋಜನವಿಲ್ಲ; ಇದೆಲ್ಲ ಹಣೆಯಬರಹ.

“ಕೊನೆಯದಾಗಿ, ಅಕ್ಕನಿಗೆ ನಾನೇನು ಹೇಳಲಿ? ಅಷ್ಟೊಂದು ಹೇಳಿ ಬಿಟ್ಟರೆ, ಮುಂಜಾನೆ ಬಸ್‌ಸ್ಟಂಡ ತೋರಿಸಿಬಿಟ್ಟರೆ, ಹೇಗೋ ಆಗಲಿ ನನ್ನೂರು ನಾನು ಸೇರಿಕೊಳ್ಳುವೆ. ನಿನಗೀಗ ತೊಂದರೆಯಾಗುವಂತಿದ್ದರೆ ಬೆಳಗಾಗಲಿ, ಮುಂಜಾನೆ ಹೇಳುವಿಯಂತೆ.”

ರವಿ ಉಸ್ಸೆಂದು ನಿಟ್ಟುಸಿರು ಬಿಟ್ಟ. ಇಷ್ಟಾದರೂ ಅವನಲ್ಲೇನೂ ಬದಲಾವಣೆಯಾಗಲಿಲ್ಲ. ಮೈ ಮುಟ್ಟಿ ನೋಡಲು ಕಾದು ಕೆಂಡವಾಗಿತ್ತು. ಆದರೂ ಕೇಳಿದನು:

“ಗೌರಾ, ಲಕ್ಷ್ಮಿಯನ್ನು ನಾನು ಕರೆತರಬೇಕು ಅಂತಲ್ಲವೇ ನೀನು ಹೇಳುವದು?”

“ನಾನು ಮತ್ತೆ ಬೇರೇನೆನ್ನಲಿ?”

“ಶ್ರೀನಾಥ, ಇದಕ್ಕೆ ನಿನ್ನ ಅಭಿಪ್ರಾಯವೇನು?”

“ಏನು ರವಿಯಣ್ಣಾ, ನೀನು ಒಪ್ಪಿ ಕೈಹಿಡಿದ ಹೆಣ್ಣನ್ನು ತರಲು ಅವರ ಒಪ್ಪಿಗೆ ಬೇಕೇ? ಮೊದಲು ಒಪ್ಪಿ ಕೈಹಿಡಿದು ನಲಿದಾಡುವಾಗ್ಗೆ ನೀನಾರನ್ನೂ ಕೇಳಲಿಲ್ಲವಲ್ಲ?” ಗೌರಾ ನಡುವೆಯೇ ಕೇಳಿದಳು.

“ನಿಮ್ಮ ಮನೆಯವರ ಅಭಿಪ್ರಾಯವೇನು?”

“ಅವರೆಲ್ಲರನ್ನೂ ನಾನು ಒಪ್ಪಿಸುತ್ತೇನೆ.”

“ಸುತ್ತುಮುತ್ತಲಿನ ಹಲುಬುವ ಜನಕ್ಕೆ ಏನನ್ನಬೇಕು?”

“ಅವರ ಬಾಯಿಂದ ಅವರಾಡಿಕೊಳ್ಳುತ್ತಿದ್ದರೆ ನಮಗೇನಾಗಬೇಕು?”

“ನನಗೆಲ್ಲ ಗೌರಾ, ಹಲವು ಜಾತಿಯ ಜನ ಈ ಪ್ರಪಂಚದಲ್ಲಿದ್ದಾರೆ. ಅವರಿಂದ [illegible] ಸಾಧ್ಯವೇ? ಎಂದೆನಿಸುತ್ತದೆ.”

“ಅದು ನಿನ್ನ ನಿರ್ಧಾರವನ್ನು ಕೂಡಿದೆ.”

“ಏನಿದ್ದರೂ ನೀನೇ ಎಂದು ನನ್ನ ತಲೆಯ ಮೇಲೆಯೇ ಹೊರಿಸಬೇಡ.”

“ಹೊರುವವನು ಇಷ್ಟೇಯೆಂದು ಹೋರಿಸುವದಿಲ್ಲ. ಭಾರ ಹೊತ್ತಿದ್ದು

ಕತ್ತೆಯೆಂದು ಬೆನ್ನಿನ ಮೇಲೆ ಮತ್ತೊಂದು ಗಂಟನ್ನು ಇಡುತ್ತಿಲ್ಲ. ಅದು ನಿನ್ನ ಕರ್ತವ್ಯದ ಹೊಣೆಯೆಂದು ಹೇಳುತ್ತಿದ್ದೇನೆ."

"ಸರಿ, ಒಪ್ಪಿದೆಯೆಂದಿಟ್ಟುಕೊಳ್ಳೋಣ. ನನ್ನ ಶರೀರದಲ್ಲಿ ಎಂತಹ ಪರಿವರ್ತನೆಯಾಗಿದೆಯೆಂದು ಬಲ್ಲೆಯಾ? ದೇಹವಿದೆಯೆಂದು ನೀನು ನನ್ನನ್ನು ಕಾಣುತ್ತಿರುವಿ. ಕೆಟ್ಟ ಮಾತೆಂದು ಈ ಬಾಯಿಯಿಂದ ಆಡಲಿಲ್ಲ. ಈ ದೇಹ ಇನ್ನು ಬಹುದಿನ ತಡೆದೀತೆಂದು ವಿಶ್ವಾಸವಿಲ್ಲ, ಗೌರಾ! ನನ್ನ ಮೇಲಿನ ಗೌರವದ ಬಗ್ಗೆ ನಿನಗೆ, ನಿನ್ನಕ್ಕನಿಗೆ ಒಂದು ವೇಳೆ ವಿಶ್ವಾಸವುಂಟಾದರೆ ಅದು ಅಪ್ರಯೋಜಕವೆಂದು ನಾನು ಹೇಳಬಲ್ಲೆ. ನೀನೇನೆನ್ನುವಿ ಎಂಬೆಲ್ಲವೂ ತಿಳಿದಿದ್ದು; ತಿಳಿದಂತೆಯೂ ಆಯಿತು. ಆದರೆ ಈ ದೇಹವೆಲ್ಲಿ ನನಗೆ ಮೋಸ ಮಾಡುತ್ತದೋ ಎಂದು ಅವಿಶ್ವಾಸವಿದೆ."

"ಅಣ್ಣಾ, ಪ್ರಕೃತಿಯ ನಾಡಿಯನ್ನು ಯಾರಿಂದಲೂ ಅರಿಯಲು ಸಾಧ್ಯವಿಲ್ಲ. ಒಂದು ವೇಳೆ ಅದು ತನ್ನ ಕೈವಾಡವನ್ನು ತೋರಿಸಿಬಿಟ್ಟರೆ ಉಪಾಯವಿಲ್ಲ. ತಂದೆಯವರು ನಮ್ಮಿಬ್ಬರ ಹೆಸರಿನಲ್ಲಿ ಕಟ್ಟಿಟ್ಟ ಹಣ ಬೇಂಕಿನಲ್ಲಿದೆ. ಆ ಹಣದಿಂದ ನನ್ನ ಮೆಡಿಕಲ್ ಕೋರ್ಸ ಮುಗಿಯಿಸಿ ಅಕ್ಕನ ಹೊಟ್ಟೆಗೆ ನಾನು ಅನ್ನ ನೀಡಬೇಕೆಂದು ನಿರ್ಧರಿಸಿದ್ದೇನೆ. ರಜೆ ಮುಗಿದ ನಂತರ ಅಕ್ಕನೂ ಸಹ ನನ್ನ ಜತೆಗೆ ಬರೋಡಾಕ್ಕೆ ಬರುತ್ತೇನೆಂದು ಹೇಳಿದ್ದಾಳೆ. ಆದರೆ ಆ ಮಾತೆಲ್ಲ ಇಲ್ಲಿ ಪ್ರಾಮುಖ್ಯವಾದುದಲ್ಲ. ನಮ್ಮ ಹಣೆಯಲ್ಲಿ ಬರೆದಂತೆ ಆದೀತು."

ಅದಕ್ಕೆ ರವಿಯಣ್ಣ ಒಪ್ಪಿಗೆಯಿತ್ತ. ಗೌರಾ ಕುಣಿದುಬಿಟ್ಟಳು.

ಕಣ್ಣೀರಿಳಿಸುತ್ತಿದ್ದ ಅವಳ ಕಣ್ಣೊಮ್ಮೆ ಮಿಂಚಿತು. ಮೈ ಪ್ರಫುಲ್ಲಿತವಾಯಿತು. ಕಣ್ಣುಗಳು ಪರಮಾನಂದದ ವರ್ಷಧಾರೆಯನ್ನೆರೆದವು. ನನಗೂ ಒಮ್ಮೊಮ್ಮೆ ನನೆಗೆದ್ದಿತು. ಕತೆ ಕೇಳುವವನಂತೆ ಗೌರಾಳ ನಾಲಿಗೆಯಿಂದ ಉದುರುತ್ತಲಿದ್ದ ರತ್ನಖಚಿತ ಮುತ್ತುಗಳ ಮಾಲೆಯನ್ನು ಕೇಳಿ ಅವರ ಸಮಯವನ್ನು ಕಳೆಯುತ್ತಿದ್ದ. ಇಲ್ಲಗೇನೇ ಸಮಗರಿಯದಂತೆ ನಡುರಾತ್ರಿಗೂ ಮೀರಿ ಹೋಯಿತು.

"ಗೌರಾ, ನನ್ನನ್ನು ಎಬ್ಬಿಸಿ ಕೂಡ್ರಿಸುತ್ತೀಯಾ?" ರವಿ ಕೇಳಿದನು.

ಗೌರಾ ರವಿಯನ್ನೆತ್ತಿ ಕೂಡ್ರಿಸಿದಳು. ರವಿಯೇ ಮಾತನಾಡಿದನು.

"ಗೌರಾ, ಜಯವಿಜಯರೇನು ಮಾಡುತ್ತಾರೆ?"

" ಅವರ ವಿಷಯ ಕೇಳುವವಕ್ಕೆ ನಿನ್ಗೆ ಅದೇಕೆ ಅಷ್ಟು ಆತುರ? "

" ನನಗೆ ಅವರ ಪರಿಚಯವಿದೆ; ಅದಕ್ಕೇ ಕೇಳೋಣ ಅಂತ, ಅಷ್ಟೇ. "

" ಇದ್ದಾರೆ; ಚೆನ್ನಾಗಿಯೇ ಇದ್ದಾರೆ. ಜಯಳ ಮದುವೆಯೂ ಆಯಿತು. "

" ಅವರು ನನ್ನ ವಿಷಯವಾಗಿ ಏನಾದರೂ ಆಡಿಕೊಳ್ಳುತ್ತಿದ್ದರೆ ? "

" ಏನಾದರೂ ಅಲ್ಲ; ಬೇಕಾದಷ್ಟು. ಅವರ ಸ್ವಭಾವವೇ ಹಾಗೆ. ಗಂಡಸರನ್ನು ಗೇಲಿ ಮಾಡುವದೆಂದರೆ ಅವರಿಗೆ ಪಂಚಪ್ರಾಣ; ನೀನು ನಮ್ಮ ರೂಮಿಗೆ ಬರುತ್ತಿದ್ದದ್ದು, ಅಕ್ಕನ ಜತೆ ಇರುವ ಸಂಬಂಧವೆಲ್ಲಾ ಅವರಿಗೆ ಚೆನ್ನಾಗಿಯೇ ಗೊತ್ತಿವೆ. "

" ನಿಜವೆ ? "

" ಅಯ್ಯೋ ! ನೀವೇನು ಮಾಡಿದರೂ ಯಾರೂ ನೋಡುವದಿಲ್ಲ ಎಂದು ನಿನ್ನ ತಿಳುವಳಿಕೆಯಷ್ಟೆ; ಬೆಳೆದು ನಿಂತ ಹೆಣ್ಣಿನ ಕೋಣೆಗೆ ಒಬ್ಬ ತರುಣ ಬಂದು ಹೋಗುತ್ತಿರುವದು ಯಾಕೆ? ಪರಿಚಯಸ್ಥರೆಂದೆ? ಅವರ ಸಂಬಂಧ ಏನಾದರೂ ಇರಲೇಬೇಕೆಂದು ಯಾರಾದರೂ ಹೇಳಿಯಾರು; ನೀನು ಪ್ರತಿನಿತ್ಯ ಬರುತ್ತಿದ್ದುದು ಅವರಿಗೆ ಗೊತ್ತಿದೆ. "

" ಹಾಗೇನಿಲ್ಲ; ಅವರೇನೂ ನನ್ನೊಡನೆ ಆಕ್ಷೇಪವೆತ್ತಲಿಲ್ಲ. ಆದರಿಸಿಯೇ ಕೂಡ್ರಿಸುತ್ತಿದ್ದರು. ಜಯ-ವಿಜಯರಲ್ಲಿ ಯಾರಾದರೊಬ್ಬರು ನಗುತ್ತಲೇ ಚಹವನ್ನು ತಂದುಕೊಡುತ್ತಿದ್ದರು; ಕಣ್ಣು ಚಿವುಟಿ ಹಾಸ್ಯ ಮಾಡುತ್ತಿದ್ದರು. ಹೀಗೆಲ್ಲ ಅವರ ವರ್ತನೆ ನೋಡಿ ಅವರು ನನ್ನ ಬಗ್ಗೆ ಗೌರವವಾಗಿಯೇ ಇದ್ದರು ಎಂದು ತಿಳಿದುಕೊಂಡಿದ್ದೆ. "

" ಅದು ವಾಸ್ತವಿಕವೆ; ಯಾಕೆ ಗೊತ್ತೆ! ಹೆಣ್ಣು ತಾನಾಗಿಯೇ ಗಂಡೊಂದನ್ನು ಗುರುತಿಸಿ, ಅವನೊಡನೆ ಲಗ್ನವಾಗಲು ಇಚ್ಛಿಸಿದರೆ, ತಂದೆ-ತಾಯಿಗಳು ಇಲ್ಲವೇ ಅವರ ಪಾಲಕರು ಅದಕ್ಕೆ ಅಲ್ಲಗಳೆಯುತ್ತಾರೆಯೆ! ಅವರಿಗೂ ತಮ್ಮ ಹುಡುಗಿಗೆ ಗಂಡು ಹುಡುಕುವ ಕೆಲಸ ತಪ್ಪಿತು ಎಂದು ಸುಮ್ಮನುಳಿಯುತ್ತಾರೆ. ಅದಕ್ಕಾಗಿಯೇ ಭಾವೀ ಅಳಿಯದೇವರು ನೀವಾಗುವವರಾದ್ದರಿಂದ ನಿಮ್ಮ ಬಗ್ಗೆ ಆಕ್ಷೇಪಗಳು ಇರಲಿಲ್ಲ. "

" ನಾನು ಇಲ್ಲಿಗೆ ಬಂದ ಮೇಲೆ ? "

"ಅಯ್ಯೋ, ಅವೆಷ್ಟು ಜುಜ್ಜು ಮಾತುಗಳು! ಇಂತಹ ಮುಂಡೆಯರಿಗೆಲ್ಲ ಅಂತಹ ಗಂಡು ಸಿಕ್ಕುತ್ತಾನೆಯೆ? ಇವರ ಸ್ವರೂಪ ನೋಡಿದರೆ ಸಾಕು! ಏನೋ ತಂದೆಯವರ ಗುರುತಿನಿಂದ ಬಂದು ಹೋಗುತ್ತಿದ್ದ ಅಷ್ಟೆ. ಅವನು ಬರುತ್ತಿದ್ದಾನೆಂದು ಇವರ ದಿಮಾಕಿಗೆ ಮಿತಿಯೇ ಇರಲಿಲ್ಲ. ತಮ್ಮ ಮುಂದೆ ಊರಲ್ಲಿ ಜನವಿಲ್ಲ ಎಂದು ಮೆರೆಯುತ್ತಿದ್ದರು; ನನ್ನ ಮುಂದೆ ಆಡಿದ್ದರೆ ಅಷ್ಟೊಂದು ಬೇಸರವಾಗುತ್ತಿರಲಿಲ್ಲ. ಅಕ್ಕನ ಮುಂದೆಯೂ ಏನೆಲ್ಲ ಆಡಿಕೊಂಡು ಅವಳ ಒಣಗದ ಗಾಯಕ್ಕೆ ಮತ್ತೆ ಬರೆ ಎಳೆಯುತ್ತಿದ್ದರು; ಇದೆಲ್ಲ ನೋಡಿ ನನ್ನ ರಕ್ತ ಕುದಿಯುತ್ತಿತ್ತು. ಇವನ್ನು ಕೇಳಿ ಅಕ್ಕ ಒಮ್ಮೊಮ್ಮೆ ಹಗಲು ರಾತ್ರಿಯೆಲ್ಲ ಅಳುತ್ತಿದ್ದಳು. ಒಮ್ಮೆ ಜಯ, "ಇದೆಲ್ಲಿಯ ಪಾಪದ ಕುಲ" ಎಂದೇನೋ ಹೇಳಿ ಅಕ್ಕನ ಮುಸುಡಿಗೆ ಉಗುಳಿದಳಂತೆ; ಆ ದಿನ ಅಕ್ಕ ಬಾವಿ ಹಾರಿಕೊಳ್ಳಲು ಹೋಗಿದ್ದಳು. ಅದನ್ನು ಕಂಡು ಅಣ್ಣ ಅಕ್ಕನನ್ನು ಸಂತೈಸಿ, ಜಯಾ-ವಿಜಯರಿಗೆ ಚೆನ್ನಾಗಿ ಬೈದು ಅಬ್ಬರಿಸಿದನಂತೆ."

ರವಿ ಮನಸ್ಸಿನಲ್ಲಿಯೇ ಹಾಯ್ ಎಂದುಕೊಂಡನು. ಅಂತಹ ವೇಳೆಯಲ್ಲಿಯೂ ಎಲ್ಲರ ವಿಷಯವಾಗಿ ತಿಳಿದುಕೊಳ್ಳುವ ಕುತೂಹಲವಿತ್ತು; ಅಂತೆಯೇ ಕೇಳಿದನು.

"ಗೌರಾ, ಜಯಳ ಗಂಡ ಚೆನ್ನಾಗಿದ್ದಾನೆಯೆ?"

"ಇದ್ದಾನೆ; ಮರದ ದಿಂಡಿನ ಹಾಗೆ. ಯಾವುದೋ ಪರೀಕ್ಷೆ ಪಾಸಾಗಿ ನೌಕರಿ ದೊರಕಿಸಿದ್ದಾನೆಂದು ಅವನ ಜಂಭ ಹೇಳತೀರದು; ಕಲೆಕ್ಟರ, ಕಮೀಶನರರೆಲ್ಲ ತನ್ನ ಮನೆಗೆ ಬಂದು ಹೋಗುತ್ತಾರೆ ಎಂದು ಗುಂಡು ಹಾರಿಸುತ್ತಾನೆ. ಅವನ ಜಾತಕದಲ್ಲಿ ಅಮೇರಿಕಾಕ್ಕೆ ಹೋಗುವ ಯೋಗವಿದೆಯಂತೆ; ಹೋಗುವಾಗ್ಗೆ ಜಯಾಳನ್ನು ಕರೆದುಕೊಂಡು ಹೋಗಬೇಕು ಎನ್ನುತ್ತಿದ್ದಾನೆ."

"ಬಲು ಜೋಕಿನ ಆಸಾಮಿಯೇ ಆಗಿರಬೇಕು."

"ಜಯಾಳಂತೂ ಅವನ ಪಟಾಲಂ ಕೇಳಿ ಹೇಗೆ ಹೆಮ್ಮಡಿಯಾಗಿಬಿಟ್ಟಿದ್ದಾಳೆ; ತಂಗಿ ವಿಜಯಾಳೊಡನೆ ತಾನು ಬರುವಾಗ್ಗೆ ನಿನಗೇನು ತರಬೇಕು ಎಂದು ಕೇಳುತ್ತಾಳೆ. ವಿಜಯಳೇನು ಕಡಿಮೆಯೆ? ಸುರಸವಾಗಿಯೇ ಉತ್ತರಿಸುತ್ತಾಳೆ: ಒಂದು ಲೇಡಿಸ್ಮಿಥ್ ವಾಚ, ಪೌಡರ ಪೆಟ್ಟಿಗೆ, ಹೇರ್ ಪಿನ್ನುಗಳು ಎಂದು."

ರವಿಯ ಮೋರೆಯಲ್ಲಿ ನಗು ಮಿಂಚಿತು; ಗೌರಾ ಮತ್ತೆ ಮುಂದು ವರಿಸಿದಳು.

ಇನ್ನೊಂದು ವಿಷಾದದ ಘಟನೆ ನಡೆಯಿತಣ್ಣಾ! ನಿನಗೀಗಲೇ ತಿಳಿದಿರ ಬೇಕು, ಜಯಾಳ ಗಂಡ ಏನೆಂದು? ನಿರಾಧಾರ ಯುವತಿಯರು ಎಲ್ಲ ಗಂಡು ಗಳಿಗೂ ಅಗ್ಗವೆಂದು ಕಾಣುತ್ತದೆ; ಅವರು ತರುಣ ಯುವತಿಯರನ್ನು ನೋಡು ವದು ಹಸಿ ಕಣ್ಣುಗಳಿಂದ. ನಮ್ಮ ಬಗ್ಗೆ, ಅದೂ ಅಕ್ಕನ ಬಗ್ಗೆ ಏನೇನೋ ತಿಳಿದುಕೊಂಡಿರಬೇಕು; ಹೆಂಡತಿಯೊಡನೆ ಬಂದಾಗ ನಮ್ಮ ರೂಮಿಗೂ ಬರು ತ್ತಿದ್ದ. ನಿಮ್ಮ ಖರ್ಚಿಗೆ ತೊಂದರೆಯಾಗುತ್ತಿರಬೇಕಲ್ಲವೇ? ಇರಲಿ, ಎಂದು ಐವತ್ತು ರೂಪಾಯಿ ಕೊಟ್ಟ; ನಾನು ತೆಗೆದುಕೊಂಡೆ. ಅವನ ಕುಣಿಯುವ ಕಣ್ಣುಗಳ ' ಶ್ವಾನಬುದ್ಧಿ ' ನನಗೆ ಮೊದಲೇ ಅರಿವಾಗಿತ್ತು. ಅದರ ಮಿತಿಯೆಷ್ಟು ಎಂದು ಅರಿಯುವ ಬಗ್ಗೆ ನನಗೂ ಉತ್ಸಾಹವಿತ್ತು. ಮೊದಲು ನೇರವಾಗಿ ಬರುತ್ತಿದ್ದವ ಕಡೆಕಡೆಗೆ ಜಯ-ವಿಜಯರ ಕಣ್ಣು ತಪ್ಪಿಸಿಯೂ ಬರತೊಡಗಿದ. ನಾನು ಸಲಿಗೆಯಿಂದ ಮಾತಾಡುತ್ತಿದ್ದೆನೆಂದು ಟೇಬಲ್ಲಿಗೆ ಒರಗಿ ಕೂತ; ಅಕ್ಕನ ಸಮೀಪವೇ ಕುಳಿತುಕೊಂಡ; ಅಕ್ಕ ನನ್ನನ್ನು ನೋಡಿದಳು. ನಾನು ಕಣ್ಣು ಸನ್ನೆ ಮಾಡಿ ಅವಳಿಗೆ ಸುಮ್ಮನಿರಲು ತಿಳಿಸಿದೆ. ಅವನು ಅಕ್ಕನನ್ನು ಮುಟ್ಟಲು ಪ್ರಯತ್ನಿಸಿದ. ನಾನು ನಗೆಯಾಡುತ್ತಲೇ ' ಏನು ಭಾವಯ್ಯಾ, ಅಕ್ಕನೊಡನೆ ಸಲಿಗೆ ಹೆಚ್ಚಾಗುತ್ತಲೇ ಬಂತಲ್ಲ ' ಎಂದೆ.

ಅದು ಅವನಿಗೆ ಪುಟಕೊಟ್ಟಂತಾಯಿತು; ಅಕ್ಕನ ಮೈಮೇಲೆ ಕೈ ಇಟ್ಟೇ ಬಿಟ್ಟ; ಅಕ್ಕ ಅಲ್ಲಿಂದ ಎದ್ದುಬಿಟ್ಟಳು.

' ಅಕ್ಕ ನಿನ್ನನ್ನು ಕಂಡರೆ ಹೆದರುತ್ತಾಳೆ ' ಎಂದೆ ನಾನು.

ದೇಶಾವರಿ ನಗೆ ನಕ್ಕನು.

' ಏನೋ ಆಲೋಚನೆ ಮಾಡುವಂತಿದೆ ಭಾವಾ ? '

' ಏನಿಲ್ಲ. '

' ಅಕ್ಕನ ಬಗ್ಗೆ ಬಹಳ ಕಾತುರತೆ ಅಲ್ಲವೆ ? '

ಅದಕ್ಕೂ ನಗುವೇ ಉತ್ತರ

' ಜಯಾಳ ಜೊತೆಗೆ ಅಕ್ಕನನ್ನೂ ಮದುವೆಯಾಗಿಬಿಡಿ ! '

' ನಿನ್ನ ಅಕ್ಕ ಒಪ್ಪಬೇಕಲ್ಲ. '

'ನಾನು ಒಪ್ಪಿಸುತ್ತೇನೆ.'

ಅವ ಗೆಲುವಿನ ನಗೆ ನಕ್ಕ.

'ಭಾವಾ, ಈ ಉದ್ಯೋಗ ಎಂದಿನಿಂದ ಪ್ರಾರಂಭಿಸಿದ್ದೀರಿ?'

'ಏನು?' ಬೆರಗುಗೊಂಡು ಕೇಳಿದ.

'ಮದುವೆಯಾದ ಹೆಣ್ಣಿರುವಾಗ ಇನ್ನೊಂದು ಹೆಣ್ಣನ್ನು ಕಣ್ಣಿಟ್ಟು ನೋಡುವದು.'

'ಹಾಗೇಕೆ ಕೇಳುತ್ತೀ ಗೌರಾ!'

'ಅಕ್ಕ 'ಪಬ್ಲಿಕ ಗೂಡ್ಸ'ದ ವೇಶ್ಯೆಯಲ್ಲ; ಜಯಾಳಂತೆ ಅವಳೂ ಒಬ್ಬ ಗಂಡನ ಕೈ ಹಿಡಿಯಬೇಕು.'

'ಯಾರೋ ನಿನ್ನ ಅಕ್ಕನೊಡನೆ ಅನೈತಿಕ ಸಂಬಂಧವನ್ನು ಇಟ್ಟು ಕೊಂಡಿದ್ದರಂತಲ್ಲ?'

'ಅವರೇ ಮದುವೆಯಾಗುತ್ತಾರೆ.'

'ಅವರು ಅವಳನ್ನು ಬಿಟ್ಟಿದ್ದಾರಂತೆ.'

'ಯಾವ ಹಾದರದವರು ಹೇಳಿದ್ದು?'

ಅವನ ಮೋರೆ ಬೆವರೊಡೆಯಿತು.

"ನಾನೇ ಮುಂದುವರಿಸಿದೆ. 'ಭಾವಾ, ಒಂದು ಮಾತು ನೆನಪಿಡಿರಿ; ನೀವು ಜಯಾಳ ಗಂಡನೆಂದು ಇಲ್ಲಿಗೆ ಬಂದರೂ ಆಕ್ಷೇಪವೆತ್ತಲಿಲ್ಲ. ನಿಮಗೆ ಕೈ ಹಿಡಿದ ಹೆಣ್ಣು ಇರುವಾಗ್ಗೆ ಇನ್ನೊಂದು ಹೆಣ್ಣಿನ ಅಗತ್ಯವಿಲ್ಲೆಂದು ನಾನು ತಿಳಿ ದಿದ್ದೆ. ನೀವಿತ್ತ ರೂಪಾಯಿಗಳು ಯಾಕೆ ಎಂಬುದು ನನಗೆ ಗೊತ್ತಾಯಿತು. ನೀವು ಬಂದಿರಿ, ಅಕ್ಕನೊಡನೆ ಚೇಷ್ಟೆ ಮಾಡಿದಿರಿ, ಆಕ್ಷೇಪವೆತ್ತಲಿಲ್ಲ. ನೀವು ಸಂಸಾರಿಯಾದುದರಿಂದ ಬೇರೆ ಹೆಣ್ಣುಗಳನ್ನು ಅಕ್ಕ-ತಂಗಿಯರೆಂದು ತಿಳಿಯು ವಿರಿ ಎಂದು ಭಾವಿಸಿದ್ದೆ; ನೀವು ಎಲ್ಲ ಹೆಣ್ಣುಗಳೂ ನಿಮ್ಮನ್ನು ಕಂಡಕೂಡಲೇ ನಿಮಗೊಲಿಯುತ್ತವೆ ಎಂದು ತಿಳಿದಿರಬೇಕು; ಆದರೆ ಅಕ್ಕ ಮಾತ್ರ ನಿಮಗೊಲಿ ಯಲು ಸಾಧ್ಯವಿಲ್ಲ. ಅವಳು ಈಗಾಗಲೇ ಬೇರೆಯವರಿಗೆ ತನ್ನ ಹೃದಯವನ್ನು ಅರ್ಪಿಸಿದ್ದಾಳೆ; ನಾನು ಮಾತ್ರ ಯಾರಿಗೂ ಒಲಿದಿಲ್ಲ. ನಿಮ್ಮ ಹೆಂಡತಿ ಜಯಾಳನ್ನು ಬಿಟ್ಟುಬಿಡಿ; ನಾನೇ ನಿಮ್ಮನ್ನು ಮದುವೆಯಾಗುತ್ತೇನೆ. ಮನೆ

ಯುವರಿಗೆ ತೊಂದರೆ ಕೊಡುವದು ಬೇಡ; ಹತ್ತೇ ರೂಪಾಯಿಗಳಲ್ಲಿ ರಜಿಸ್ಟರ ಮದುವೆಯಾಗಿ ಬಿಡೋಣ. ಆಗಬಹುದೆ ? '

ಅವನು ಪಾತಾಳಕ್ಕಿಳಿದು ಹೋದ. ನಂತರ ಅವನಿಂದ ನಮಗೆ ತೊಂದರೆ ಯಾಗಲಿಲ್ಲ.

" ಇನ್ನು ವಿಜಯಳ ವಿಷಯ. ಅಕ್ಕ ಗಂಡನ ಮನೆಗೆ ಹೋದಾಗ ಅವಳೇ ಮನೆಗೆ ರಂಭೆಯಾಗಿಬಿಟ್ಟಿದ್ದಾಳೆ. ಕಾಮನ ಹಬ್ಬಕ್ಕೆ ಬಣ್ಣ ಬಳಿದು ಕೊಳ್ಳುವಂತೆ ಮೋರೆಗೆ ಪೌಡರ ಬಳಿದುಕೊಳ್ಳುತ್ತಾಳೆ. ದಿನಕ್ಕೆರಡು ತರದ ಸೀರೆ, ದಿನಕ್ಕೆ ನಾಲ್ಕು ರೀತಿ ತಲೆ ಬಾಚಿಕೊಳ್ಳುವದು, ಶೃಂಗಾರವಾಗಿ ಮನೆ ಯಿಂದ ಹೊರಗೆ ಹೊರಡುವಾಗ್ಗೆ ಆಚೆ ಈಚೆ ನೋಡುವದು; ಸ್ಕೂಲಿಗೆ ಹೋಗು ವಾಗ್ಗೆ ಅವಳಿಗೆ ಪುಸ್ತಕ ಬೇಕಂತಲೇ ಇಲ್ಲ. ನವಯುವಕರ ಮೋರೆಯೇ ಅವಳಿಗೆ ಪುಸ್ತಕ; ಏನಾಗಬೇಕೋ ಅದೆಲ್ಲ ನಾನು ತಿಳಿದುಕೊಂಡಿದ್ದೆ.

" ಅವಳು ಮೆಟ್ರಿಕ್ ಕಲಿಯುವಾಗ ಜೋಶಿ ಮಾಸ್ತರರ ಮನೆಗೆ ಟ್ಯೂಶ ನ್ನಿಗೆ ಹೋಗುತ್ತಿದ್ದಳು; ಆ ಮಾಸ್ತರರ ಹೆಂಡತಿಯ ತಮ್ಮನೂ ಇವರ ಕ್ಲಾಸಿನ ಲ್ಲಿಯೇ ಇದ್ದನು; ಇಂಗ್ಲಿಷ ಪಾಠವೂ ಸಾಗಿತು; ಪ್ರೇಮವೂ ಸಾಗಿತು. ಯೌವನದ ಹೊಸ್ತಿಲಲ್ಲಿ ಹೆಣ್ಣು-ಗಂಡುಗಳ ಉದ್ವಿಗ್ನತೆ ನಿನಗೆ ಹೇಳಬೇಕಿಲ್ಲ. "

" ಸಂಜೆ ವಾಕಿಂಗ ಪ್ರಾರಂಭವಾಯಿತು. ಮೊದಮೊದಲು ಯಾರ ಕಣ್ಣಿಗೂ ಕಾಣದಂತೆ, ಕೆಲದಿನ ನಂತರ ಕಾಣುವಂತೆಯೂ. ರಾತ್ರಿ ಸಿನೇಮಾ ಕ್ಕೆಂದು ಹೋದರೆ, ಇವರು ಹೋಗುವದು ಕೃಷ್ಣಾಭವನ ಫಸ್ಟಕ್ಲಾಸ ಲಾಜಿಂ ಗಿಗೆ. ಪರೀಕ್ಷೆ ಸಮೀಪಿಸಿದರೂ ಓದುತ್ತಿರಲಿಲ್ಲ. ಇವರೆಲ್ಲ ಪುಸ್ತಕ ಓದದೇ ಪಾಸಾಗುವವರೆಂದು ತಿಳಿದುಕೊಂಡೆ. "

" ನಾನಿವನ್ನು ಅವಳಣ್ಣನಿಗೆ ತಿಳಿಸಲೇ ಎಂದು ಅಕ್ಕನಿಗೆ ಕೇಳಿದೆ; ಅಕ್ಕ ಬೇಡವೆಂದಳು. ನಾನೂ ಅವರ ಗೊಡವೆಗೆ ಹೋಗಲಿಲ್ಲ. ಪರೀಕ್ಷೆಯಾದ ತಿಂಗಳೊಪ್ಪತ್ತಿನಲ್ಲಿ ತಿಳಿಯಿತು; ಮಗಳು ಪರೀಕ್ಷೆಯಲ್ಲಿ ಪಾಸಾಗಿರುವಳೆಂದು— ಅಂದರೆ ಗರ್ಭಿಣಿಯೆಂದು. ಮೊದಮೊದಲು ಕೇಳಿದಾಗ ಇಲ್ಲವೆಂದು ಹಾರಿಸಿ ಬಿಟ್ಟಳು. ಆದರೆ ಬೆಳೆಯುತ್ತಿರುವ ಅವಳ ಗರ್ಭ ಅವಳ ವಿರುದ್ಧವಾಗಿ ಸಾಕ್ಷಿ ನುಡಿಯಿತು.

" ಏನೋ ಪ್ರಯತ್ನ ಮಾಡಿ ಗರ್ಭ ತೆಗೆಸಿದ್ದಾಯಿತು; ಆದರೆ ಮೊದಲಿನ

ಬಣ್ಣವೇ ಇಲ್ಲ. ಮತ್ತೆ ಆಗಾಗ್ಗೆ ಹೊಟ್ಟೆಯ ನೋವು ಜೇರೆ ಬಾಧಿಸುವದಂತೆ.

"ಅಂತೂ ಇದ್ದಾಳೆ; ಮನೆಯವರಿಗೆ ಅವಳ ಮದುವೆಯ ಯೋಚನೆ. ಮನೆಯಲ್ಲೀಗ ಅವಳು ಎಲ್ಲರಿಗೂ ಭಾರವಾಗಿದ್ದಾಳೆ; ಅನ್ನ ಜಗಿಯುವ ಯಂತ್ರವಾಗಿದ್ದಾಳೆ. ಬಣ್ಣದ ಗೊಂಬೆಯಾಗಿದ್ದವಳು ಬಣ್ಣಗೆಟ್ಟು ಮಣ್ಣಿನ ಗೊಂಬೆಯಾಗಿದ್ದಾಳೆ.

"ಹೀಗೆ ಸುಂಟರಗಾಳಿಯ ಹೊಡೆತಕ್ಕೆ ಸಿಕ್ಕ ವಿಜಯಾ, ಮತ್ತೆ ದಂಡೆ ಸೇರಿಕೊಳ್ಳಲು ಹವಣಿಸುವ ಮುರುಕು ಡೋಣಿಯಂತಾಗಿದ್ದಾಳೆ. ಇನ್ನು ನೀನು ತಿಳಿಯಬೇಕಾದವ ಅಣ್ಣ. ಅವನದೇನು? ಸುಂದರ, ಎಳೆಯ ಯುವ ತಿಯ ಗಂಡ, ಸಂಸಾರ ಸಂಸಾರವೆಂದು ಜಗಜಟ್ಟಿಯಂತೆ ಈ ದಂಡೆಯಿಂದ ಆ ದಂಡೆಗೆ ಈಸುತ್ತಿದ್ದಾನೆ.

"ಅಣ್ಣಾ! ನೀನು ಕೇಳಬೇಕಾದುದೆಲ್ಲ ಮುಗಿಯಿತಷ್ಟೆ? ಇನ್ನು ಮುಂಜಾನೆ ನನಗೆ ಹೊರಡಲು ಅಪ್ಪಣೆಯೆ?"

"ತೊಂದರೆಯಾಗದಿದ್ದರೆ ಇನ್ನೂ ಎರಡು ದಿನ ನಿನ್ನಣ್ಣನ ಹಾಸಿಗೆಯಲ್ಲಿ ಕುಳಿತು ಆರೈಕೆ ಮಾಡಿ ಹೋಗಬಹುದು. ಇನ್ನು ಬೇರೆ ರೀತಿಯ ಅನಾನುಕೂಲತೆಯಿದ್ದರೆ ಇಲ್ಲಿಂದ ಮುಂಜಾನೆ ಐದು ಗಂಟೆಯ ಗಾಡಿಗೆ ಹೊರಡು. ಅಂದರೆ ನಾಳೆ ಬೆಳಗಾಂವ ತಲ್ಪಿ ಅಂದೇ ಸಂಜೆ ರತ್ನಾಗಿರಿಯನ್ನು ಸೇರಬಹುದು."

"ಇರಬಹುದಾಗಿತ್ತು ಅಣ್ಣಾ, ಆದರೆ ಅಕ್ಕ ವೈಯೆಲ್ಲ ಕಣ್ಣಾಗಿ ನನ್ನ ಬರವನ್ನು ನಿರೀಕ್ಷಿಸುತ್ತಿರಬಹುದು. ಒಂದು ವೇಳೆ ನಾನು ಹೋಗದಿದ್ದರೆ, ಅವಳು ಗರಬಡಿದವಳಂತೆ ಕುಳಿತು ಬಿಡುತ್ತಾಳೆ."

"ನೀನಿಲ್ಲಿಗೆ ಬರುವದು ಅವಳಿಗೆ ಗೊತ್ತಿದೆಯಷ್ಟೇ?"

"ಗೊತ್ತಿದೆ."

"ಬರುವಾಗ್ಗೆ ಏನೂ ಹೇಳಲಿಲ್ಲವೆ?"

"ಇಲ್ಲ, ನಿರಾಶೆಯ ಕಣ್ಣುಗಳಿಂದ ನನ್ನನ್ನೊಮ್ಮೆ ನೋಡಿ ಮೋರೆ ತಿರುವಿಬಿಟ್ಟಳು."

"ನನಗಿನ್ನೂ ಒಂದು ನಿರಾಶೆ ಗೌರಾ, ನಿನ್ನೊಡನೆ ಏನೇನೋ ಮಾತ ನಾಡಿ ಆಶಾಗೋಪುರದ ಕೊನೆಯ ಹಂತದಲ್ಲಿರಿಸಿದ್ದೇನೆ. ಆದರೆ ನನ್ನ ಈ ಜ್ವರ–

ನನಗೆಂದೂ ಈ ರೀತಿಯಲ್ಲಿ ಬಂದುದಿಲ್ಲ. ಅಷ್ಟೇ ಅಲ್ಲ, ಈ ದೇಹಕ್ಕೂ ಅದರ ಕಲ್ಪನೆಯಿರಲಿಲ್ಲ. ಈಗ ಈ ನನ್ನ ದೇಹ ಪುರುಕು ಮಂಟಪವಾಗತೊಡಗಿದೆ. ಎಲ್ಲ ಕಡೆಗೂ ಬಿರುಕುಗಳು. ಸತ್ರನೆ ಬಿರುಗಾಳಿ ಬಂದು ಈ ಬಿರುಕು ಗೋಡೆ ಯನ್ನು ನೆಲಸಮ ಮಾಡಿ ಬಿಟ್ಟರೆ?"

"'ಸಾಯುವ ಪ್ರಾಣಿಗೆ ಗಿಡಗನ ಕನಸು' ಎನ್ನುವ ಹಾಗೇಕೆ ಮಾಡುತ್ತೀ ಅಣ್ಣಾ! ಅದು ನಮ್ಮ ಮನೋವ್ಯಾಪಾರದ ಹಂತದ ಮೇಲೆ ನಿಂತಿದೆ. ನಾವು ಗಾಜಿನ ತುಂಡನ್ನು ಅದಾವ ಬಣ್ಣದ ಕಣ್ಣುಗಳಿಂದ ನೋಡು ತ್ತೀವೆಯೋ ಅದೇ ಬಣ್ಣ ಅದೂ ಧರಿಸುವದು ಸ್ವಾಭಾವಿಕ; ಅಂತೆಂಥೇ ನೀನೂ ಒಬ್ಬ. ಅಶುಭ ನುಡಿಯನ್ನೇ ನುಡಿಯುತ್ತಿರುವಿ. ನಾವೆಂದೂ ಅಂತಹ ವಿಚಾರ ಗಳನ್ನು ಮಾಡಕೂಡದು. ದೈವವೇ ತಿರುಗಿದ ಮೇಲೆ, ವಿಪರೀತವಾದ ಪ್ರತಿ ಫಲದ ಭೀಭತ್ಸತೆಯನ್ನು ನೆನೆದು, ಭಾವಿಸಿ ಮೂಲೆ ಸೇರುವದರಲ್ಲಿ ಅರ್ಥವಿಲ್ಲ. ಪಂಚಧಾತುಗಳಿಂದ ಕೂಡಿದ ಈ ಭೌತಿಕ ಶರೀರ ಎಂತಹ ನೋವುಗಳನ್ನಾ ದರೂ ಸಹಿಸಿಯೇ ಮತ್ತೆ ತಿರುಗಿ ಅದೇ ದಾರಿಯಲ್ಲಿಯೇ ಮೂಲಕ್ಕೇನೆ ವಿಲೀನ ವಾಗಬೇಕು."

ದೊಡ್ಡ ಗಂಟೆಯ ಸದ್ದು ಕೇಳಿ ಬೆಳಗಿನ ನಾಲ್ಕು ಗಂಟೆಯಾಯಿತೆಂದು ತಿಳಿದು ರವಿ ಎದ್ದನು. ಗೌರಾಳನ್ನು ಎಬ್ಬಿಸಿ, ನೀರೆರೆ ತೊಳೆದು ತಲೆ ಬಾಚಿ ಕೊಳ್ಳುವಂತೆ ಹೇಳಿದನು. ಗೌರಾ ಹೊರಡುವ ತಯಾರಿಯಲ್ಲಿದ್ದಾಗ, ರವಿ ಅವಳನ್ನು ಅಶ್ರುಮಿಶ್ರಿತ ವದನದಿಂದ ಬೀಳ್ಕೊಟ್ಟನು. ನಾನು ಬಸ್ ಸ್ಟೆಂಡಿನ ತನಕ ಅವಳ ಜೊತೆಯಲ್ಲಿಯೇ ಬಂದೆ. ನಾನು ತಿರುಗಿ ಬರುವಾಗ್ಗೆ 'ಜೈತ- ಕೊಲ'ವ ಪ್ರಕಾಶ ನಿಮಿಷಕ್ಕೊಮ್ಮೆ ನಮ್ಮ ಮೇಲೆ ಬೀಳುತ್ತಿತ್ತು.

---

# ೫

“ ಲಚ್ಚಿ.......ಲಕ್ಷ್ಮ್ರರಾಯರ ಮಗಳು. ”

ನಾನು ಬಸ್ ಸ್ಟೆಂಡಿನಿಂದ ಬಂದು ಅವನ ಜೊತೆ ಕುಳಿತಾಗ ಅವನ ಬಾಯಿಯಿಂದ ಹೊರಬಿದ್ದ ಮೂರು ಶಬ್ದಗಳು. ಅಲ್ಲಿಯೇ ನಿಂತುಬಿಟ್ಟಿತು. ಸುಮಾರು ಐದು ನಿಮಿಷದ ನಂತರ ಪುನಃ ಹೇಳಿದನು. ‘ ಲಚ್ಚಿ-ಗೌರಾ ’ ಲಕ್ಷ್ಮಣರಾಯರ ಕಿರಿಯ ಹೆಂಡತಿಯ ಮಕ್ಕಳು; ಇಲ್ಲಿಯೂ ಮಾತು ನಿಂತಿತು. ಸುಮ್ಮನೆ ಕಣ್ಮುಚ್ಚಿ ಸಿಗಾರ ಸೇದತೊಡಗಿದನು.

“ ರವಿ ಹೀಗೇಕೆ ಮಾಡುವೆ ? ” ಎಂದು ನಾನೇ ಅವನನ್ನು ಪ್ರಶ್ನಿಸಿದೆ.

“ ಆಂSS. ”

“ ಏನೇನೋ ಬಡಬಡಿಸುತ್ತಿರುವೆಯಲ್ಲ. ”

“ ಇಲ್ಲ; ಹೇಳುವದಕ್ಕೆ ಶಕ್ತಿ ಸಾಲದು. ಕೊಂಚ ತಾಳು; ನಿಧಾನವಾಗಿ ಹೇಳುತ್ತೇನೆ. ”

ರಾತ್ರಿಯಿಡೀ ನಿದ್ರೆಯಿಲ್ಲದಿದ್ದುದು ನೆನಪಾಯಿತು. ಗೌರಳಿಗೂ ನಿದ್ರೆಯಿರಲಿಲ್ಲ. ನಮಗೂ ನಿದ್ರೆಯಿರಲಿಲ್ಲ. ನಿದ್ದೆಗೆಟ್ಟು ಪ್ರಕೃತಿ ಮತ್ತೆ ಹೆಚ್ಚುಕಡಿಮೆಯಾಗಬಹುದೆಂದು “ ರವಿ, ರಾತ್ರಿಯಿಡೀ ನಿದ್ದೆಗೆಟ್ಟಿರುವಿ, ನಿದ್ದೆ ಮಾಡು. ಮಧ್ಯಾಹ್ನ ಊಟವಾದ ನಂತರ ಮತ್ತೆ ನಿನ್ನ ಕಥೆ ಮುಂದುವರಿಸುವೆಯಂತೆ. ”

“ ನಿದ್ದೆ ಮಾಡಲೆ ? ” ಅದು ತಿರಸ್ಕಾರದ ತುಟಿಗಳಿಂದ ಹೊರಬಿದ್ದ ಮಾತು.

ಮತ್ತೆ ತಾನಾಗಿಯೇ ಮುಂದುವರಿದನು. “ ಬೇಕು, ನಿದ್ದೆ ಬೇಕು. ಗಾಢ ನಿದ್ದೆ ಮಾಡಬೇಕೆನ್ನುವ ಆಶೆ; ಸ್ವಲ್ಪ ದಿನ ಕಳೆಯಲಿ. ”

“ ರವಿ, ಹುಚ್ಚುಚ್ಚಾಗಿ ಮಾತಾಡಬೇಡ. ”

“ ಹೌದು, ಶ್ರೀನಾಥ, ನನಗೆ ಹುಚ್ಚು ಹಿಡಿದಿದೆ. ”

ಮಾತು ಬೇರೆಡೆಗೊಯ್ಯಲೆಂದು ನಾನು ಹೇಳಿದೆ. “ ರವಿ, ಸ್ವಲ್ಪ ಕೆಲಸ ವಿದೆ; ಕೊಂಚ ಹೊರಗೆ ಹೋಗಿ ಬರಲೇ ? ”

"ಬಹಳ ತಡಮಾಡಬೇಡ."

"ಬರುವಾಗ್ಗೆ ಡಾಕ್ಟರನ್ನು ನೋಡಿಯೇ ಬರುತ್ತೇನೆ."

"ಏಕೆ? ವ್ಯಾಧಿಯನ್ನು ತೀವ್ರ ಮಾಡಿಕೊಳ್ಳುವದಕ್ಕಷ್ಟೇ?

"ಹಾಗಾದರೆ ಔಷಧ ತರಲೆ?"

"ಆ ಕಹಿ ಮದ್ದು ಬೇಡವಪ್ಪಾ!"

"ನಿನಗೇಕೆ ಔಷಧ; ನನಗೆಂತ ತರುತ್ತೇನೆ. ನಾನು ಕುಡಿಯುತ್ತೇನೆ; ನಿನಗೆ ಸಿಗರೇಟ ಪಾಕೆಟ ಬಂಡಲ ಒಂದನ್ನು ತರುತ್ತೇನೆ. ಆಗಾಗ್ಗೆ ತರುವ ತೊಂದರೆಯೇಕೆ? ಆಗಬಹುದಷ್ಟೇ?"

"ಆದೀತಯ್ಯ" ಎಂದು ನಕ್ಕುಬಿಟ್ಟನು.

"ಮಲಗಿರು, ಹರಟೆ ಕೊಚ್ಚುತ್ತಿರಬೇಡ."

ರವಿ ಮಾತನಾಡಲಿಲ್ಲ; ಔಷಧಕ್ಕೆಂದು ಸೀಸೆಯನ್ನು ಕೈಚೀಲಕ್ಕೆ ತುರುಕಿಕೊಂಡು ಬಾಗಿಲು ಓರೆಮಾಡಿ ಹೊರಟುಹೋದೆ.

ನಾನು ತಿರುಗಿ ಬಂದಾಗ ಮಧ್ಯಾಹ್ನದ ಹನ್ನೆರಡು ಗಂಟೆಗೂ ಮೀರಿತ್ತು; ಔಷಧ ತಂದಾಗಿತ್ತು. ಆದರೆ ರವಿ ಮಲಗಿಬಿಟ್ಟಿದ್ದನು. ಬರೇ ಗಂಜಿ ಕುಡಿದಿದ್ದಾನಂತೆ. ಅನ್ನ ಹೊಟ್ಟೆಗೆ ತುರುಕಿದರೆ ಅಪಥ್ಯವಾಗುವದೆಂದು ಡಾಕ್ಟರರು ಹೆದರಿಸಿದ್ದರು. ಶೀಲಾ ಹೇಳಿದಳು, ಮಾತಾಡದೆ ಗಂಜಿ ಕುಡಿದು ಸುಮ್ಮನೆ ಮಲಗಿಕೊಂಡಿದ್ದಾರೆ ಎಂದು. ಎಬ್ಬಿಸಿ ಔಷಧ ಕುಡಿಯಲು ಹೇಳೋಣ ಎಂದುಕೊಂಡೆ. ಒಮ್ಮೆ ಬೊಗಳುವ ನಾಯಿಯ ಬಾಯಿಗೆ ಕೋಲು ಕುಕ್ಕಿದಂತಾದರೆ? ಅವನೇನೂ ಹೇಳುವ ಮಾತು ಕೇಳುವವನಲ್ಲ; ನಿದ್ರೆಯಾದರೂ ಸುಸ್ತಾಗಿ ಸಾಗಲಿ ಎಂದು ನಾನು ಸ್ನಾನಕ್ಕೆ ಹೋದೆ.

ತಿರುಗಿ ಸುಮಾರು ನಾಲ್ಕು ಗಂಟೆಗೆ ಎಚ್ಚರವಾದಾಗ ಒಳಗಡೆ ರವಿಯ ಎದ್ದ ಸಪ್ಪಳವಾಗುತ್ತಿತ್ತು. ಅವನ ನಾಲಿಗೆಗೆ ತಿನ್ನುವ ಚಪಲ ಬಂದಂತಿತ್ತು. ಶೀಲಾಳ ಹತ್ತಿರ "ತಿಂಡಿ ಮಾಡಿಟ್ಟೇನಿದೆ? ಬೆಳಿಗ್ಗೆ ಮಾಡಿದ ಚಪಾತಿ ಉಳಿದಿದೆಯೆ? ರಾತ್ರಿ ಅದೇನು ಕರಿದಿದ್ದಿರಿ? ನನಗೆ ವಾಸನೆ ಬರುತ್ತಿತ್ತು. ನನಗೆ ಮಲಗಲು ಹೇಳಿ, ಒಳಗೆ ಬೇಕಾದ ತಿಂಡಿಯನ್ನು ಮಾಡಿಕೊಂಡು ಪಟ್ಟಾಗಿ ಹೊಡೆದಿರೆಂತ ಕಾಣುತ್ತದೆ" ಎನ್ನುತ್ತಿದ್ದ. ಅಷ್ಟರಲ್ಲಿ ನಾನು ಒಳಗಡೆ ಹೋದೆ. ರವಿ ಸುಮ್ಮನಾದ.

" ಏನ್ರಿ, ರಾಯರೆ, ಏನು ನಡೆಸಿದ್ದೀರಿ ? " ಎಂದು ನಾನು ಕೇಳಿದೆ.

ರವಿ ಮಾತಾಡಲಿಲ್ಲ.

" ಔಷಧ ಕುಡಿಯಬೇಕು; ರವಿ. "

" ಅವನ್ನು ನನ್ನಿಂದ ಕುಡಿಯುವದಾಗುವದಿಲ್ಲವಯ್ಯಾ ! "

" ಯಾಕೆ ? "

" ಕುಡಿದ ಕೂಡಲೆ ಗಂಟಲಲ್ಲಿ ಏನೋ ಆಗುತ್ತದೆ. "

" ಅದರ ಜೊತೆಗೆ ತಿಂಡಿಯೇನಾದರೂ ಇದ್ದಿದ್ದರೆ.... ? "

" ಅಂದರೆ ಔಷಧ ಸುರಳೀತ ಕುಡಿಯಬಹುದಿತ್ತು. "

ಅವನ ಕಣ್ಣುಗಳು ನನ್ನನ್ನು ಹೌದೆನ್ನುವಂತೆ ನೋಡುತ್ತಿದ್ದವು; ಅಂತೂ ಅವನ ಹಟ ನೋಡಿ ನನಗೇ ಆಶ್ಚರ್ಯವಾಯಿತು. ರವಿ ಚಿಕ್ಕ ಮಗುವಿನಂತೆ ಮಾಡುತ್ತಿದ್ದ; ಅಂತೂ ಔಷಧ ಕುಡಿದ. ನಂತರ ಸ್ವಲ್ಪ ತಿಂಡಿ ಮತ್ತು ಸ್ವಲ್ಪ ಕಾಫಿ ಇತ್ತೆ. ರವಿ ಚಿಕ್ಕ ಮಗುವಿನಂತೆ ಅದನ್ನು ಒಂದೇ ಗುಟಕಿಗೆ ತಿಂದು ಮುಗಿಸಿದ.

ನಾನು ಒಳಗೆ ಹೋಗಿ ಮತ್ತೆ ತಿರುಗಿ ಬರುವಾಗ್ಗೆ, ರವಿಯು ಬಾಯಲ್ಲಿಯ ಅಗ್ನಿಕುಂಡದ ದಾವಾನಲದ ಧೂಮರಾಶಿಯು ಸುರುಳಿ ಸುರುಳಿಯಾಗಿ ತಾನು ಮುಗಿಲಂಚಿನ ಲೋಕಕ್ಕೆ ಹೋಗುತ್ತಿದ್ದೇನೆ ಎಂದು ಮಂದಮಂದವಾಗಿ ಮೇಲೇರುತ್ತಿರುವಂತೆ ಭಾಸವಾಗುತ್ತಿತ್ತು. ನಾನು ಹಾಗೆಯೇ ನೋಡುತ್ತ ನಿಂತೆ; ರವಿಯ ದೃಷ್ಟಿ ಹೊರಳಲಿಲ್ಲ. ಸಿಗರೇಟ ಮುಗಿಯುತ್ತಿದ್ದರೂ ಬಾಯಲ್ಲಿ ಇನ್ನೂ ಹೊಗೆಯನ್ನು ಪುಸುಗುಡಿಸುತ್ತಲೇ ಇದ್ದನು. ಬೆಂಕಿಯ ಕಾವು ತುಟಿಗೆ ಹತ್ತಿದಾಗ ' ಹಾಳಾಗಿ ಹೋಗಲಿ ಶನಿ ' ಎಂದು ಸಿಗರೇಟ ತುಣುಕನ್ನು ಬಾಯಿಂದ ಕಿತ್ತೊಗೆದ.

" ಇನ್ನೂ ಒಂದು ಸಿಗರೇಟ ಹೊತ್ತಿಸಯ್ಯಾ " ಎಂದೆ.

" ಸ್ವಲ್ಪ ವೇಳೆ ಕಳೆಯಲಿ. "

" ಇನ್ನೇನು ನಿನ್ನ ಪುರಾಣ ಪ್ರಾರಂಭ ಮಾಡುತ್ತೀಯಾ ? "

" ಪೀಠಿಕಾ ಸಂಧಿ ಮುಗಿದಿದೆಯಷ್ಟೇ. "

" ಇನ್ನು ವಂಶಾವಳಿ ಶುರು ಮಾಡಿದರಾಯಿತು. "

" ಅವೇನು ನಮ್ಮ ಕಥಾ ಭಾಗಕ್ಕೆ ಅಷ್ಟು ಮಹತ್ವದಾದುದಲ್ಲ. "

“ ಇದೆಲ್ಲವನ್ನೂ ಸೇರಿಸಿ ಒಂದು ಕಾದಂಬರಿಯನ್ನೇ ಬರೆಯಬೇಕಾಗಿತ್ತು ನೀನು. ”

“ ನನ್ನಿಂದ ಅದನ್ನು ಬರೆಯಲು ಸಾಧ್ಯವಿಲ್ಲ. ನಾನು ಹೇಳಿದ್ದನ್ನೆಲ್ಲ ಸೇರಿಸಿ ನೀನೇ ಒಂದು ಕಾದಂಬರಿಯನ್ನು ಬರೆದುಬಿಟ್ಟರೆ ಒಂದು ‘ ಆಥರ್-ಷಿಪ್ ’ ಆದರೂ ದೊರೆಯುತ್ತಿತ್ತು. ”

“ ಮೊದಲೇ ಗ್ರ್ಯಾಜುಯೇಟ್ ನೀನು ; ಅದರ ಜೊತೆಗೆ ‘ ಕಾದಂಬರಿ ಕಾರ ’ ಎನ್ನುವ ಬಿರುದೂ ದೊರೆಯುತ್ತಿತ್ತು. ನಾಲ್ಕು ಜನ ಕರೆದು, ‘ ಅಮೋಘ ಸಾಹಿತಿಗಳು ’ ಎಂದು ಖುರ್ಚಿಯ ಮೇಲೆ ಕೂಡ್ರಿಸುತ್ತಿದ್ದರು. ಸ್ಟೇಜಿನ ಮೇಲೆ ನಿಲ್ಲಿಸಿ ನಿನ್ನಿಂದ ಭಾಷಣ ಮಾಡಿಸುತ್ತಿದ್ದರು. ಇದನ್ನೇ ನೀನು ಮುಂದುವರಿಸಿದರೂ ‘ ಪಾರ್ಟಟೈಮು ’ ವರ್ಕ ಆಗಿ ವೃತ್ತಪತ್ರಗಳ ಮುಖಪುಟಗಳಲ್ಲೆಲ್ಲ ‘ ಕಾದಂಬರಿಕಾರ ಶ್ರೀನಾಥರಾಯ ’ ಎಂಬ ಹೆಸರೂ ಬರುತ್ತಿತ್ತು. ”

“ ಚೆನ್ನಾಗಿದೆ ನಿನ್ನ ಮಾತುಗಾರಿಕೆ; ಎಲ್ಲ ಕಾದಂಬರಿ ಪ್ರಪಂಚದ ಗಾಳಿಗೋಪುರದ ಮೇಲೆ ಬಾರಿಸುವ ಶಂಖವಾದ್ಯಗಳೆ? ನೀನು ಭಾವಜೀವಿ ಯಾಗಿಯೇ ಕೆಟ್ಟೆ. ಅದಕ್ಕೂ ಅಥವಾ ಅಂಥ ಭಾಗ್ಯ ಪಡೆಯುವದಕ್ಕೂ ಹಿಂದಿನ ಜನ್ಮದಿಂದ ಪಡೆದು ಬಂದ ಪುಣ್ಯವಿರಬೇಕು. ನಮ್ಮನೆ ನಾವು ನಮ್ಮಷ್ಟಕ್ಕೆ ಕಲ್ಪನಾರಾಜ್ಯದ ಸಿರಿಸಾಮ್ರಾಜ್ಯದಲ್ಲಿ ಲೋಲಾಡುತ್ತಿದ್ದರೆ ಡ್ರಾಮಾ ಕಸಿ ( Dramacasy ) ವಾದದ ಪರಿಸ್ಥಿತಿಯಲ್ಲಿ ನಿನ್ನಂತಹರ ಪಡೆಬರಹ ಏನಾಗಬೇಡ? ಇನ್ನಾದರೂ ಹಟ-ಛಲವನ್ನು ಬಿಟ್ಟುಬಿಡು ; ನೀನೂ ಸುಖ ವನ್ನುಣ್ಣಲಿಲ್ಲ; ನಿನ್ನ ಕೈ ಹಿಡಿದವರಿಗೂ ದುಃಖದಲ್ಲಿ ದೂಡಿದಿ. ಅದೂ ನಮ್ಮ ಕಾಲಮೇಲೆ ನಾವೇ ಕಲ್ಲು ಹೊತ್ತು ಹಾಕಿಕೊಂಡಂತೆ ; ಯಾವದಕ್ಕೂ ವಿಚಾರ ಬೇಕು. ”

ರವಿ ನಕ್ಕುಬಿಟ್ಟ.

“ ಶ್ರೀನಾಥ, ಛಲ-ಹಟಗಳ ಸಾಧನಗಳಲ್ಲೇ ನನ್ನ ಕಾಲ ಮುಗಿಯುತ್ತ ಬಂತು; ಇನ್ನು ಅದನ್ನು ಬಿಟ್ಟಾದರೂ ನಾನೇನು ಮಾಡಲಿ ? ”

“ ರವಿ, ಜೀವನದಲ್ಲಿ ಮನುಷ್ಯ ಎಂದೂ ನಿರಾಶವಾದಿಯಾಗಬಾರದು.”

" ಅದು ನಿನ್ನ ದೃಷ್ಟಿಯಲ್ಲಿ; ನಿನ್ನಂತೆಯೇ ಕಣ್ಣು, ಮೂಗು, ಮೋರೆ ನನಗಿದೆಯೆ? ಹಾಗಿರುವಾಗ ನಿನ್ನಂತೆಯೇ ನನಗೂ ಅದೇ ಆಲೋಚನೆ ಬರಬೇಕೆಂದು ನೀನು ಹಟ ಹಿಡಿದರೆ ಅದು ಎಂದಾದರೂ ನೀರಿಗೆ ಬರುವ ಮಾತೆ ? "

" ಸಾಕು ಮಾಡು; ಇನ್ನು ನಿನ್ನ ಹತ್ತಿರ ಮಾತಿಗೆ ನಿಲ್ಲುವದಿಲ್ಲ. ಯಾರಾದರೂ ನಿನ್ನ ಹತ್ತಿರ ಜಿದ್ದು ಕಟ್ಟಿದರೆ ಅವರ ಸರ್ವನಾಶಮಾಡಿಬಿಟ್ಟೀಯೆ ನೀನು! ನಾವಿನ್ನು ಯಾವುದಕ್ಕೂ ಕಚ್ಚಾಡುವದು ಬೇಡ; ನಾವು ಮಾತಿನಲ್ಲೇ ಹೊತ್ತು ಕಳೆದೆವು. ನೀನಿನ್ನೂ ಔಷಧ ಕುಡಿಯಲಿಲ್ಲವಲ್ಲ ? "

ಮತ್ತೆ ನನ್ನ ಒತ್ತಾಯಕ್ಕಾಗಿ ರವಿ ಔಷಧ ಕುಡಿದು ಮತ್ತೆ ತನ್ನ ಕತೆ ಮುಂದುವರಿಸತೊಡಗಿದ.

" ನೋಡು ಶ್ರೀನಾಥ, ನಾನೊಮ್ಮೆ ಒಬ್ಬ ಮನುಷ್ಯನನ್ನು ಸಿರ್ಸಿಯಲ್ಲಿ ಕಂಡಿದ್ದೆನೆಂದು ಹೇಳಿದೆನಲ್ಲ. ಮರುವರುಷ ನನ್ನ ಮೆಟ್ರಿಕ್ ಪರೀಕ್ಷೆಯಾಗಿತ್ತು. ಪರೀಕ್ಷೆಯ ನಂತರ ನಾನು ಕಾರವಾರಕ್ಕೆ ಬಂದಿದ್ದೆ ; ಅಲ್ಲಿ ನನ್ನ ದೂರದ ಕಕ್ಕ ಇದ್ದರು. ಹನುಮಪ್ಪನ ಗುಡಿಯ ಹಿಂಬದಿಗೊಂದು ಚಿಕ್ಕ ಕಿರಿದಾದ ಮಾರ್ಗ ಹಾದು, ಗುಡ್ಡದ ಗುಂಟ ಓಡುತ್ತಿದೆಯಲ್ಲವೆ ? ಮಾರ್ಗ ಮುಗಿಯುವಲ್ಲಿಯೇ ಅವರ ಮನೆ. ಇಲ್ಲಿಯೇ ವಕೀಲರೊಬ್ಬರ ಗುಮಾಸ್ತೆಯಾಗಿ ಹೇಗೋ ಅವರು ಜೀವನ ಸಾಗಿಸುತ್ತಿದ್ದರು. ಸರಳ ಸ್ವಭಾವದ ಜೀವವದು. ಏನೋ ದೂರದ ಕಕ್ಕ ಎಂದು ನಾನುಳಿದ ಮನೆಯವರು ಹೇಳಿದ್ದರು. ಇದೇ ಕಕ್ಕನೆ ಮೊದಲು ಮೂರು ನಾಲ್ಕು ಸಲ ನನ್ನೊಡನೆ ಭೆಟ್ಟಿಯಾದಾಗ ಆಸ್ಥೆಯಿಂದ ಮಾತಾಡಿ ' ರಜಾಕ್ಕೆ ನಮ್ಮಲ್ಲಿಗೆ ಬಂದುಬಿಡು ಮಗು ' ಅನ್ನುತ್ತಿದ್ದರು. ಅವರು ಬಂದುಬಿಡು ಅಂದುದಕ್ಕೆ ನಾನು ಹೋದುದಲ್ಲ. ಮುಖ್ಯತಃ ಕಾರವಾರ ವನ್ನು ನಾನು ನೋಡಬೇಕಾಗಿತ್ತು. ನೋಡದ ಊರನ್ನು ನೋಡಲು ಎಳೆಯ ವಯಸ್ಸಿನಲ್ಲಿ ಮನಸ್ಸು ತುಂಬ ತವಕಪಡುತ್ತಿದೆಯಲ್ಲವೆ ? ಅದಕ್ಕಾಗಿಯೇ ಹೋಗಿದ್ದೆ.

" ನನ್ನ ಮನೆಯ ಇತಿಹಾಸ ನಿನಗೆ ಸರಿಯಾಗಿ ಹೇಳಲಿಲ್ಲ. ತಂದೆ-ತಾಯಿಗಳು ಇದ್ದಾರೆಯೆ ? ಎಂದು ಕೇಳಿದರೆ ಇಲ್ಲವೆಂದೂ ಹೇಳಲು ಸಾಧ್ಯವಿಲ್ಲ. ತಂದೆ-ತಾಯಿಗಳಿಲ್ಲದೆಯೆ ಮಗುವೊಂದು ತಾನಾಗಿಯೇ ಭೂಮಿಗೆ

ಬರುವದೆ? ಅವರು ಯಾರು ಎಂದು ಕೇಳಿದರೆ ಅವರು ಇಂಥವರೇ ಎನ್ನುವ ಧೈರ್ಯ ನನಗಿಲ್ಲ; ನಾನು ಮಗುವಿದ್ದಾಗ ನನ್ನ ತಂದೆ-ತಾಯಿಗಳು ನನ್ನನ್ನು ತಮ್ಮ ಭಾಗ್ಯವೆಂದು ಎತ್ತಿ ಮುದ್ದಾಡಿಸಿರಬಹುದು. ಆದರೆ ನನಗೆ ಭಾಗ್ಯ ಬರುವ ಕಾಲಕ್ಕೆ ಅದನ್ನು ನೋಡುವ ಭಾಗ್ಯ ಅವರ ಹಣೆಯಲ್ಲಿ ಬರೆದಿಲ್ಲವೆಂದು ಕಾಣುತ್ತದೆ. ಒಟ್ಟಿಗೆ ನಾನು ಹುಟ್ಟು ನಿರ್ಭಾಗ್ಯ! ನನಗೆ ಒಂಬತ್ತು ತಿಂಗಳು ಆಗುವದರೊಳಗೆ ತಂದೆ-ತಾಯಿಗಳನ್ನು ನೀಗಿಕೊಂಡೆ, ನಾನು ಹುಟ್ಟಿದ ದಶೆ ಯಾವದೂ ನೋಡು. ನಂತರ ಆರು ವರುಷಗಳ ತನಕ ನಾನು ಅಜ್ಜಿಯ ಅಕ್ಕರೆಯ ಆರೈಕೆಯಲ್ಲಿ ಬೆಳೆದೆ. ಅಜ್ಜಿಯ ಆಸರೆಯನ್ನು ನನಗೆ ಕೊಡಕೂಡದೆಂದು ವಿಧಿ ಒಳಸಂಚು ಮಾಡಿರಬೇಕು. ಅಂತೂ ನಾನು ಆರು ವರುಷದವನಿದ್ದಾಗ ಆ ನಿಷ್ಕರುಣಿ ಯಮ ನನ್ನ ಅಜ್ಜಿಯನ್ನು ನನ್ನಿಂದ ಕಸಿದುಕೊಂಡ.

“ಅಜ್ಜಿ ನನ್ನನ್ನು ಸಾಕಿದ್ದು, ಒಬ್ಬ ಶ್ರೀಮಂತನ ಮನೆಯಲ್ಲಿ ಮುಸುರೆ ಪಾತ್ರೆಗಳನ್ನು ತಿಕ್ಕಿ, ಹಳಸಿದ ಅನ್ನವನ್ನು ಉಣ್ಣಿಸಿ. ತಂದ ಅನ್ನದ ಬಹುಭಾಗವನ್ನು, ಕೆಲವು ವೇಳೆ ಎಲ್ಲವನ್ನೂ ನಾನೇ ಉಣ್ಣುತ್ತಿದ್ದೆನೇನೋ! ಆಗೆಲ್ಲ ಅಜ್ಜಿ ಖಾಲಿ ಹೊಟ್ಟೆಗೆ ತಣ್ಣೀರನ್ನು ಸುರಿದುಕೊಂಡು ನಾಳೆ ಬರುವ ಹಳಸಿದ ಅನ್ನಕ್ಕಾಗಿ ಕಾಯುತ್ತಿದ್ದಳೇನೋ! ನೋಡು, ಹೆತ್ತ ಕರುಳು ಅದೆಂತಹ ನೋವನ್ನು ದಾರುಣ ಕಷ್ಟವನ್ನು ತನ್ನ ಕರುಳ ಬಳ್ಳಿಯನ್ನು. ಬೆಳೆಸುವದಕ್ಕಾಗಿ ಪಡೆಯುತ್ತಿದೆ—ಅನುಭವಿಸುತ್ತಿದೆ, ಅದೆಲ್ಲ ನೆನೆಯುವಾಗ್ಗೆ. ಶ್ರೀನಾಥ, ನನ್ನ ತಾಯಿ-ತಂದೆಗಳೇ ನನ್ನನ್ನು ಹುಟ್ಟಿಸಿ ಘೋರ ಅಪರಾಧವನ್ನು ಮಾಡಿದ್ದಾರೆ.

“ಎಲ್ಲರೂ ತೇಲಿ ಕೈಬಿಟ್ಟ ಮೇಲೆ, ನನ್ನ ಬೆನ್ನಿಗೆ ಬಂದವರು ಯಾರು ಇಲ್ಲದ ಮೇಲೆ ನನ್ನ ಗತಿಯೇನಾಗಬೇಕು? ತಿಪ್ಪೆ ಬಳಿಯುವದೊಂದೇ ಬಾಕಿಯಿತ್ತು. ಅದೂ ಸುದೈವವೆ. ನನ್ನ ಅಜ್ಜಿ ಕೆಲಸಕ್ಕೆ ಹೋಗುತ್ತಿದ್ದ ಮನೆಯವರೂ ಬಾದರಾಯಣನ ಕಾಲಕ್ಕೆ ನಮ್ಮ ವಂಶಕ್ಕೆ ಸೇರಿದವರಾಗಿದ್ದರಂತೆ. ಮೂಲಕ್ಕೇನೂ ಹೆಚ್ಚುಕಡಿಮೆ ಇಲ್ಲದಿದ್ದರೂ ಈಗವರು ಶ್ರೀಮಂತ ವಂಶಕ್ಕೆ ಸೇರಿದವರು. ನಾವು ತಿರುಪೆಯ ಬಳಗದ ಹತ್ತಿರದವರು. ಇಷ್ಟೇ ವೈಶಿಷ್ಟ್ಯ! ಆದರೆ ಅವರ ಮನೆಯವರಿಗೆ ಏನು ಕರುಣೆ ಬಂತೊ? ಬೀದಿ ಬೀದಿ ಅಲೆಯುತ್ತಿದ್ದ ನನ್ನನ್ನು ಹುಡುಕಿಸಿ ನನ್ನನ್ನು ತಮ್ಮ ಮನೆಯಲ್ಲಿಟ್ಟುಕೊಂಡರು. ಆಗವರ

ಯೋಚನೆ ನಾಲ್ಕು ಕಾಳಕ್ಷರ ಕಲಿಸಿ, ತಮ್ಮ ಮನೆಯಲ್ಲಿಯೇ ಕೆಲಸಕ್ಕೆ ಇಟ್ಟು ಕೊಳ್ಳಬೇಕೆಂದು. ಅವರ ಮನೆಯ ಮಕ್ಕಳ ಜಂಭ ನೋಡಬೇಕು! ಅವರ ಪಾಟಿ-ಪುಸ್ತಕಗಳನ್ನು ಹೊತ್ತು ನಾನು ಅವರನ್ನು ಶಾಲೆಗೆ ಕರೆದೊಯ್ದು ಮತ್ತೆ ಕರೆದು ತರಬೇಕು. ಮನೆಯಲ್ಲೇನಾದರೂ ಕಿರುಕುಳ ಕೆಲಸವಿದ್ದರೆ ಅದನ್ನು ಮಾಡಬೇಕಾಗುತ್ತಿತ್ತು. ಅಲ್ಲಿಯೇ ನನಗಿಂತ ಒಂದು ವರ್ಷ ಚಿಕ್ಕ 'ಮಾಲಾ' ಎನ್ನುವ ಹುಡುಗಿಯಿದ್ದಳು. ಅವಳ ದರ್ಪ ನೋಡಬೇಕು; ಅವಳ ಆರ್ಡರ ಕೊಡುವ ರೀತಿ ನೋಡಬೇಕು. ಅವಳು ರಾತ್ರಿ ಓದುವಾಗಲೆಲ್ಲ ನಾನವಳಿಗೆ ಪುಸ್ತಕ ಒಯ್ದು ಕೊಡಬೇಕು. ಸುಖೀಪ್ರಾಣಿಯೆಂದು ಮನಸ್ಸಿನಲ್ಲಿಯೇ ಅಂದುಕೊಂಡಿದ್ದೆ.

"ನಾನು ಇಂಗ್ಲೀಷ ಶಾಲೆಗೆ ಹೋಗಬೇಕೆಂದು ಹಟ ಹಿಡಿದಾಗ ಅವರ ಮನೆಯವರು ತುಂಬಾ ದಿಗಿಲುಬಿದ್ದರು. ಆದರೆ ಹೆಣ್ಣುಮಕ್ಕಳಿರುವ ತಾಯಂದಿರು ಗಂಡಿನ ವಿಷಯದಲ್ಲಿ ಬಹುರೂಪ ದೂರದರ್ಶಿತ್ವವನ್ನು ಉಪಯೋಗಿಸುತ್ತಾರೆ. ಅಂತೆಯೇ ಹುಡುಗ ಇಂಗ್ಲೀಷ ಕಲಿಯುವುದಾದರೆ ಕಲಿತುಕೊಳ್ಳಲಿ ಎಂದು ಆ ಹುಡುಗಿಯ ತಾಯಿಯು ಅಂದುದರಿಂದ, ನನ್ನ ಇಂಗ್ಲಿಷ ಶಾಲೆಯ ದಿನಗಳು ದುರ್ಗಮವಾಗಿದ್ದರೂ ಸುಗಮವಾದುವೆನ್ನಬಹುದು. ಹಾಯಸ್ಕೂಲ ದಿನಗಳಲ್ಲಿ ಆ ಹುಡುಗಿ ಮಾಲಾಳ ದರ್ಪ ಇನ್ನೂ ಹೆಚ್ಚಾಯಿತು. ಗಂಡು ಹುಡುಗರಂತೆ ಗುಡುಗಿನ ಆರ್ಡರ ಅವಳಿಂದ ಬರತೊಡಗಿದವು. ಒಮ್ಮೆ ಕ್ಲಾಸಿನಲ್ಲಿಯೇ ನಾನೊಂದು ಪುಸ್ತಕ ತರದ ತಪ್ಪಿಗಾಗಿ 'ಯಾಕೆ ತಲೆ ಕೆಟ್ಟಿದೆಯೆ?' ಎಂದಳು. 'ನನಗಲ್ಲ, ನಿನಗೆ' ಎಂದೆ. ನನ್ನ ಕಪಾಳಕ್ಕೆ ಏಟು ಬಿಗಿದಳು. ನನಗೆ ಬದುಕಿಯೂ ಸತ್ತ ಅನುಭವವಾಯಿತು. ಎರಡು ದಿನ ನಾನು ಊಟ ಮಾಡಲೇ ಇಲ್ಲ; ಮುಂದವಳು ನನ್ನೊಡನೆ ಮಾತಾಡಲಿಲ್ಲ. ನಾನು ಅವಳ ಮೋರೆಯನ್ನು ನೋಡಲಿಲ್ಲ.

"ನನ್ನ ಕಾಲೇಜ ದಿನಗಳು ಹೇಗೆ ಕಳೆದವೆಂದು ನಿನಗೆ ಗೊತ್ತಿದೆಯಲ್ಲ. ಅದಕ್ಕೂ ಮೊದಲೊಮ್ಮೆ ಒಂದು ಸಣ್ಣ ವಿಷಯಕ್ಕಾಗಿ ಅವರು ನನ್ನನ್ನು ತುಚ್ಛೀಕರಿಸಿದ್ದರಿಂದ ನಾನವರ ಮನೆಗೆ ಪುನಃ ಕಾಲಿಡಲಿಲ್ಲ. ಮೆಟ್ರಿಕ್ ಆದ ನಂತರ ನನ್ನ ವಾಸ್ತವಿಕ ಸಂಬಂಧ ಲಕ್ಷ್ಮಣರಾಯರ ಮನೆಯಲ್ಲಿ ದಿನದಿನಕ್ಕೂ ಬೆಳೆಯುತ್ತಿತ್ತು; ಅದರ ರೀತಿಯೇ ಬೇರೆ.

" ನಾನು ಇಂಟರ ಮುಗಿಸಿದಾಗ ಆ ಸಾಹುಕಾರರು ನನಗೆ ಪತ್ರ ಬರೆದು ಕರೆಸಿದ್ದರು, ಹೋಗಿದ್ದೆ. ಒಳ್ಳೇ ಆದರದಿಂದ ನೋಡಿಕೊಂಡರು. ಅಂದೇ ನಾನು ಸಾಹುಕಾರರ ಹಿರಿಯ ಮಗನ ರೂಮೆಂದು ಭಾವಿಸಿ ಮಾಲಾಳ ರೂಮಿಗೆ ಹೋಗಿದ್ದೆ; ನನ್ನ ತಪ್ಪಿಗೆ ನಾನೇ ಏಟು ತಿಂದಿದ್ದೆ.

" ಮಾಲಾ ಚೆನ್ನಾಗಿಯೇ ಆದರಿಸಿದಳು. ಆದರೆ ನಾನವಳ ಹತ್ತರ ಮಾತಾಡಲಿಲ್ಲ. ಅಲ್ಲಿಗೆ ಸುಮಾರು ಮೂರು ವರುಷಗಳಷ್ಟು ಕಳೆದಿತ್ತು. ಹಿಂದಿನದು ಮರೆತಿರಬೇಕೆಂದು ಅವಳು ತಿಳಿದಿರಬಹುದು; ಆದರದು ನನಗೆ ಮರೆತಿರಲಿಲ್ಲ. ಮಾತನಾಡದೇ ಹಿಂತಿರುಗಬೇಕೆಂದುಕೊಂಡೆ; ಆದರೆ ಅದು ಅಸಭ್ಯ ವರ್ತನೆ, ಮಾತಾಡಿದರೆ ನನ್ನ ಗಂಟೇನು ಹೋಗುವದು ಎಂದುಕೊಂಡೆ.

' ಇದು ತಮ್ಮ ರೂಮೆ ? '

' ನಿಮಗೆ ಗೊತ್ತಿರಲಿಕ್ಕಿಲ್ಲ, ಅಲ್ಲವೆ ? '

' ನಾನು ಇದು ನಿಮ್ಮಣ್ಣನ ರೂಮೆಂದು ಭಾವಿಸಿದೆ. '

' ಬಂದರೇನು, ತಪ್ಪಾಗಲಿಲ್ಲವಲ್ಲ. ಏನು, ನನ್ನ ರೂಮಿಗೆ ಬರಬಾರದೆ ? '

' ಅಂತಹದೇನಿಲ್ಲ. '

" ಎನ್ನುತ್ತ ಅವಳನ್ನೊಮ್ಮೆ ನೋಡಿದೆ; ಬೆಳೆದು ಹಿಗ್ಗಿಬಿಟ್ಟಿದ್ದಾಳೆ. ತಾರುಣ್ಯದ ಹೊಸ್ತಿಲನ್ನು ದಾಟಿದ ಹುಡುಗಿ ಎಂದು ನಮ್ಮ ಭಾಷೆಯಲ್ಲಿ ಹೇಳಬಹುದು.

' ಕುಳಿತುಕೊಳ್ಳುವದಿಲ್ಲವೆ ? '

" ನಾನು ಮಾತನಾಡದೆ ಸುಮ್ಮನೆ ಕುಳಿತುಕೊಂಡೆ. ಅವಳು ಸರಕ್ಕನೆ ಒಳಗೆ ಹೋಗಿ ಚಹ ತಂದು ಕೊಟ್ಟಳು. ನಾನು ಚಹ ಕುಡಿದ ನಂತರ ಮತ್ತೆ ಕೇಳಿದಳು :

' ಇನ್ನೆಷ್ಟು ದಿನ ಉಳಿಯುತ್ತೀರಿ ? '

' ಇಲ್ಲ; ನಾಳೆಗೇನೇ ಹೋಗಬೇಕು. ತಮ್ಮ ತಂದೆಯವರು ಬರಲು ಪತ್ರ ಬರೆದಿದ್ದರು; ಆದಕ್ಕಾಗಿಯೇ ಬಂದೆ. '

' ನಾಲ್ಕು ದಿನ ಉಳಿಯುವದಿಲ್ಲವೆ ? '

' ಇಲ್ಲ; ನಾಳೆಗೇ ಹೋಗಬೇಕು.

'ಅಂತಹ ಅವಸರವೇನು ?'

'ನಿಮಗದನ್ನು ಕೇಳುವ ಅಗತ್ಯವೇನು ?'

"ಅವಳ ಮೋರೆ ಪೆಚ್ಚಾಯಿತು; ಮತ್ತೆ ಹೆಚ್ಚಿಗೇನೂ ಮಾತಾಡಲಿಲ್ಲ. ಹೊರಡುತ್ತೇನೆಂದು ಹೇಳಿದೆ; ಮತ್ತೆ ನಾಲ್ಕಾರು ದಿನ ಉಳಿಯಲು ಒತ್ತಾಯ ಪಡಿಸಿದಳು. ಆದರೆ ನಾನು ಮರುಮಾತನಾಡದೇ ಅಲ್ಲಿಂದ ಕಾಲುಕಿತ್ತೆ.

"ರಾತ್ರಿ ಮದುವೆಯ ವಿಷಯ ಬಂತು; ಒಂದೇ ಮಾತಿನಲ್ಲಿಯೇ ಮುಗಿಸಿಬಿಟ್ಟೆ. ಮದುವೆಯಾಗಲಿಕ್ಕೆ ಅಡ್ಡಿಯಿಲ್ಲ; ಆದರೆ ನನಗಿದು ಮದುವೆಯಾಗುವ ವಯಸ್ಸೂ ಅಲ್ಲ, ಮತ್ತು ಮಾಲಾಳನ್ನು ಎಷ್ಟು ಮಾತ್ರಕ್ಕೂ ಮದುವೆಯಾಗಲು ಸಾಧ್ಯವಿಲ್ಲ. ಯಾಕೆ ಎಂದು ಕೇಳಿದ್ದಕ್ಕೆ ನನಗೆ ಒಪ್ಪಿಗೆಯಿಲ್ಲ ಎಂದುಬಿಟ್ಟೆ; ಬೆಳಿಗ್ಗೆ ಸಪ್ಪೆ ಮೋರೆಯಿಂದ ಅವರಿಂದ ಬೀಳ್ಕೊಂಡೆ.

"ಮತ್ತೆ ಇಂದಿನವರೆಗೂ ಅವರ ಮನೆಗೆ ಕಾಲಿಡಲಿಲ್ಲ. ಶ್ರೀನಾಥ, ಬದುಕೆಂದರಿಷ್ಟೆ! ಯಾವ ಕೋಳಿ ಕೂಗಿದರೇನು, ಬೆಳಗಾದುದೇ ಗೊತ್ತು— ಎನ್ನುವ ತತ್ವದವನು ನಾನಾಗಿದ್ದೆ; ನಿಜವಾಗಿಯೂ ಇತ್ತು. ದಾರಿಯುದ್ದಕ್ಕೂ ನೀರಸ. ಅದನ್ನು ನೆನೆದಾಗಲೆಲ್ಲ ನನ್ನ ಬದುಕಿಗೇ ಹೇಸಿಕೆಯಾಗುತ್ತಿತ್ತು.

"ಇನ್ನು ಮುಂದಿನ ದಿನಗಳಲ್ಲಿ ಲಕ್ಷ್ಮಣರಾಯರು ನನ್ನ ಜೀವನಕ್ಕೆ ಬೇಕು ಬೇಕಾದವರಲ್ಲಿ ಹಿರಿಯರು. ಅವರ ಮನೆ ಕಾರವಾರದಲ್ಲಿ ನಮ್ಮ ಅಕ್ಕನ ಮನೆಯೊತ್ತಿಗೇ ಇತ್ತು; ನಾನು ಮೊದಲನೇ ಸಾರೆ ಬಂದಾಗ ಕಾರವಾರದ ಗತಿ ದಿಕ್ಕುಗಳನ್ನು ಗೊತ್ತುಮಾಡುವವರಲ್ಲೇ ಕಳೆದುಬಿಟ್ಟೆನು.

"ಕಾರವಾರ, ಸಮುದ್ರದಂಚಿಗೆ ನೆಲಸಿದ್ದ ನಾಲ್ಕು ಬಲೆ ಬೀಸುವ ಅಂಬಿಗರ ಕೇರಿಯಾಗಿರಬೇಕು. ಕಡವಾಡ ಅದಕ್ಕೆ ಹೊಂದಿಯೇ ನಾಲ್ಕೈದು ಮೈಲು ಅಂತರದಲ್ಲಿ ನೆಲೆಸಿರುವ ಚಿಕ್ಕ ಊರು. ಅಲ್ಲಿ ಇಂಗ್ಲಿಷರ ಸಾಮಾನುಗಳ ಗುದಾಮು ಇತ್ತು. ಅದೇ ಕಡವಾಡವೇ ಇಂಗ್ಲಿಷರ ಬಾಯಿಂದ ಕಾರವಾರವೆಂದು ಬದಲಾಯಿತು. ಸೊಗಸಾದ ಹವೆ, ನಾಲ್ಕು ದಿಕ್ಕಿಗೂ ಗುಡ್ಡಗಳು. ದಕ್ಷಿಣ ದಿಕ್ಕಿಗೆ ಗುಡ್ಡದಂಚಿನಲ್ಲಿಯೆ ಓಡುತ್ತಿರುವ ಮಾರ್ಗವೇ ಅದರ ಸಂಬಂಧವನ್ನು ಇನ್ನುಳಿದ ಜಿಲ್ಲೆಗಳೊಡನೆ ಇಟ್ಟಿದೆ. ದಕ್ಷಿಣ ದಿಕ್ಕಿನ ಗುಡ್ಡದ ಮೇಲಿರುವ ಕಲೆಕ್ಟರ, ಡಿಸ್ಟ್ರಿಕ್ಟ ಜಡ್ಜರ ವಾಸಸ್ಥಾನಗಳು ಎಷ್ಟು ಚೆನ್ನು. ಜನರ ರಕ್ತದ

ದುದ್ದಿನಿಂದ ಈ ಎರಡೂ ಗೃಹಗಳಿಗೆ ಹೋಗುವದಕ್ಕೆ ಗುಡ್ಡವನ್ನೇ ಸುತ್ತಿ ಓಡುತ್ತಿರುವ ಟಾರ ಕೊಂಕ್ರೀಟ ರೋಡ ಇದೆ. ಸರಕಾರ ಇಂಥ ಎರಡು ವ್ಯಕ್ತಿಗಳ ಬಗ್ಗೆ ಇಷ್ಟು ಚೆಂದಾದ ರಸ್ತೆ ಮಾಡಿಸಿದ್ದರೆ, ಸಾರ್ವಜನಿಕ ರಸ್ತೆಯಲ್ಲಿ ಒಂದು ಪೂಲು ಮುರಿದರೆ ಅದು ಪುನಃ ದುರಸ್ತಿ ಕಾಣುವದಕ್ಕೆ ಎಷ್ಟೋ ಕಾಲ ಬೇಕು! ಇದು ಪ್ರಜಾಪ್ರಭುತ್ವ! ಆ ಮಾರ್ಗವನ್ನು ಪ್ರತಿನಿತ್ಯ ಗುಡಿಸಬೇಕು. ಈ ದೊರೆರಾಯರಿಗೆ ಅಂಜಿ ಅಲ್ಲಿಯ ಮುಳ್ಳುಗಿಡಗಳೂ ತಮ್ಮ ಎಲೆಯನ್ನು ಉದುರಿಸುವದಿಲ್ಲವಂತೆ.

"ಈ ಗುಡ್ಡಕ್ಕೆ ಇನ್ನೊಂದು ರೀತಿಯಲ್ಲಿಯೂ ಮಹತ್ವವಿದೆ. ಮುಂಬಯಿ, ಪ್ಯಾರಿಸ್, ಲಂಡನಗಳಲ್ಲಿರುವ ಹೈಡಿಂಗ ಪಾರ್ಕಿನ ಹೆಸರು ಕೇಳಿದ್ದೀರಾ? ಅಂತಹ ಪಾರ್ಕುಗಳಲ್ಲಿ, ಪ್ರೇಮಿಗಳಿಗೆ ಎಳೆಯ ಯುವಕ-ಯುವತಿಯರಿಗೆ ಮಾತ್ರ ಪ್ರವೇಶ. ಅಲ್ಲಿ ತರುಣ-ತರುಣಿಯರು ಕೈಹಿಡಿದು ನಡೆಯುತ್ತಿದ್ದರೆ ನಾವು ನಗಕೂಡದು; ಅವರನ್ನು ನೋಡಕೂಡದು. ಬೆಳೆದ ಹೆಣ್ಣು-ಗಂಡುಗಳು ಪರಸ್ಪರ ಸಾನಿಧ್ಯ ಬಯಸುವದು ದೇಹಸುಖವನ್ನು ಉಣ್ಣುವದಕ್ಕಲ್ಲವೆ? ದೇಹಸುಖದಿಂದ ಹೊಟ್ಟೆ ತುಂಬುವದಿಲ್ಲ. ಆದರೆ ದಾಹ ಕಡಿಮೆಯಾಗುತ್ತದೆ. ಮನಸ್ಸಿನಲ್ಲಿ ನೆಮ್ಮದಿ ಮೂಡುತ್ತದೆ. ಇಲ್ಲಿ ಪರಿಚಿತ ಹೆಣ್ಣು-ಗಂಡುಗಳು ವಾತಾವರಣದ ಪ್ರಭಾವದಿಂದಲೋ ಏನೋ ಒಬ್ಬರನ್ನೊಬ್ಬರು, ಕಣ್ಣ್ಕಣ್ಣರಂತೆ ನೋಡಿ, ಮೋರೆ ಮುಚ್ಚಿ ಮುಗುಳು ನಗೆ ನಕ್ಕು ಅತ್ತಿತ್ತ ಸನಿಹದಲ್ಲಿ ಸುಳಿದು, ಕಾಡು ಹೂವುಗಳನ್ನು ಮೂಸಿ, ತಳಿರು ಹರಿದು 'ತುಮಸೆ ಮುಜಕೊ ಪ್ರೇಮ ಸಿಖಾಯಾ' ಎನ್ನುವ ಹಾಡು ಹಾಡಿ, ಹಿಂತಿರುಗುವಾಗ 'ನಾಳೆಯೂ ಬರೋಣ?' ಎಂದು ಕೈ ಕೈ ಕುಲುಕಿ, ಒಬ್ಬರನ್ನೊಬ್ಬರು ಅಗಲಿ ಹೋಗುತ್ತಾರೆ. ಇಲ್ಲಿ ಕುಳಿತುಕೊಳ್ಳಲು ಮಂಚವಿಲ್ಲ. ಒಬ್ಬರನ್ನೊಬ್ಬರು ಪ್ರೇಮಿಸಿದಾಗ ಇಬ್ಬರೂ ಒಟ್ಟಿಗೆ ಕುಳಿತು ಹೋಲಾಡುವ ಜೋಕಾಲಿಯಿಲ್ಲ; ಪುಟಿಪುಟಿದು ಆಕಾಶಕ್ಕೆ ಹಾರುವ ಕಾರಂಜಿಯಿಲ್ಲ. ನವಿಲುಗಳಿಲ್ಲ, ರಾಜಹಂಸಗಳಿಲ್ಲ. ಹೈಡಿಂಗ ಪಾರ್ಕ ಎಷ್ಟೆಂದರೂ ಮನುಷ್ಯಕೃತಿ ಅಲ್ಲವೆ? ಅದು ನಿಸರ್ಗವನ್ನು ಅನುಕರಣ ಮಾಡಿದ್ದು; ಇಲ್ಲಿ ಹಾಗಿಲ್ಲ. ಪಕ್ಷಿಗಳ ಕೂಜನ ಮರೆಯ ಮಿಲನ ಸದನ; ಕಾಡು ಹೂಗಳೇ ಶೃಂಗಾರಕ್ಕೆ ಉಪಕರಣಗಳು; ಮರಿದುಂಬಿಗಳ ಝೇಂಕಾರವೇ ಕರೆಯುತ್ತಿರುವ ಆಹ್ವಾನಗಳು. ಒಂದಾದ

ಎಲೆಗಳ ಮೇಲೆ ಕೂಡ್ರುವದು ಸುಪ್ಪತ್ತಿಗೆಯ ಮೇಲೆ ಕೂತಂತೆ. ಇಂತಹ ಈ ಚೆಂದದ ಮರಿಗುಡ್ಡಗಳು ನನ್ನನ್ನು ಮುಗ್ಧನನ್ನಾಗಿ ಮಾಡಿಬಿಟ್ಟವು. ದಿನವೂ ಅವು ನನ್ನನ್ನು ಕರೆಯುತ್ತಿದ್ದಂತೆ ಭಾಸವಾಗುತ್ತಿತ್ತು. ಮಧ್ಯಾಹ್ನದ ವೇಳೆ ಅಲ್ಲಿಯ ಕಮ್ಮಲರಿನ ಸೇವನೆಯಲ್ಲಿಯೇ ಕಳೆಯುತ್ತಿತ್ತು. ದಿನವೂ ಎಷ್ಟೋ ಮುಗ್ಧೆಯರ ಚೆಂದುಟಿಗಳ ದರ್ಶನವೂ ನನಗಾಗುತ್ತಿತ್ತು. ನನ್ನ ಲಚ್ಚಿ ಕೈತಪ್ಪಿ ಹೋದಾಗ ಇಲ್ಲಿಯೇ ನಿರಾಹಾರನಾಗಿ ಬಂದು, ಒಂದು ವಾರ ಕಳೆದಿದ್ದೆ."

"ಶ್ರೀನಾಥ, ಗಂಟಲೇಕೋ ತೀರ ಒಣಗುತ್ತಿದೆಯಲ್ಲ?"

"ಏನು ಕಾಫಿ ಬೇಕೆ?"

"ಬಿಸಿಗಿಟ್ಟದ್ದು ಇದೆಯೇ?"

ಶ್ರೀನಾಥ ಎದ್ದು ಒಳಗೆ ಹೋಗಿ—ಕಾಫಿ ಇತ್ತು—ತಂದು ಕೊಟ್ಟ. ಅದನ್ನು ಕುಡಿದು ಗಂಟಲು ಸರಿಪಡಿಸಿಕೊಂಡು ನಾನು ಕೇಳಿದೆ.

"ಲಕ್ಷ್ಮಣರಾಯರ ಪರಿಚಯವಿದೆಯೆ?"

"ಇಲ್ಲ."

"ನಿನಗೆ ಗೊತ್ತಾಗಲಿಕ್ಕಿಲ್ಲ; ಅವರು ಈಗಾಗಲೇ ತೀರಿಕೊಂಡು ಏಳೆಂಟು ವರ್ಷಕ್ಕೂ ಮಿಕ್ಕಿರಬೇಕು. ಅವರ ಕುಟುಂಬ ನಮಗೆ ಹೊಂದಿಯೇ ಇತ್ತು. ನಾನು ಮೊದಲು ಕಕ್ಕನ ಮನೆಯಿಂದ ಊಟಮಾಡಿ ಹೊರಟಾಗ, ತಮ್ಮ ಎರಡು ಚಿಕ್ಕ ಮಕ್ಕಳೊಡನೆ ಅವರು ಗೇಟಿನ ಬಳಿಯೇ ನಿಂತಿದ್ದರಂತೆ. ನಾನು ಮನೆಯಿಂದ ಹೊರಬಿದ್ದ ನಂತರ ದಾರಿಯುದ್ದಕ್ಕೂ ಸುತ್ತಲೂ ನೋಡುವ ಸ್ವಭಾವ ನನಗಿಲ್ಲ. ನಾನು ತಲೆತಗ್ಗಿಸಿಯೇ ನಡೆದುದರಿಂದ ಅವರಿಗೆ ಮಾತಾಡಲು ಅನುವು ಸಿಗಲಿಲ್ಲ. ನನಗೆ ನಿಜಕ್ಕೂ ಅವರ ಗುರುತು ಸಿಕ್ಕಿರಲಿಲ್ಲ. ಒಮ್ಮೆ ಗುರುತು ಸಿಕ್ಕಿದರೂ ನಾನು ಮಾತನಾಡದೆ ತಲೆತಗ್ಗಿಸಿ ಹೋಗುವವನೆ. ಹೀಗೆ ಒಮ್ಮೆ ನಾನು ಹೋಗುತ್ತಿರುವಾಗ ಅವರಾಗಿಯೇ ಮಾತಾಡಿಸಿದರು.

"ಸಂಜೆಗೆ ಪುನಃ ಕಕ್ಕನ ಮನೆ ಸೇರಿದಾಗ ಅವರು ನಾಲ್ಕಾರು ವರುಷದ ಹುಡುಗಿಯ ಸಂಗಡ ಕುಳಿತುಕೊಂಡು ನಮ್ಮ ಕಕ್ಕನೊಡನೆ ಮಾತಾಡುತ್ತ ಕುಳಿತಿದ್ದರು. ನಾನು ನೇರವಾಗಿ ಹೋಗಿ ಶರ್ಟ ತೆಗೆದು ಅಲ್ಲಿಯೇ ಕುಳಿತುಕೊಂಡೆ. ಆ ತಂದೆಯ ತೊಡೆಯ ಮೇಲೆ ಕುಳಿತ ಆ ಹುಡುಗಿ ತೊಡೆಬಿಟ್ಟು

ನಿಂತು ನನ್ನನ್ನೇ ದುರುಗುಟ್ಟಿ ನೋಡತೊಡಗಿದಳು. ಅವಳು ನೋಡುವ ರೀತಿ ನೋಡಿ, ಆ ಮಗುವಿನ ಕಣ್ಣೇ ಕೇಳಬೇಕೆನ್ನಿಸಿತು. ನನ್ನ ಸಮೀಪ ಬಂದು, ಬದಿಯಲ್ಲಿಟ್ಟ ವಾರಪತ್ರಿಕೆಯನ್ನು ತೆಗೆದುಕೊಂಡು, 'ಇದು ನಂಗೆ' ಎಂದಳು. ಮಾತು ಸರಿ ಬಾರದಿರುವ ಕೊಕ್ಕಳು ಹುಡುಗಿ ಇವಳೆಂದು ಗೊತ್ತಾಯಿತು. ಕುತ್ತಿಗೆ ತಿರುಗಿಸಿ ನಗುಮೊಗದಿಂದಲೇ ಆ ಮಗು ಕೇಳಿದಳು :

'ನೀಣು ಯಾಯು ?'

'ಯಾಕೆ ?'

'ಯಾಯೂ ಎಂದೆ' ಎಂದು ಮೋರೆ ಮುದುರಿಸಿಕೊಂಡಳು. ಅವಳು ಹೇಳಿದ್ದಕ್ಕೆ ನಾನು ಉತ್ತರ ಹೇಳಲಿಲ್ಲವೆಂತ ದೂರ ಸರಿದು ನಿಂತಳು. ಅವಳ ಭಾವನೆ ಗೊತ್ತಾಗಿ ನಾನು ಹೇಳಿದೆ:

'ನಿನ್ನ ಅಣ್ಣ.'

'ಅಯ್ಣು ಎಯ್ಯಿದೆ!'

"ನನಗಾ ಮಾತಿನ ಅರ್ಥವೇ ಆಗಲಿಲ್ಲ. ಆ ಮಗು ಅಲ್ಲಿಂದೋಡಿ, ತಂದೆಯಿದ್ದಲ್ಲಿ ಹೋಗಿ ಅವನ ಕಾಲ ಮೇಲೆ ಕುಳಿತು ಆತನ ಗದ್ದವನ್ನಾಡಿಸಿದಳು. ಅವರೂ ಕಕ್ಕನೂ ಮಾತಿನ ಭರದಲ್ಲಿದ್ದುದರಿಂದ ಇವಳ ಕಡೆ ಅವರ ಲಕ್ಷವೇ ಇರಲಿಲ್ಲ. ತನ್ನ ಮಾತು ಕೇಳಲಿಲ್ಲವೆಂದು ಆ ಹುಡುಗಿ, ತಂದೆಯ ಮೇಲೆ ತನ್ನ ಎರಡೂ ಪುಟ್ಟ ಕೈಗಳಿಂದ ಬಡಿಯತೊಡಗಿದಳು. ಈ ಪ್ರೀತಿಯ ಗದ್ದಲ ಜೋರಾಯಿತು ಎಂದು ತಂದೆ ಮಗಳ ಕಡೆ ನೋಡಿದರು. ಅವಳು ನನ್ನನ್ನೇ ನೋಡುತ್ತ, ನಾನು ಯಾರೆಂದು ತಂದೆಯನ್ನು ಪ್ರಶ್ನಿಸಿದಳು. ಅವರ ದೃಷ್ಟಿ ನನ್ನ ಕಡೆ ತಿರುಗಿತು. ನನ್ನನ್ನು ನೋಡಿಯೇ ನೋಡಿದರು. ಕಕ್ಕ ನನ್ನ ಕೇಳಿದರು-

'ಈ ಹುಡುಗ ಯಾರು ?'

'ನಮ್ಮ ದೂರದ ಅಣ್ಣನ ಹುಡುಗ.'

'ಈಗ ಎಲ್ಲಿ ಉಳಿದಿರುತ್ತಾನೆ ?'

'ಎಲ್ಲಿ ಎನ್ನುವ ನೆಲೆಯೂ ಇಲ್ಲ.'

'ಅಂದರೆ ?'

'ಮಗುವಿನ ದುರ್ದೈವವೆನ್ನಬೇಕು ನೋಡಿ. ಈ ಹುಡುಗ ನಾಲ್ಕೈದು ವರುಷದವನಿರುವಾಗಲೇ ತಂದೆ, ತಾಯಿ, ಅಜ್ಜಿ ಇಲ್ಲವಾದರು. ಅದೃಷ್ಟವಿದೆ

ಬೆಂದು ಹೇಳಬೇಕು. ಎಲ್ಲಿಯೋ ತಿಂದು ಎಲ್ಲಿಯೋ ಬೆಳೆದು ಮಗು ಈ ರೀತಿಯಿದೆ. ಇದೇ ವರ್ಷ ಎಸ್. ಎಸ್. ಸಿ.ಗೆ ಕಟ್ಟಿದ್ದಾನೆ.'

ಅವರು 'ಹಾ' ಎಂದರು. ಆಶ್ಚರ್ಯ ಮಿಶ್ರಿತ ದನಿಯಲ್ಲಿ,

'ಇಲ್ಲಿಗೆ ಹೇಗೆ ಬಂದನು ?'

'ನಾನು ಕುಮಟಾಕ್ಕೆ ಹೋದಾಗ ರಜೆಯಲ್ಲಿ ನಮ್ಮಲ್ಲಿಗೆ ಬರುವಂತೆ ಹೇಳಿದ್ದೆ; ಬಂದಿದ್ದಾನೆ. ನಮ್ಮ ತೊಂದರೆ ಯಾವಾಗಲೂ ಇದ್ದದ್ದೆ. ಹುಡುಗ ಸರಿಯಾಗಿ ತಿಂಗಳೊಪ್ಪತ್ತಾದರೂ ಇರಲಿ ಎಂದುಕೊಂಡಿದ್ದೇನೆ.'

'ನಿನ್ನನ್ನು ಎಲ್ಲೋ ನೋಡಿದಂತಿದೆ ಅಲ್ಲವೆ ?' ಅವರು ನನಗೆಂದರು.

ನನಗೆ ಗೊತ್ತಿದ್ದರೂ ಏನೋ ಎಂದು ತಲೆಯಲ್ಲಾಡಿಸಿದೆ.

'ಕಳೆದ ವರ್ಷ ಸಿರ್ಸಿಗೆ ಹೋಗುವ ಬಸ್ಸಿನಲ್ಲಿರಬೇಕು.'

"ನಾನೂ ಏನೋ ನೆನಪು ಮಾಡಿಕೊಳ್ಳುವವನಂತೆ ಹೌದು ಎಂದೆ. ಮತ್ತೆ ಅವರ ಸಂಸಾರದ ವಿಷಯ ಪ್ರಾರಂಭವಾಯಿತು. ಯುದ್ಧ, ಜಗತ್ತು ಎದುರಿಸಬೇಕಾದ ಗಂಡಾಂತರ, ಸುಧಾರಣೆ ಎನ್ನುವ ಹೆಸರಿನಲ್ಲಿ ಜನರಲ್ಲಿ ಬೆಳೆಯುತ್ತಿರುವ ತಾಮಸಪ್ರವೃತ್ತಿಯ ಪ್ರಾಬಲ್ಯ—ಇನ್ನೂ ಎಷ್ಟೋ ಮಾತುಗಳು ಹೊರಟವು. ನನಗದು ಬೇಡಾದ ವಿಷಯಗಳಾದ್ದರಿಂದ ನಾನತ್ತ ಲಕ್ಷ ಪೂರೈಸಲಿಲ್ಲ. ತಮಸ್ಸಿನ ಸಾಂದ್ರತೆ ಬಲಿಯುತ್ತ ಬಂದಾಗ ಲಕ್ಷ್ಮಣರಾಯರು ಹೊರಗಡೆ ನೋಡಿ 'ಕತ್ತಲೆಯಾಗುತ್ತ ಬಂತು. ನಾಳೆ ಬಿಡುವಿದೆಯಲ್ಲ; ಮತ್ತೆ ಹರಟೆ ಹೊಡೆದರಾಯಿತು. ಇನ್ನು ಸ್ವಲ್ಪ ತಡವಾದರೆ ಗೌರಾ ಮಲಗಿಬಿಡುತ್ತಾಳೆ. ಮಲಗಿದ ನಂತರ ಅವಳ ಹೊಟ್ಟೆಗೆ ಏನೂ ಹಾಕುವದಕ್ಕಾಗುವದಿಲ್ಲ. ಹಾಗೆಯೇ ಮಲಗಿಬಿಟ್ಟರೆ ಬೆಳಿಗ್ಗೆ ನಾಲ್ಕು ಗಂಟೆಗೆನೇ ಎದ್ದು ಹಸಿವು ಎಂದು ಅಳುತ್ತ ಕುಳಿತಾಳು ಎಂದರು. 'ಗೌರಾ, ಮನೆಗೆ ಹೋಗೋಣವೆ ?' ಎಂದು ಅವರು ಮಗಳನ್ನು ಕೇಳಿದಾಗ 'ಅಣ್ಣ ಬರುವನೆ ?' ಎಂದು ತೊದಲು ನುಡಿಯಿಂದಲೇ ತಂದೆಯನ್ನು ಪ್ರಶ್ನಿಸಿದಳು.

"ಲಕ್ಷ್ಮಣರಾಯರಿಗೆ ನಗು ಬಂತು. 'ನೋಡಿದೆಯಾ ರಂಗು, ಯಾರೊಡನೆಯೂ ಬೆರೆಯಲು ಒಲ್ಲದ ಹುಡುಗಿ ನಿಮ್ಮ ಹುಡುಗನನ್ನು ಅದೆಷ್ಟು ಹಚ್ಚಿಕೊಂಡಿದ್ದಾಳೆ. 'ಮಕ್ಕಳ ಮನಸಪ್ಪ' ಎಂದರು.

"ಹೊರಡಲು ನಿಂತಾಗ, ತಿರುಗಿ ಅವಳು ಅದೇ ಮಾತನ್ನು ತಂದೆಗೆ ಕೇಳಿ

ದಳು : ' ಗೌರಾಳಿಗೆ ಏನು ಹೇಳುವಿ? ನಾಳೆ ಬರುವಿಯಲ್ಲವೆ ?' ಎಂದು ನನ್ನೊಡನೆ ಕೇಳಿದರು. ನಾನು ತಲೆಯಲ್ಲಾಡಿಸಿದೆ.

" ನಿನ್ನ ಹೆಸರೇನು ಮಗು ? "

" ರವಿವರ್ಮ. "

" ಮುದ್ದಾಗಿಯೇ ಇದೆ. "

" ನಾನು ಹೇಳಿದಂತೆ ಮರುದಿನ ಹೋಗಲಿಲ್ಲ. ಗೌರಾನಿಗೆ ನನ್ನದೇ ನೆನಪಂತೆ. ಸಾಯಂಕಾಲ ಬಂದವರು ಅದನ್ನೇ ತಿರುತಿರುಗಿ ಹೇಳಿದರು. ಗೌರಾ ಬಂದು ನನ್ನ ಸಮೀಪ ನಿಂತು ನನ್ನ ಕೈ-ಕಾಲುಗಳನ್ನೆಲ್ಲ ಮುಟ್ಟಿದಳು. ಮುದ್ದು ಕಣ್ಣುಗಳಿಂದ ನನ್ನನ್ನೇ ನೋಡಿದಳು; ಎತ್ತಿಕೊಳ್ಳಬೇಕೆನ್ನಿಸಿತು. ಆದರೆ ಎತ್ತಿಕೊಳ್ಳಲೂ ಸಂಕೋಚ. ಗೌರಾ ಸಾವಕಾಶ ಬಂದು ನನ್ನ ಹತ್ತರ ಕುಳಿತುಕೊಂಡು ನನ್ನ ಮೈ, ಬೆನ್ನನ್ನೆಲ್ಲಾ ಸವರಹತ್ತಿದಳು. ಅವಳ ಕಿವಿಯಲ್ಲಿಯ ಲೋಲಾಕಿನ ನೆನಪು ಅವಳಿಗಾಗಿರಬೇಕು. ' ಅಣ್ಣನ ಕಿವಿಗೆ ಫೊಸ್ಪ ಇಯ್ಯ ' ಎಂದಳು. ಅವಳ ತಂದೆ ನಕ್ಕುಬಿಟ್ಟರು. ನನ್ನ ಶರ್ಟಿನ ಗುಂಡಿಗಳನ್ನು ನೋಡಿ ಅವರ ಮೇಲೆ ಬೆರಳಾಡಿಸಹತ್ತಿದಳು. ಹೋಗುವಾಗ್ಗೆ ತಂದೆಯೊಡನೆ ಹೋಗುವದಿಲ್ಲವೆಂದು ಹಟ ಹಿಡಿದಳು. ನಾನು ರಮಿಸಿ ಅವಳನ್ನು ಮನೆಯತನಕ ಕಳುಹಿಸಿ ಬಂದೆ. ನಾನು ಬರುವಾಗ್ಗೆ ' ನಾಳೆ ಬಾ ' ಎಂದು ಲಕ್ಷ್ಯಪೂರ್ವಕವಾಗಿಯೂ ನುಡಿದರು. ನಾನು ಬಂದನಂತರ ತಂದೆಯ ಹತ್ತರ ' ಅಣ್ಣ ಏಕೆ ಇಲ್ಲೇ ಇರುವದಿಲ್ಲ 'ವೆಂದು ಕೇಳಿದಳಂತೆ. ತಂದೆ ಏನೇನೋ ಹೇಳಿ ಮಗಳನ್ನು ಸಮಾಧಾನ ಮಾಡಿದನಂತೆ.

" ಅವರು ಹೇಳಿದಂತೆ ನಾನು ಹೋಗಲೇ ಇಲ್ಲ. ನನ್ನನ್ನು ಕರೆದು ತಂದ ಹೊರತೂ ಊಟ ಮಾಡುವದಿಲ್ಲವೆಂದು ಗೌರಾ ಮುಷ್ಕರ ಹೂಡಿದಳಂತೆ. ನಾನು ಅದೇ ದಿನ ಗೆಳೆಯನೊಬ್ಬನ ಜತೆಗೆ ಸದಾಶಿವಗಡ ನೋಡಲು ಹೋಗಿದ್ದೆ. ಅವರ ಮನೆಯಾಳು ಬಂದು ನನ್ನನ್ನು ನಾಲ್ಕಾರು ಸಲ ಕರೆದು ಹೋದನಂತೆ. ನಾನು ತಿರುಗಿ ಬರುವಾಗ್ಗೆ ಸುಮಾರು ಮೂರು ಮೂರುವರೆ ಗಂಟೆಯಾಗಿತ್ತು. ಸ್ನಾನ ಮಾಡುತ್ತಿರುವಾಗ ಅಕ್ಕ ಹೇಳಿದಳು- ಗೌರಾ ಊಟ ಮಾಡದೇ ಹಟ ಹಿಡಿದು ಕುಳಿತಿರುವಳೆಂದು. ನನ್ನ ಕರುಳಿಗೂ ನನಗರಿಯದಂತೆ ನೋವಾಯಿತು. ನನಗವರ ಮನೆಗೆ ಹೋಗುವ ಮನಸ್ಸಿರದಿದ್ದರೂ ಗೌರಾಳಿಗಾಗಿ

ಮನಸ್ಸು ಅಲ್ಲಿಗೆ ಹೋಗಲು ಹಾತೊರೆಯಿತು. ಕಕ್ಕಿಗೆ ಈಗಲೇ ಬಂದುಬಿಡು ತ್ತೇನೆ ಎಂದು ಹೇಳಿ ಅಲ್ಲಿಗೆ ಹೋದೆ. ಹೊರಗಡೆ ಮೂವರು ಹೆಣ್ಣುಮಕ್ಕಳು ಆಡುತ್ತಿದ್ದರು. ನನ್ನ ವಯಸ್ಸಿನ ಇನ್ನೊಬ್ಬ ಹುಡುಗ ಕುರ್ಚಿಯ ಮೇಲೆಯೇ ನಿದ್ದೆ ಹೋಗಿದ್ದ. ಗೌರಾ ಅತ್ತು ರಂಪ ಮಾಡಿ ನಿದ್ದೆ ಮಾಡಿದ್ದಳು. ಲಕ್ಷ್ಮಣ ರಾಯರು ನಗುತ್ತ 'ಬಾರಪ್ಪಾ' ಎಂದರು. ಆಗಲೇ ಅವರ ಹೆಂಡತಿಯೂ ಬಾಗಿ ಲಿಗೆ ಬಂದು ನನ್ನನ್ನು ನೋಡಿದರು.

"ನಾನು ಮಗುವಿನ ತಲೆಯಲ್ಲಾಡಿಸಿ 'ಗೌರಾ' ಎಂದೆ. ಅಳುತ್ತ ಎದ್ದು ಕುಳಿತಳು. ಅಳು ನಿಲ್ಲಿಸಿ ನನ್ನನ್ನು ನೋಡಿ ನನ್ನ ಕುತ್ತಿಗೆಗೆ ಜೋತು ಬಿದ್ದಳು. ಅವಳನ್ನು ರಮಿಸುತ್ತ ಊಟಕ್ಕೆ ಕರೆದುಕೊಂಡು ಬಂದೆ. ಅಲ್ಲಿಯೂ ನಾನು ಊಟ ಮಾಡಲೇಬೇಕೆಂದು ಹಟ ಹಿಡಿದಳು. ಉಪಾಯವಿಲ್ಲದೆ ಊಟಕ್ಕೆ ಕುಳಿತೆ. ಅವಳೂ ದೊಡ್ಡ ಮಣೆಯನ್ನಿಟ್ಟುಕೊಂಡು ನನ್ನ ಸಮೀ ಪವೆ ಊಟಕ್ಕೆ ಕುಳಿತಳು. ಊಟವಾದ ನಂತರ ಗೌರಾ ನನ್ನ ಜತೆಯೇ ಕುಳಿ ತಿದ್ದಳು. ರಾಯರು ಕೇಳಿದರು :

'ಮುಂಜಾನೆಯಿಂದ ಎಲ್ಲಿಗೆ ಹೋಗಿದ್ದೆ ?'

'ಸದಾಶಿವಗಡಕ್ಕೆ. ಇದೇ ತಾನೇ ಬಂದು ಸ್ನಾನ ಮಾಡುತ್ತಿರುವಾಗ ಕಕ್ಕಿ ಹೇಳಿದಳು. ಗೌರಾ ಊಟ ಮಾಡದೇ ರಂಪ ಹಿಡಿದಿರುವಳೆಂದು. ಅದ ಕ್ಕಾಗಿಯೇ ಓಡಿ ಬಂದೆ.'

'ಇಲ್ಲವಾದರೆ ಬರುತ್ತಿರಲಿಲ್ಲವೆ ?'

'ಇಲ್ಲವೆನ್ನುವಂತೆ ತಲೆದೂಗಿದೆ.'

'ಸದ್ಯ ನಿನಗೇನೂ ಕೆಲಸವಿಲ್ಲವಲ್ಲ; ಬಂದು ಹೋಗುತ್ತಿರು.'

'ಪ್ರಯತ್ನಿಸುತ್ತೇನೆ.'

'ಗೌರಾಳ ಹಟ ನೋಡಿದೆಯಾ ? ಪ್ರತಿನಿತ್ಯ ಊಟ ಮಾಡುವಾಗ್ಗೆ ನೀನೇ ಬರಬೇಕಾಗುತ್ತದೆಯೇನೊ ! ಅವಳು ಯಾರೊಡನೆಯೂ ಇಷ್ಟು ಬೆರೆ ಯುತ್ತಿರಲಿಲ್ಲ. ಆದರೆ ನೀನೆಂದರೆ ಮಾತ್ರ ಆವಳಿಗೆ ಬಲು ಜೀವ.'

'ಪ್ರತಿನಿತ್ಯ ಊಟದ ವೇಳೆಗೆ ಬಂದು ಹೋಗುತ್ತೇನೆ.'

'ತನ್ನೊಡನೆ ಆಡಲೂ ನೀನೇ ಬೇಕು ಎಂದರೆ ?'

'ಇಲ್ಲ; ಮೊದಲೆರಡು ದಿನ ಹಾಗೆಯೆ. ನಂತರ ತಾನೇ ಸರಿ ಹೋಗುತ್ತಾಳೆ.'

"ಗೌರಾಳನ್ನೆತ್ತಿಕೊಂಡು ನಮ್ಮ ಕಕ್ಕನ ಮನೆಗೆ ಬಂದೆ. ಸಂಜೆ ಹಾಗೆಯೇ ಸಮುದ್ರ ದಂಡೆಗುಂಟ ತಿರುಗಾಡಲು ಹೋಗಿದ್ದೆವು. ಮಾರ್ಗದ ತುಂಬ ಅವಳ ಮಾತು ನಡೆದೇ ಇತ್ತು. ಅವಳ ಅಕ್ಕಂದಿರ ಹೆಸರನ್ನು ಕೇಳಿ ತಿಳಿದುಕೊಳ್ಳುವ ಕುತೂಹಲವಾಯಿತು; ಕೇಳಿದೆ.

'ಗೌರಾ, ನಿನ್ನ ಅಕ್ಕನ ಹೆಸರೇನು ?'

'ಲಚ್ಚಿ' ತನ್ನ ಪುಟ್ಟ ಬಾಯಿಯಿಂದ ತೊದಲುತ್ತ ನುಡಿದಳು.

'ಮತ್ತೊಬ್ಬ ಅಕ್ಕನ ಹೆಸರು ?'

'ಅವಳು ಅಕ್ಕ ಅಲ್ಲ.'

'ಮತ್ತೆ ಯಾರು ?'

'ಯಾರೋ ?'

'ಅಣ್ಣ....'

'ಇಯ್ಯಾ.'

'ಅಮ್ಮ.'

"ಏನೇನೋ ತೊದಲು ನುಡಿಯಿಂದ ಹೇಳಿದಳು. ಅಮ್ಮ ಶಕ್ತಿಪಾಳೆಂದು ಅದರ ಅರ್ಥವಿರಬೇಕು. ಮಗು ಏನೋ ತಪ್ಪು ತಿಳಿದುಕೊಂಡಿರಬೇಕೆಂದು ಮತ್ತೆ ನಾನು ಮಾತನಾಡಲಿಲ್ಲ. ಬರುವಾಗ್ಗೆ ಅವಳು ಚಾಕ್ಲೆಟ್ ಬೇಕೆಂದು ಕೇಳಿದಳು; ಕಿಸೆಯಲ್ಲಿ ಬಿಡಿಗಾಸೂ ಇರಲಿಲ್ಲ. ಏನೇನೋ ಕತೆ ಹೇಳಿ ಅದನ್ನು ಮರೆಯಿಸಿ ಅವಳನ್ನು ಅವಳ ಮನೆಗೆ ಕರೆದೊಯ್ದು ಊಟ ಮಾಡಿಸಿ ಬಂದೆ.

"ದಿನ ನಿತ್ಯವೂ ಗೌರಾಳಿಗೆ ಊಟ ಮಾಡಿಸುವ ಹೊಣೆ ನನ್ನ ಮೇಲೆಯೇ ಬಿತ್ತು. ಮತ್ತು ನನ್ನೊಡನೆ ಸುತ್ತಾಡಲು ಬರುತ್ತಿದ್ದಳು. ಮಧ್ಯಾಹ್ನ ಊಟ ಮಾಡಿ ಬಂದವಳು, ನಾನು ಓದುತ್ತಿರುವಾಗ ನನಗೊರಗಿ ನಿದ್ದೆ ಮಾಡುತ್ತಿದ್ದಳು.

"ಲಕ್ಷ್ಮಣರಾಯರ ಹಿರಿಯ ಮಗ ರಾಮೂ, ನಂತರ ಜಾನು, ಲಚ್ಚಿ, ವಿಜಯಾ, ಗೌರಾ ಹೀಗೆ ಒಂದು ಗಂಡು, ನಾಲ್ವರು ಹೆಣ್ಣುಮಕ್ಕಳು. ತಂದೆ-

ತಾಯಿಗಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಬೇರೆ ಬೇರೆ ಇರುತ್ತಾರೆಯೆ ? ನನಗೂ ತಿಳಿಯದ ವಿಷಯವಾಗಿತ್ತು. ಜಯಾ-ವಿಜಯಾ, ತೆಳ್ಳಗಾಗಿ ಚೆಂದಾಗಿಯೇ ಇದ್ದಾರೆ. ತಾಯಿಯಂತೇ ನೋಡಿ. ಆದರೆ ಗೌರಾ-ಲಚ್ಚಿ ಪ್ರಕೃತಿಯಲ್ಲಿ ಬಲವಾಗಿ ದುಂಡಗಾಗಿದ್ದಾರೆ. ನೋಡಿ ಜಯ-ವಿಜಯರಿಗಿಂತ ಹೆಚ್ಚು ಆಕರ್ಷಕ ಮತ್ತು ಸುಂದರ. ಚೆಂದುಟಿಗಳು, ಮೂಗು ತಿದ್ದಿ ಮಾಡಿದಂತಿದ್ದವು. ಹೀಗೇನ್ನುವದು ನನಗೂ ತಲೆತಿನ್ನುವ ಪ್ರಶ್ನೆಯಾಗಿತ್ತು. ಒಮ್ಮೆ ರಾತ್ರಿ ಊಟ ಮಾಡುವಾಗ್ಗೆ ನಾನಲ್ಲಿಯೇ ಉಳಿದಿದ್ದೆ. ಲಚ್ಚಿ ಮತ್ತು ಗೌರಾ ತಂದೆಯೊಡನೆ ಅಟ್ಟದ ಮೇಲೆಯೇ ಮಲಗಿದರು. ಇವನ್ನು ಕುರಿತು ನಾನಾಗ್ಗೆ ಬಹಳ ಯೋಚಿಸಿದರೂ ನನಗದು ಹೊಳೆಯಲೇ ಇಲ್ಲ.

"ವ್ಯಕ್ತಿಯ ಜೀವನದಲ್ಲಿ ಒಮ್ಮೆಯಾದರೂ ನಮಗರಿಯದೆ ನಮ್ಮ ಮನಸ್ಸು ಇನ್ನೊಂದು ಕಡೆ ಹರಿದು ಓಡಿ ಹೋಗುತ್ತಿದೆಯಷ್ಟೇ ? ಹಾಗೇಕೆ ಎನ್ನುವ ಅರಿವು ನಮಗಾಗ ಆಗುತ್ತಿದೆಯೆ ? ಮುದ್ದು ಹುಡುಗಿ ಗೌರಾ ನನ್ನನ್ನು ಮಾಳಿಗೆಗೆ ಕರೆದೊಯ್ದಳು ; ಅಲ್ಲಿ ಎರಡು ಮಂಚಗಳು, ಎರಡು ಕುರ್ಚಿ, ಒಂದು ಚಿಕ್ಕ ಟೇಬಲ್ಲಿದ್ದವು. ಗೋಡೆಗೆ ನೆಲೆಸಿದ ಕನ್ನಡಿ ಮತ್ತು ಹತ್ತಾರು ಪ್ರಸಿದ್ಧ ಪುರುಷರ ಫೋಟೋಗಳು.

"ಮನೆಯ ಮಾಳಿಗೆಯೂ ಅಂತಹದೇ. ಹೀರ ಸಾಪಾ, ಮಾಳಿಗೆ ಸೇರುವ ಮೆಟ್ಟಿಲುಗಳು ಮನೆಯ ದಕ್ಷಿಣ ಪಾರ್ಶ್ವಕ್ಕಿದ್ದು ಕಲ್ಲಿನಿಂದ ಮಾಡಿದವುಗಳಾಗಿದ್ದವು. ಒಮ್ಮೆ ಹೊರಗಿನಿಂದ ಬಂದವರು ಯಾರಾದರೂ ಮಾಳಿಗೆಯೇರಿದರೆ ಅದು ಒಳಗಿನವರಿಗೆ ಗೊತ್ತಾಗುತ್ತಿದ್ದಿಲ್ಲ. ಮಾಳಿಗೆ ಏರಿದ ಕೂಡಲೇ ಸಿಗುವ ಕೋಣೆ ಆಫೀಸಿನಂತಿದ್ದರೆ, ಆದರಾಚೆಯ ಕೋಣೆ ಮಲಗಲು ಉಪಯೋಗಿಸುವದಾಗಿತ್ತು. ಮೊದಲು ಇದು ರಾಯರ ಆಫೀಸ ಕೋಣೆಯೇ ಆಗಿತ್ತಂತೆ. ಅದರಾಚೆಯ ಕೋಣೆಯಲ್ಲಿ ಮಲಗುತ್ತಿದ್ದರಂತೆ. ಆದರೆ ನಾನು ಅಲ್ಲಿದ್ದಾಗ ಲಕ್ಷ್ಮಣರಾಯರು ಲಚ್ಚಿ-ಗೌರಾರೊಡನೆ ಅಲ್ಲಿಯೇ ಮಲಗುದ್ದರು.

"ರಾಯರ ಹಾಗೂ ನನ್ನ ಪರಿಚಯ ಹೆಚ್ಚಿದಂತೆ ನಾನೂ ಆಗಾಗ್ಗೆ ಮಾಳಿಗೆಗೆ ಹೋಗುತ್ತಿದ್ದೆ. ಆಗ ಲಚ್ಚಿಗೆ ಸುಮಾರು ಹನ್ನೊಂದು ವರ್ಷಗಳಿರಬೇಕು. ನಾನು ಅಲ್ಲಿಗೆ ಹೋದ ಕೆಲವೇ ದಿನಗಳಲ್ಲಿ ಗೌರಾಗೆ ಮೂಲಾಕ್ಷರಗಳನ್ನು ಕಲಿಸುವ ಕ್ರಮ ಪ್ರಾರಂಭವಾಗಿತ್ತು. ಆದರೆ ಗೌರಾ ತನ್ನ ಒರಟು

ಬುದ್ಧಿಗೆ ತಕ್ಕಂತೆ ಒರಟು ಪ್ರಶ್ನೆಗಳನ್ನೇ ಕೇಳುತ್ತಿದ್ದಳು. ನಾನು 'ಅ' ಬರೆದು ಕೊಟ್ಟರೆ ಅದನ್ನು ತಲೆಕೆಳಗಾಗಿ ಬರೆದು ನಾನು 'ಬಯುವೆ' ಎಂದು ತೋರಿಸು ವಳು. ಹಾಗಲ್ಲ ಹೀಗೆ ಬರೆ ಎಂದರೆ ಹಾಗೆ ಬರೆದರೆ ಏನಾಗುತ್ತದೆ? ಹೀಗೇಕೆ ಆಗುವದಿಲ್ಲ? ಎನ್ನುವಳು. ಬರೆಯಬಾರದು ಎಂದರೆ ಯಾಕೆ? ಎಂಬುವಳ ಮರುಸವಾಲು; ಅವಕ್ಕೇನಾದರೂ ಉತ್ತರ ಹೇಳಿ ಅವಳನ್ನು ಮುಂಕು ಗೊಳಿಸಬೇಕಾಗುತ್ತಿತ್ತು.

"ವಿಜಯಳಿಗೂ ಲಚ್ಚಿಯಷ್ಟೇ ವಯಸ್ಸಿರಬಹುದು. ಜಯ ಅವಳಕ್ಕ; ಜಯಳ ಅಣ್ಣ ರಾಮು. ರಾಮು ಸದೃಢನಾಗಿದ್ದರೆ ಜಯ-ವಿಜಯ ಬರೀ ಜಳ್ಳು. ಅಂದರೆ ತೀರ ಬಡಕಲ್ಲೇನೂ ಆಗಿರಲಿಲ್ಲ.

"ಲಚ್ಚಿಯೂ ನನ್ನೊಡನೆ ಮಾತಾಡುತ್ತಿದ್ದಳು; ಆದರೆ ಗೌರಾಳಂತಲ್ಲ. ಗೌರಾ ಮುಚ್ಚುಮರೆಯಿಲ್ಲದೆ ತೆರೆದ ಬಾಯಿಗೆ ಬರಬರ ಮಾತುದುರಿಸುತ್ತಿದ್ದಳು. ಆದರೆ ಲಚ್ಚಿ ಮಾತನಾಡುವಾಗ್ಗೆ ಸ್ವಲ್ಪ ಹಿಡಿತ. ಒಮ್ಮೆ ನಾನು ಓದುತ್ತ ಕುಳಿತಾಗ ಅಣ್ಣ ಕರೆಯುತ್ತಾನೆ ಎಂದು ಗೌರಾ ಅಕ್ಕನನ್ನು ಕರೆದುಕೊಂಡು ಬಂದಳು. ಲಚ್ಚಿ ಟೇಬಲ್ ಬಿಟ್ಟು ಸ್ವಲ್ಪ ದೂರ ನಿಂತಾಗ ಗೌರಾ ಹತ್ತಿರ ಬಂದು,

'ಅಣ್ಣಾ, ಅಕ್ಕನಿಗೆ ಹೊಡೆಯಬೇಕು' ಎಂದಳು.

ನಾನವಳ ತಲೆ ನೇವರಿಸುತ್ತ 'ಯಾಕೆ ಗೌರಾ?' ಎಂದೆ.

'ಅಕ್ಕ ನನಗೆ ತಲೆಬಾಚಿಕೊಡುವದಿಲ್ಲವಂತೆ.'

'ಹೌದೇ ಲಚ್ಚಿ?

ಅವಳ ಮೋರೆಯಲ್ಲಿ ಕಿರುನಗೆಯಿತ್ತು; ಆದರೆ ಉತ್ತರ ಬರಲಿಲ್ಲ.

'ಗೌರಾ, ನಿನಗೆ ನಾನು ತಲೆ ಬಾಚಲೆ?'

'ಹುಂ.'

"ಒಮ್ಮೆ ಒಪ್ಪಿದರೆ ದಿನವೂ ಇದೇ ರಾಗವಾದೀತೆಂದು, 'ಲಚ್ಚಿ, ಗೌರಾಗೆ ತಲೆ ಬಾಚಮ್ಮ' ಎಂದೆ.

'ನಿಂಗೆ ಬರೊಲ್ವೆ?' ಗೌರಾ ಮತ್ತೆ ಕೇಳಿದಳು.

'ಊಹುಂ.'

‘ ಸುಳ್ಳು ಹೇಳುತ್ತಿ. ’

“ ಗೌರಾ, ಅಕ್ಕ ಚೆನ್ನಾಗಿ ಬಾಚುತ್ತಾಳೆ ’ ಎಂದು ಅವಳ ಕೆನ್ನೆ ಹಿಂಡಿ ಅಕ್ಕನ ಜೊತೆ ಕಳುಹಿಸಿದೆ. ಅಕ್ಕ ಜಡೆಗೆ ರಿಬ್ಬನ್ ಕಟ್ಟೋದಿಲ್ಲವಂತೆ ಎಂದು ಒಳಗಿನಿಂದಲೇ ಗೌರಾ ಹೇಳಿದಳು. ‘ ಅವಳು ಕಟ್ಟುತ್ತಾಳೆಯೆ ’ ಎಂದಿದ್ದೆ. ತಲೆ ಬಾಚಿಕೊಂಡು ರಿಬ್ಬನ್ ಬಿಗಿದುಕೊಂಡು ಬಣ್ಣದ ಗೌರಿಯಾಗಿ ಹೊರಗೆ ಬಂದಳು ಮುದ್ದು ಗೌರಾ. ಹೊರಗೆ ಬಂದು ನನ್ನ ತೊಡೆಯೇರಿ ಕುಳಿತು ಕಿವಿ ಜಗ್ಗಿ, ‘ ಅಣ್ಣಾ, ಅಕ್ಕ ಬಲು ಒಳ್ಳೇಯವಳು ’ ಎಂದು ಕಿವಿಯಲ್ಲಿ ಹೇಳಿದಳು.

‘ ನೀನು ! ’

“ನಾನು ಒಳ್ಳೆಯವಳಲ್ಲವೆ? ಎನ್ನುವ ಹಾಗೆ ಮುಖ ಉದ್ದವಮಾಡಿ ನನ್ನನ್ನು ನೋಡಿದಳು. ಹೀಗೆ ಪ್ರತಿದಿನ ತೊದಲು ಮಾತುಗಳಲ್ಲಿ, ಹಸುಮಕ್ಕಳ ಬಾಲ ಲೀಲೆಗಳಲ್ಲಿ ನನಗೆ ಗೊತ್ತಾಗದಂತೆ ದಿನಗಳು ಉರುಳತೊಡಗಿದವು.

“ ಮೇ ಇಪ್ಪತ್ತೆಂಟನೆಯ ತಾರೀಖು. ”

“ ನಮ್ಮ ಪರೀಕ್ಷೆಯ ಫಲಿತಾಂಶದ ದಿನ. ನಮ್ಮ ಹಣೆಯ ಬರಹ ನೇರ ವಾಗಿದೆಯೋ ಇಲ್ಲವೆ ವಕ್ರವಾಗಿದೆಯೋ ಎಂದು ತಿಳಿಯುವ ದಿನ. ದಿನಪತ್ರಿಕೆ ಮೆಟ್ರಿಕ್ ಪರೀಕ್ಷೆಯ ರಿಜಲ್ಟ ಹೊತ್ತುಗೊಂಡೇ ಓಡಿ ಬಂದಿತ್ತು. ನಾನು ಪಾಸಾ ಗಿದ್ದೆ. ಮೊದಲನೆಯ ಕ್ಲಾಸಿನಲ್ಲಿಯೇ ಪಾಸಾಗಿದ್ದೆ. ನನಗಿಂತ ಹೆಚ್ಚು ಆನಂದ ಲಕ್ಷ್ಮಣರಾಯರಿಗೆ ಆಗಿದ್ದಂತೆ ತೋರುತ್ತಿತ್ತು. ಗೌರಾಳಂತೂ ‘ ಅಣ್ಣ ಪಾಸಂತೆ ’ ಎಂದು ಗೋಡೆಗೆಲ್ಲ ಸಾವಿರ ಸಲ ಕೂಗಿ ಹೇಳಿದ್ದಳು. ಯಾವ ಭಾವನೆಯಿಂದ ಆ ಮಗು ಆ ರೀತಿ ಆಡಿಕೊಳ್ಳುತ್ತಿತ್ತೊ ?

“ ತಂದೆಯವರೊಡನೆ ಕೆಳಗೆ ಹೋಗಿ ಬಂದ ಗೌರಾ ಹೇಳಿದಳು :

‘ ನೀನು ಇಲ್ಲೇ ಉಳಿಯಬೇಕಂತೆ ? ’

‘ ಯಾಕೆ ಗೌರಾ. ’

‘ ಅಪ್ಪಯ್ಯ ಹೇಳಿದ್ದಾನೆ. ’

‘ ಯಾರ ಹತ್ತಿರ ? ’

‘ ಥೋ ’ ಎಂದು ಮೋರೆ ಮುದುರಿಸಿ ತಂದೆ ಹೇಳಿದುದನ್ನೇ ಹೇಳಿದಳು,

"ಆ ದಿನ ಊಟವೂ ಅಲ್ಲಿಯೇ ಆಗಿತ್ತು. ದಿನಕ್ಕಿಂತಲೂ ವಿಶೇಷವಿತ್ತು ಎನ್ನಬಹುದು. ಗೌರಾ ನಾನು ಶರ್ಯತ್ತು ಕಟ್ಟಿ ಸ್ವಲ್ಪ ಹೆಚ್ಚೇ ಊಟ ಮಾಡಿದೆವು. ಇಷ್ಟೇ ಅಲ್ಲ, ತಾನು ಬೇಗನೆ ಊಟ ಮಾಡಿ, ತನಗೆ ತಿನ್ನಲು ಕೊಟ್ಟಿದ್ದ ಕೋಡಬಳೆಯೊಂದನ್ನು ನನಗೆ ಗೊತ್ತಿಲ್ಲದಂತೆ, ನಾನು ಊಟ ಮಾಡುವಾಗ್ಗೆ ಬಾಯಿಗೆ ತುರುಕಿ, 'ನಾನು ಕಚ್ಚಿದ ಕೋಡಬಳೆಯನ್ನು ಅಣ್ಣ ತಿಂದ' ಎಂದು ಜಗಲಿ ತುಂಬ ಕುಣಿದಾಡಿದಳು; ತಂದೆಯ ಹತ್ತಿರವೂ ಹತ್ತಾರು ಸಾರಿ ಅದೇ ಪದ ಅಂದಳು. ಲಚ್ಚಿಯದೇನೂ ಹಾಗಿರಲಿಲ್ಲ. ಮನಸ್ಸಿಗೆ ಬಂದಷ್ಟು ಊಟ ಮಾಡಿ, ತನ್ನ ಕೆಲಸದಲ್ಲಿ ತಾನು ಮಗ್ನಳಾಗಿದ್ದಳು.

"ಆ ದಿನ ನಾನು ತಿರುಗಾಡಲು ಹೊರಟಾಗಲೂ ಗೌರಾನೇ ನನಗೆ ಕೂದಲು ಬಾಚಿಕೊಟ್ಟಳು; ಬಾಚಿದ್ದೇನೂ ಸರಿಯಾಗಿರಲಿಲ್ಲ. ಆದರೆ ಬಾಚಿದವಳು ಅವಳೇ ಆದ್ದರಿಂದ ಅವಳಿಗದು ಚೆಂದಾಗಿಯೇ ಕಾಣುತ್ತಿತ್ತು. ಆ ದಿನ ಸ್ವಲ್ಪ ಹೆಚ್ಚೇ ಊಟ ಮಾಡಿದ್ದರಿಂದ ತಿಂದದ್ದು ಸರಿಯಾಗಿ ಖರ್ಚಾಗಲಿ ಎಂದು ಗೌರಾಳೊಡನೆ ಮಾಜಾಳಿಯ ಕಡೆಗೆ ಸಮುದ್ರದ ದಂಡೆಗುಂಟ ಕಡಲ ತೆರೆಗಳೊಡನೆ ಆಟವಾಡಿಕೊಳ್ಳುತ್ತ ಬಹು ದೂರ ಹೋಗಿದ್ದೆವು. ನಾವು ತಿರುಗಿ ಮನೆ ಸೇರಿದಾಗ ಗಂಟೆ ಎಂಟಕ್ಕೂ ಮೀರಿತ್ತು. ನಾನು ಗೌರಾಳನ್ನು ಬಿಟ್ಟು ನಮ್ಮ ಮನೆಗೆ ಹೊರಡುವಾಗ್ಗೆ ಲಕ್ಷ್ಮಣರಾಯರು ಕರೆದು ಇಲ್ಲೇ ಊಟಮಾಡಿದರಾಯಿತು ಎಂದರು; ಬೇಡವೆನ್ನುತ್ತ ಬಂದುಬಿಟ್ಟೆ. ಪುನಃ ಕರೆಕಳುಹಿದರು; ಹಿರಿಯರ ಮಾತೆಂದು ಮನ್ನಿಸಿ ತಿರುಗಿ ಹೋದೆ.

"ಊಟ ಮುಗಿಸಿ ಎದ್ದಾಗ 'ಮಾಳಿಗೆಯ ಮೇಲೆ ಕುಳಿತಿರು' ಎಂದು ಲಕ್ಷ್ಮಣರಾಯರು ಹೇಳಿದರು. ಅಬ್ಬಾ! ಇದೇನು ಹೊಸ ರೀತಿಯಿಂದು ಆಶ್ಚರಿಪಟ್ಟುಕೊಂಡೆ; ಗೌರಾಳೂ ಜತೆಯಲ್ಲಿ ಬಂದುದರಿಂದ ಅವಳನ್ನು ಹಾಸಿಗೆಯಲ್ಲಿ ಮಲಗಿಸಿ ಬೆನ್ನು ತಟ್ಟುತ್ತಿದ್ದೆ. ಸುಮಾರು ಹದಿನೈದು ನಿಮಿಷಗಳೊಳಗಾಗಿ ಅವಳಿಗೆ ನಿದ್ದೆ ಬಂದಿತು. ಮತ್ತೆ ನನಗೆ ಯೋಚನೆಗೆ ಇಟ್ಟುಕೊಂಡಿತು. 'ಯಾಕಾಗಿ ಹೇಳಿದರು?' ಎಂದು. ನನ್ನ ಮೇಲೆ ಪ್ರೇಮ, ಆದರ ತೋರಿಸುತ್ತಿರುವಂತಿದೆ, ಸಲುಗೆಯಿಂದ ಆಜ್ಞೆಯನ್ನು ಹೇಳುತ್ತಾರಲ್ಲ, ಹೀಗೆ ಬಗೆಬಗೆಯಾಗಿ ಯೋಚನೆ ಮಾಡಿದೆ. ಅಷ್ಟರೊಳಗಾಗಿ ಲಕ್ಷ್ಮಣರಾಯರು ಊಟ ಮುಗಿಸಿ ಎಲೆ-ಅಡಿಕೆ ಹಾಕಿಕೊಂಡದ್ದನ್ನು ಉಗುಳುತ್ತ ಮಾಳಿಗೆಯೇರಿ ಬಂದರು; ನಾನು

ಖುರ್ಚಿಯ ಮೇಲೆ ಕುಳಿತಿರುವದನ್ನೂ, ಮಕ್ಕಳು ಮಲಗಿರುವದನ್ನೂ ನೋಡಿ,

'ಗೌರಾ ಈಗಾಗಲೇ ಮಲಗಿಬಿಟ್ಟಳೆ?' ಎಂದರು.

'ನಾನೇ ಮಲಗಿಸಿದೆ.'

'ನಾನು ಮಲಗಿಸಿದರೆ ಏನೆಲ್ಲ ಕಿರಿಕಿರಿ ಕೊಡುತ್ತಿದ್ದಳೊ? ನಿನ್ನ ಪರಿಚಯ ದಿಂದ ಅವಳಿಂದ ನನಗಾಗುವ ತೊಂದರೆ ತಪ್ಪಿದೆ.'

"ನಾನು ಒಪ್ಪಿಗೆ ಸೂಚಿಸಿದೆ. ಅವರೇನೋ ಹೇಳಲೆತ್ನಿಸುತ್ತಿದ್ದಂತೆ ಕಾಣು ತ್ತಿತ್ತು; ಆದರೆ ಯಾಕೋ ಸುತ್ತಿ ಈ ರೀತಿಯಾಗಿ ಹೇಳಿದರು:

'ಪರೀಕ್ಷೆಯ ಪರಿಣಾಮವಂತೂ ತಿಳಿಯಿತಲ್ಲವೆ?'

'ಹೂಂ.'

'ಮುಂದೇನು ಮಾಡಬೇಕೆಂದಿರುವೆ?'

'ಇನ್ನೂ ಆ ವಿಷಯವಾಗಿ ಯೋಚಿಸಿಲ್ಲ.'

'ಕಾಲೇಜ ಸೇರುವವಿದ್ದರೆ ಇನ್ನು ಹದಿನೈದು ದಿನಗಳಲ್ಲಿ ಅರ್ಜಿ ಹಾಕ ಬೇಕಲ್ಲವೆ?'

'ಹೌದು; ಏನು ಮಾಡಬೇಕೆಂದು ತಿಳಿಯದಾಗಿದೆ.'

'ಯಾಕೆ?'

'ಸೇರುವದೇನೋ ನಿಶ್ಚಿತ; ಈಗ ಬರೇ ಗುಮಾಸ್ತನಾಗಿ ಕೂದಲು ಬೆಳ್ಳಗಾಗುವತನಕ ದುಡಿದು, ಅರಹೊಟ್ಟೆ ಉಂಡು, ಮೇಲಿನವರಿಂದ ಹೇಳಿಸಿ ಕೊಂಡು ಕಾಲಹರಣ ಮಾಡುವದಕ್ಕಿಂತ ಗ್ರ್ಯಾಜುಯೇಟ್ ಆಗುವದೇ ಲೇಸು. ಮುಂದೆ ನೌಕರಿ ಮಾಡಲಿ, ಮಾಡದೇ ಇರಲಿ, ಆ ಪ್ರಶ್ನೆ ಮಹತ್ವವಾದುದಲ್ಲ. ಕಲಿಯಲು ತೊಂದರೆಯೆಂದು ಈಗ ಬಿಟ್ಟರೆ ಮುಂದೆ ಕಲಿಯದೇ ಕೆಟ್ಟೆನಲ್ಲಾ ಎಂದು ಹಳಹಳಿಸುವದು ಬೇಡ; ಹಣದ ಪ್ರಶ್ನೆ ಮಹತ್ವದ್ದಾದರೂ ಅದನ್ನು ಗೆಳೆಯರೊಡನೆ ಚರ್ಚಿಸಿ ತಿಳಿಯಬೇಕಾಗಿದೆ.'

'ಧಾರವಾಡಕ್ಕೆ ಹೋಗಿ ಕರ್ನಾಟಕ ಕಾಲೇಜ ಸೇರಿದರಾಗದೆ?'

'ಅಲ್ಲಿಗೆ ಬೇಡವೆಂದು ಮಾಡಿದ್ದೇನೆ. ಪುಣಾನೇ ನೆಟ್ಟಗೆ. ಯಾಕಂದರೆ, ನನ್ನ ಹಲವು ಗೆಳೆಯರು ಪಾಸಾದರೆ ಅಲ್ಲಿಗೇನೇ ಹೋಗಬೇಕೆನ್ನುತ್ತಿದ್ದರು. ಇನ್ನೂ ನಾಲ್ಕಾರು ದಿನ ಬಿಟ್ಟು ಅವರನ್ನೆಲ್ಲ ವಿಚಾರಿಸಬೇಕು; ಕೊನೆಗೆ ಎಲ್ಲಾ ಗುತ್ತಾರೋ ಅಲ್ಲಿಗೆ ಹೋಗುವದು.'

'ಹಣದ ಬಗ್ಗೇನು ಮಾಡುವೆ?'

'ಈ ಕಾಲದಲ್ಲಿ ಹಣವಿಲ್ಲದಿದ್ದರೆ ಯಾವ ಕೆಲಸವೂ ಸಾಧ್ಯವಿಲ್ಲ. ಈಗಂತಲೂ ಹಣವಿದ್ದವರ ಮಕ್ಕಳೇನೇ ಕಾಲೇಜ ಸೇರುವದು. ನಮ್ಮಂತಹ ನಿರಾಧಾರಿಗಳು–ದರಿದ್ರರಾಯನ ಬೆನ್ನುಹತ್ತಿದವರು ಬಡ ಗುಮಾಸ್ತರಾಗಿ ಕಾಲ ಕಳೆಯುವದೇ ಉತ್ತಮ. ಆದರೂ ಆಶೆಯಿದೆ, ಕಲಿಯಬೇಕೆಂಬ ಛಲವಿದೆ. ವಿಶ್ವವಿದ್ಯಾಲಯ ಅಸ್ತಿತ್ವದಲ್ಲಿರುವತನಕ ಈ ಜೀವನದಲ್ಲಿ ಗ್ರ್ಯಾಜುಯೆಟ್ ಅನಿಸಿಕೊಳ್ಳಬೇಕೆಂಬ ಛಲವಿದೆ. ಛಲಕ್ಕಾಗಿಯಾದರೂ ಕಾಲೇಜ ಸೇರಿ ಕಾಲೇಜ ಶಿಕ್ಷಣದ ಅನುಭವ ಪಡೆಯಬೇಕೆಂದಿದ್ದೇನೆ.'

'ನಿನ್ನ ಕಕ್ಕನವರು ಈ ಬಗ್ಗೆ ಏನಾದರೂ ಹೇಳಿದ್ದಾರೇನು?'

'ಇಲ್ಲ; ಅವರೊಮ್ಮೆ ಕೇಳಿದರೂ ಅವರಿಂದ ಹಣದ ವಿಷಯದಲ್ಲಿ ಸಹಾಯ ಪಡೆಯಲಿಚ್ಛಿಸುವದಿಲ್ಲ. ಹೊತ್ತುಹೊತ್ತಿಗೆ ತಿಂಡಿ-ತೀರ್ಥ, ಎರಡು ಹೊತ್ತು ಅನ್ನ ಸರಿಯಾಗಿ ಹೆತ್ತ ಮಕ್ಕಳಿಗೆ ಹಾಗೂ ಕೈಹಿಡಿದ ಹೆಂಡತಿಗೆ ಕಾಣಿಸಬೇಕಾದರೆ ಅವರಿಗೆ ನವೋ ನವೋ ಆಗಿರುವಾಗ ಈ ಬಗ್ಗೆ ನಾನವರನ್ನು ಕೇಳಲಾರೆ. ಅಂತಹರಿಂದ ಸಾಲ ಮಾಡಿಸಿ ಹಣ ಪಡೆದುಕೊಂಡು ಅವರನ್ನು ಇನ್ನಷ್ಟು ಕಷ್ಟಕ್ಕೆ ಗುರಿಪಡಿಸಲಾರೆ.'

'ಬೇರೆ ಯಾರಿಂದಲಾದರೂ ನಿನಗೆ ಸಹಾಯ ಪಡೆಯಲು ಸಾಧ್ಯವಿದೆಯೆ?'

'ಸಾಧ್ಯವಿದೆಯೆನ್ನಬಹುದು; ನಾನಿಲ್ಲಿಯತನಕ ಆಸರೆ ಪಡೆದವರಿಂದಲೇ ಸಿಗಬಹುದು. ಅವರೂ ಕೊಡುವದಾಗಿ ಹೇಳಿದ್ದಾರೆ. ಈಗಾಗಲೇ ಎಂಟ್ಹತ್ತು ವರುಷ ಉಂಡ ಅನ್ನದ ಋಣವೇ ನನಗೆ ಹೊರಲಾರದಷ್ಟು ಹೊರೆಯಾಗಿರುವಾಗ್ಗೆ, ನನ್ನ ಸ್ವಾರ್ಥಕ್ಕಾಗಿ ಇನ್ನಷ್ಟು ಹಣ ಪಡೆದುಕೊಂಡು ಮತ್ತೂ ಅವರ ಋಣದಲ್ಲಿ ಬೀಳುವದು ಬೇಡ. ನನ್ನಲ್ಲಿ ಅವರು ಇದೇ ಮಾತು ಕೇಳಿದಾಗ ನಾನವರಿಗೆ ಹೀಗೆಯೇ ಉತ್ತರಿಸಿದ್ದೆ.'

'ಶಿಕ್ಷಣಕ್ಕಾಗಿ ನೀನು ಹಣ ಪಡೆದುಕೊಂಡರೆ ಅದು ಸ್ವಾರ್ಥವಾಗುವದಿಲ್ಲವಲ್ಲ.'

'ಒಂದು ರೀತಿಯಲ್ಲದು ನಿಜ. ಆದರೆ ಆ ಹಣ ಉಪಯೋಗಿಸುವ

ಕರ್ತೃ ನಾನೇ ಆಗುವದರಿಂದ, ಅದನ್ನು ತೀರಿಸಲು ನಾನೇ ಹಕ್ಕುದಾರನಾಗುತ್ತೇನೆ. ಒಮ್ಮೆ ವಿಧಿ ಅಡ್ಡ ಬಂದು, ಈ ದೇಹವೇ ನಶ್ವರವಾದುದರಿಂದ, ಸಾವು ಬಂದರೆ ಅವರ ಋಣ ತೀರಿಸುವದು ಹೇಗೆ ? '

' ಹಾಗಾದರೆ ಮತ್ತಾವ ರೀತಿಯಿಂದ ಮುಂದುವರಿಸಬೇಕೆಂದಿರುವೆ ? '

' ನಾನು ಮೊದಲನೆಯ ಕ್ಲಾಸಿನಲ್ಲಿ ಬಂದದ್ದರಿಂದ ಗವರ್ನಮೆಂಟ್ ಸ್ಕಾಲರಶಿಪ್ ದೊರೆಯಬಹುದೆಂಬ ಆಶೆಯಿದೆ. ಅದು ಎಷ್ಟು ದೊರೆಯುತ್ತದೆಂದು ಪುಣೆಗೆ ಹೋದ ನಂತರವೇ ತಿಳಿಯಬೇಕು. ಹಣ ಕಡಿಮೆ ಬಿದ್ದರೆ, ಹುಡುಗರಿಗೆ ಪಾಠ ಹೇಳಿಯೋ ಅಥವಾ ಪಾರ್ಟ್‌ಟೈಮು ಕೆಲಸ ಮಾಡಿಯೋ ಹಣ ದೊರಕಿಸುವ ಪ್ರಯತ್ನ ಮಾಡಬೇಕು. ನಾನೇನೋ ಮನಸ್ಸಿನಲ್ಲಿ ಮುಂದಿಗೆ ತಿಳಿಯುತ್ತೇನೆಂದು ನೀವು ತಿಳಿಯಬೇಡಿ. ಗೆಳೆಯರೊಡನೆ ವಿಚಾರ ಮಾಡುವವನಕ್ಕಾಗಿ ಇನ್ನು ನಾಲ್ಕೆಂಟು ದಿನಗಳಲ್ಲಿ ಹೊರಡಬೇಕೆಂದು ಮಾಡಿದ್ದೇನೆ. '

' ಅಡ್ಡಿಯಿಲ್ಲ; ಆದರೆ ಹೋಗುವಾಗ್ಗೆ ನನಗೆ ಭೆಟ್ಟಿಯಾಗಿ ಹೋಗು ' ಎಂದರು. ತಲೆತಗ್ಗಿಸಿ ' ಹೂಂ ' ಎಂದುಬಿಟ್ಟೆ.

೬

“ ವಸಂತಋತು ಪ್ರಾರಂಭವಾಗಿತ್ತು.

“ ಅದರ ವೈಶಾಖದ ಬೆಳ್ಳಿ ಮೂಡದ ಮುಂಜಾವು. ಮೈ ನವಿರೇಳಿಸುವ ಸೌಮ್ಯ ಗಾಳಿ ಬೀಸುತ್ತಿತ್ತು. ಬಾನಂಗಣದ ಪೂರ್ವ ದಿಗಂತದಲ್ಲಿ ಮುಗಿಲು ಶುಭ್ರವಾಗಿ ಕಾಣತೊಡಗಿ, ಬಾನಂಚು ರಕ್ತಮಿಶ್ರಿತ ಕೆಂಬಣ್ಣವಾಗಿ, ಅದರ ಛಾಯೆ ಸುತ್ತಲೂ ಆವರಿಸತೊಡಗಿತ್ತು. ಮುಗಿಲುಗಳು ಬಣ್ಣದಂಚಿನ ಕೆಂಗುಲಾಬಿ ಸೀರೆಯನ್ನುಟ್ಟು ಉಷೆಯಾಗಿ, ಕುಮಾರಿಯಾಗಿ ತಿಮಿರ ರಾಶಿಯನ್ನು ಓಡಿಸಲು ಭಾನುವಿಗೆ ಕೈ ಮುಗಿದು ಕರೆಯುತ್ತಿರುವಂತೆ ಭಾಸವಾಗುತ್ತಿತ್ತು. ಅದಕ್ಕೆ ಕೋಗಿಲೆ, ಕುಕ್ಕುಟ, ಕಾಜಾಣಗಳ ‘ ಕೂವೂ, ಕೊಕ್ಕೊಕೊ ’ ‘ ಪಿವ್ ಪಿವ್ ’ ಧ್ವನಿಗಳು ಭಾರೀ ಸಂಭ್ರಮದ ವಾದ್ಯಗಳಾಗಿ ಪರಿಣಮಿಸಿದ್ದವು. ಕಾಗೆಗಳು ಇನ್ನೂ ಮನೆಯ ಸೂರು ಚೆನ್ನಾಗಿ ಕಾಣುವದಿಲ್ಲವೆಂದು ಗೂಡಿನಿಂದಲೇ ಕತ್ತು ಹೊರಳಿಸಿ ಅತ್ತಿತ್ತ ನೋಡುತ್ತಿದ್ದವು. ಚಿಕ್ಕೆಗಳು ಮರೆಯಾಗುತ್ತಿರುವ ದಾರಿಕಾರನಂತೆ ಮಂದಮಂದವಾಗತೊಡಗಿದ್ದವು. ಅಂತೂ ವಸಂತನ ವೈಶಾಖದ ಮುಂಬೆಳಗು ಭವ್ಯವಾಗಿರುವಂತೆ, ನನಗೆ ಆನಂದಕರವೂ ಸಹಿಸಲಸಾಧ್ಯವಾದ ವೇದನೆಯುಳ್ಳದ್ದೂ ಆಗಿತ್ತು.

“ ದಶದಿಕ್ಕುಗಳನ್ನೆಲ್ಲ ಸೂರ್ಯನ ತಾಮ್ರವರ್ಣದ ಕಿರಣಗಳೋಡಿ ಬೆಳಗಿಸಿಬಿಟ್ಟವು. ಭೂಮಿಯು ಬಣ್ಣವನ್ನೇ ಬದಲಿಸಿಬಿಟ್ಟವು.

“ ಇಷ್ಟು ಚಿಕ್ಕ ಚೀಲದಲ್ಲಿಯೇ ನನ್ನ ಹರಕು ಬಟ್ಟೆಗಳನ್ನೂ, ನಾಲ್ಕಾರು ಪುಸ್ತಕಗಳನ್ನೂ ತುರುಕಿ ಜೋಳಿಗೆ ಸಿದ್ಧವಾಯಿತು ; ಇನ್ನು ತಡವಿಲ್ಲ. ಕುತ್ತಿಗೆಗೆ ಸಿಕ್ಕಿಸಿ, ಮೂಗಿದ್ದ ಕಡೆ ಹೊರಟರಾಯಿತು. ಹಾಗೇ ಹೊರಡಲು ಸಾಧ್ಯವಿದೆಯೆ ? ಗೌರಾ ತಂಬೂರಿ ಬಾರಿಸಿ ನನ್ನನ್ನು ಆಕರ್ಷಿಸಿದ್ದಾಳೆ. ಲಚ್ಚಿ ಮೌನಿಯಾಗಿ, ಗಂಭೀರಳಾಗಿ ನನ್ನ ಮನಸ್ಸನ್ನೆಳೆದಿದ್ದಾಳೆ, ಹೊತ್ತು ಕಳೆಯುವ ಮಟ್ಟಿಗೆ ಸ್ನೇಹ ಮಾಡಿಕೊಂಡದ್ದಕ್ಕೆ. ಅದಕ್ಕೆ ಬದಲಾಗಿ ಕೃತಜ್ಞತೆ ಕೊಡುವದೇ ನನಗೆ ಹೊರೆಯಾಯಿತು. ಗೌರಾ ಮೂಲಾಕ್ಷರ ಕಲಿತು ‘ ಇವ ಈರ, ಇವ ಬಸವ ’

ಎನ್ನುವದನ್ನೆಲ್ಲಾ ಓದಲು ಕಲಿತು ನನ್ನ ಪ್ರಿಯ ಶಿಷ್ಯಳಾಗಿಬಿಟ್ಟಿದ್ದಾಳೆ. ನಾನು ಅವಳನ್ನಗಲಿ ಹೋಗದಂತೆ, ತನ್ನ ಗುರುಭಕ್ತಿಯಿಂದ ನನ್ನ ಆತ್ಮಕ್ಕೆ ಬಲೆ ಬೀಸಿ ಹಿಡಿದುಕೊಂಡುಬಿಟ್ಟಿದ್ದಾಳೆ. ದೂರ ಉಚ್ಚ ಶಿಕ್ಷಣ ಪಡೆಯಲು ಹೋಗುತ್ತಿರುವೆ ನಲ್ಲ ಎಂದು ನನ್ನ ನರನಾಡಿಯ ರಕ್ತವುಕ್ಕಿ ಹರ್ಷದ ತೆರೆಗಳಿಂದ ರೋಮಾಂಚನ ವುಂಟು ಮಾಡಿದರೆ, 'ನೀ ಹೋಗಬೇಡಣ್ಣ, ನಾನು ನಿನ್ನ ಗೌರಾ ಅಲ್ಲವೆ? ನೀನಿಲ್ಲದಿದ್ದರೆ ಅಕ್ಕ ತಲೆ ಬಾಚಿ ಕೊಡುತ್ತಾಳೆಯೆ?' ಎಂದು ಪುಟ್ಟ ಕೈಗಳಿಂದ ಗೌರಾ ನನ್ನನ್ನು ತಬ್ಬಿಕೊಂಡಿದ್ದಳು. ವಿಚಾರಗಳ ಡೋಲಾಯಮಾನದಲ್ಲಿಯೇ ಲಕ್ಷ್ಮಣರಾಯರ ಮಹಡಿಯನ್ನೇರಿದೆ.

"ಲಚ್ಚಿ ಗೌರಾಳ ತಲೆ ಬಾಚಿ ಹೂವು ಮುಡಿಸಿದ್ದಳು. ಪುಟ್ಟ ಮಗು ಎಷ್ಟು ಮುದ್ದು! ಎಂದವಳನ್ನೆತ್ತಿ ಕೆನ್ನೆಗೆ ಮುದ್ದು ಕೊಟ್ಟೆ. ಅವಳು ನನ್ನ ಕುತ್ತಿಗೆಯನ್ನು ಹಿಡಿದುಕೊಂಡು ನನ್ನ ಕಣ್ಣನ್ನೇ ನೋಡುತ್ತಿದ್ದಳು; ಗೌರಾ ತಟಕ್ಕನೆ ಕೇಳಿದಳು :

'ಎಲ್ಲಿಗೆ ಹೋಗುತ್ತೀಯಣ್ಣ?'

'ಯಾಕೆ?'

'ಹೊಸ ವಸ್ತ್ರ ಹಾಕಿಕೊಂಡಿದ್ದೀಯೆ?'

'ಯಾಕೆ? ಗೌರಾ, ನಿನ್ನಣ್ಣ ಹೊಸ ವಸ್ತ್ರ ಹಾಕಿಕೊಳ್ಳಬಾರದೇ?'

'ಹಾಗಲ್ಲಣ್ಣಾ, ತಿರುಗಾಡಲು ಹೋಗುತ್ತೀಯಾ ಅಂತ.'

'ಇಲ್ಲಾ.'

'ಹೋಗುವದಾದರೆ ನಾನು ಬರುವೆ.'

'ಗೌರಾ, ಈ ಹೂವನ್ನು ಯಾರು ಮುಡಿಸಿದರು?'

'ಅಕ್ಕ.'

'ಗೌರಾ, ನಾನು ದೂರ ಹೋಗಬೇಕೆಂದಿರುವೆ.'

'ನಾನೂ ಬರುತ್ತೇನಣ್ಣ. ಇದೇ ಬಟ್ಟೆ ಚೆಂದ ಕಾಣುತ್ತದೆ. ಇದನ್ನೇ ತೊಟ್ಟುಕೊಂಡು ಬರುತ್ತೇನೆ.'

'ಅಯ್ಯೋ, ನೀನು ಬರಲಿಕ್ಕಾಗದು ಗೌರಾ, ನಾನು ಬರುವಾಗ್ಗೆ ನಿನಗೆ ಹೊಸ ಬಟ್ಟೆ. ಹೊಸ ಜ್ಲೌವುಜ ತಕ್ಕೊಂಡು ಬರುತ್ತೇನೆ. ಮತ್ತೆ ಹೂವು, ದ್ರಾಕ್ಷೆ, ಪೇಪ್ಪ ಎಲ್ಲಾ ತರುತ್ತೇನೆ.'

‘ ಯಾವಾಗ ? ’

‘ ಇನ್ನು ನಾಲ್ಕಾರು ದಿನ ಬಿಟ್ಟು. ’

‘ ನಿಜವಾಗ಼್್ಲೂ. ’

‘ ಹೌದು ಗೌರಾ, ನಾನು ಹೋಗುವಾಗ್ಗೆ ನೀನು ಅಳಕೂಡದು ; ಆದೀತೆ ? ’

“ಗೌರಾ ತಲೆಯಲ್ಲಾಡಿಸಿದಳು ; ನಾನು ಊಟವನ್ನು ಅಲ್ಲಿಯೇ ಮುಗಿಸಿದೆ. ಹೊರಡುವಾಗ್ಗೆ ರಾಯರು ನೂರು ರೂಪಾಯಿ ಕೊಟ್ಟು, ‘ ಖರ್ಚಿಗೆ ಬೇಕಾಗಬಹುದು, ಇಟ್ಟುಕೋ ’ ಎಂದರು.

‘ ಬೇಡ. ’

‘ ಹಾಗೆನ್ನಕೂಡದು ’ ಸ್ವಲ್ಪ ದರ್ಪದಿಂದಲೇ ನುಡಿದರು.

“ ನಾನು ಮರುಮಾತಾಡದೇ ಹಣ ತಕ್ಕೊಂಡೆ.

‘ ಪ್ರಸಂಗ ಬಂದರೆ ನನಗೆ ಪತ್ರ ಬರೆ. ’

‘ ಹೂಂ. ’

‘ ಮತ್ತೆ ಯಾಕೇಂತ ತಲೆತಪ್ಪಿಸಿ ಕೂತೀಯಿ ? ’

‘ ಇಲ್ಲ. ’

‘ ದೂರದ ಊರು, ಹುಷಾರಿಯಿಂದ ಇರು. ಯಾರೊಡನೆಯೂ ಸ್ನೇಹವನ್ನು ಕಟ್ಟಿಕೊಳ್ಳಬೇಡ. ಅಸಹಾಯ ಪರಿಸ್ಥಿತಿಯಲ್ಲಿ ಏನಾದರೂ ಯಾಚಿಸಲು ಅಭಿಮಾನ ಮುಂದೆ ಬಂದರೆ ತೊಂದರೆಗೀಡಾದೀಯೆ. ಅಲ್ಲಿಯ ಅಡ್ರೆಸ್ ಕೊಟ್ಟು ಕೂಡಲೆ ಪತ್ರ ಬರೆ. ’

“ ಅವೆಲ್ಲವೂ ಆಜ್ಞೆಯಂತಿದ್ದುದರಿಂದ ತಲೆತಗ್ಗಿಸಿ ಒಪ್ಪಿಕೊಂಡೆ. ಕಷ್ಣನಿಗೆ ಹೇಳಿ, ಕಷ್ಣಿಯ ವಿಶೇಷ ತಿಂಡಿಯ ರುಚಿ ನೋಡಿ, ಬಸ್‌ಸ್ಟೇಂಡಿಗೆ ಬಂದಂತಾಯಿತು. ಗೌರಾಳೂ ನನ್ನ ಜತೆಯಲ್ಲಿಯೇ ಬಂದಿದ್ದಳು. ಬಸ್ಸು ಬಿಡುವಾಗ್ಗೆ ಗೌರಾ ಗಲಾಟೆ ಮಾ‌ಡ‌ಲಿಲ್ಲ, ಅಳಲೂ ಇಲ್ಲ. ‘ ನನ್ನ ಸಾಮಾನು ತೆಗೆದುಕೊಂಡು ಬೇಗ ಬಾ ’ ಎಂದು ತನ್ನ ತೊದಲು ನುಡಿಯಲ್ಲಿ ಹೇಳಿ, ಬಸ್ಸಿನಲ್ಲಿದ್ದವರನ್ನೆಲ್ಲ ನಗಿಸಿಬಿಟ್ಟಿದ್ದಳು.

“ ದೂರದ ಯಾತ್ರೆ! ಅದೂ ಮಹತ್ವವಾದ ಉದ್ದೇಶದಿಂದ. ‘ ಸುಂಕದವನಿಗೇನು ಸುಖ-ದುಃಖ ’ ಎನ್ನುವ ಹಾಗೆ ಕಮಾಲಿಯಿಂದ ಓಡಿದು ರಸ್ತೆ

ಕೇಳಿದವನ ವರೆಗೂ ಕಾಣಿಕೆಯನ್ನರ್ಪಿಸಬೇಕಾಗುತ್ತಿತ್ತು. ಆದರೂ ಪ್ರವಾಸ ವೇನೋ ತೃಪ್ತಿಕರವಾಗಿಯೇ ಇತ್ತೆನ್ನಬಹುದು. ಭವ್ಯ ಫರ್ಗ್ಯೂಸನ್ ಕಾಲೇಜ ತನ್ನ ಪ್ರಾಚೀನತೆಯನ್ನು ತೋರಿಸುತ್ತ ನಮ್ಮನ್ನು ಬೆರಗುಗೊಳಿಸುತ್ತಿತ್ತು. ನಾವು ನೇರವಾಗಿ ಹಾಸ್ಟೆಲ್ ಸೇರಿದೆವು. ಗೆಳೆಯನೊಬ್ಬನ ಸಹಾಯದಿಂದ ನನಗೂ ಒಂದು ರೂಮಿನಲ್ಲಿ ಉಳಿಯುವಷ್ಟು ಅನುವು ಸಿಕ್ಕಿತು. ದೈವವೇ ಕಾಪಾಡಿತು ಎಂದುಕೊಂಡು ಲಕ್ಷ್ಮಣರಾಯರು ನನಗೆ ತೋರಿಸಿದ ಆದರ ಸತ್ಕಾರಗಳ ವಿಸ್ಮರಣೆಯಾಗಿಲ್ಲವೆಂದು ತೋರಿಸಿಕೊಳ್ಳಲು 'ಪ್ರಯಾಣ ಸುಗಮ ವಾಯಿತು; ತೊಂದರೆಯಾಗಲಿಲ್ಲ. ಕಾಲೇಜ ಹಾಸ್ಟೆಲಿನಲ್ಲಿಯೇ ಉಳಿದು ಕೊಂಡಿದ್ದೇನೆ, ಚೆನ್ನಾಗಿದ್ದೇನೆ' ಎಂದು ನನ್ನ ಅಡ್ರೆಸ್ ಕೊಟ್ಟು ಪತ್ರ ಬರೆದೂ ಆಯಿತು.

"ಕಾಲೇಜಿನಲ್ಲಿಯ ಮೊದಲಿನ ಎರಡು ಟರ್ಮುಗಳು ಮುಗಿದವು. ಅಬ್ಬ! ಆ ದಿನಗಳು ಹೇಗೆ ಕಳೆದುಹೋದವೋ ತಿಳಿಯಲಿಲ್ಲ. ಪರೀಕ್ಷೆ ಮುಗಿದ ನಂತರ ವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮ ಊರಿಗೆ ಹೊರಡುವ ಸಿದ್ಧತೆ ನಡೆಸಿ ದ್ದರು. ತಿರುಗಿ ಗೂಡು ಸೇರುವೆವಲ್ಲ ಎಂದೆಷ್ಟು ಉತ್ಸಾಹ ಅವರಿಗೆ. ನಾನು ಏನು ಮಾಡುವದೆನ್ನುತ್ತ ಸುಮ್ಮನಿದ್ದೆ. ಸುಮಾರು ಇಪ್ಪತ್ತು ದಿನಗಳನ್ನು ಗೆಳೆಯರ ಸಂಪರ್ಕವಿಲ್ಲದೇ ನಾನೊಬ್ಬನೇ ಏಕಾಕಿಯಾಗಿ ಬಣಗುಡುವ ಈ ಹಾಸ್ಟೆಲಿನಲ್ಲಿಯೇ ಕಳೆಯಲು ಸಾಧ್ಯವೆ? ರಜೆಯ ದಿನಗಳಲ್ಲಿ ಹಾಸ್ಟೆಲುಗಳಲ್ಲಿ ಊಟ ಸಿಗುವದಿಲ್ಲ. ಊಟಕ್ಕಾಗಿ ಮೈಲುಗಟ್ಟಲೆ ನಡೆದು ಬರ್ಯೂರಕ್ಕೆ ಬರ ಬೇಕು. ಮರಾಠಿಯ ನಾಡು. ಪ್ರತಿಯೊಂದು ಕಡೆಯಲ್ಲಿಯೂ ಕಾಯ್, ಕುಠೆ ಎನ್ನುವ ಶಬ್ದಗಳೇ ಪ್ರತಿನಿನಾದ ಮಾಡುತ್ತಿದ್ದವು. ನನಗಂತೂ ಮರಾಠಿ ಚೆನ್ನಾಗಿ ಬರುತ್ತಿರಲಿಲ್ಲ. ಮರಾಠಿಯಲ್ಲಿ ಅವರಾಡಿದುದು ತಿಳಿಯುತ್ತಿತ್ತು; ತಿರುಗಿ ಉತ್ತರಿಸುವದು ಅಸಾಧ್ಯವಾದುದರಿಂದ, ಸರಿ ಊಟವನ್ನಾದರೂ ಪೂರ ಕಿಸಬಹುದು ಎನ್ನುವ ಧೈರ್ಯವಿದ್ದಿಲ್ಲ. ಅಲ್ಲಿಯ ಜನ ಹಸಿ ಕಾಯಿಪಲ್ಲೆ ಯನ್ನೇ ಬೇಯಿಸದೆ ತಿನ್ನುತ್ತಿದ್ದರು. ಅವನ್ನು ಕಂಡು ನನಗಂತೂ ವಾಕರಿಕೆ ಯಾಗುತ್ತಿತ್ತು.

"ನಾನು ಆ ವರ್ಷ ಪರಾಂಜಪೆ ಎನ್ನುವ ವಿದ್ಯಾರ್ಥಿಯ ಜೊತೆ ಉಳಿ ದಿದ್ದೆ. ಅವನು ಒಂದೇ ರೂಮಿನಲ್ಲಿ ಒಬ್ಬನೇ ಇದ್ದ. ಗೆಳೆಯರೆಲ್ಲ ನನ್ನನ್ನು

ಸೇರಿಸಿಕೊಳ್ಳಲು ಆಗ್ರಹಪಡಿಸಿದ್ದರಿಂದ, ನನ್ನ ಮೋರೆ ನೋಡುತ್ತ, 'ಕಾನಡಿ ಮುಲಗಾ ಕಾಯ್' ಎಂದು ನನ್ನನ್ನು ಪ್ರಶ್ನಿಸಿ, ನಾನು ಹೌದೆನ್ನುವಂತೆ ತಲೆ ದೂಗಿದ ಮೇಲೆ ಒಪ್ಪಿಕೊಂಡಿದ್ದ. ಅವನ ಕೋಮಲ ಅಂಗಾಂಗಗಳನ್ನು ನೋಡಿದರೆ ಅವನು ಶ್ರೀಮಂತನಿರಬೇಕೆಂಬ ಭಾವನೆ ಬರುತ್ತಿತ್ತು. ಅವನಿಗೇನೂ ಕಲಿಯಲು ಅಷ್ಟು ಮನಸ್ಸಿದ್ದಂತೆ ಕಾಣುತ್ತಿರಲಿಲ್ಲ. ದಿನಕ್ಕೆ ಹದಿನೈದು ಇಪ್ಪತ್ತಕ್ಕೂ ಮಿಕ್ಕಿ ಸಿಗರೇಟ ಸೇದುತ್ತಿದ್ದನು. ಇದಕ್ಕೂ ಪೂರ್ವದಲ್ಲಿ ಸಿಗರೇಟಿನ ಹೊಗೆ ಮೂಗಿಗೆ ಬಡಿದರೆ, ಹೊಟ್ಟೆ ಮಗುಚಿದಂತಾಗಿ ಕಣ್ಣಿನಲ್ಲಿ ನೀರು ಬರುತ್ತಿತ್ತು ನನಗೆ. ಈಗ ಉಪಾಯವಿಲ್ಲದೇ ಸುಮ್ಮನುಳಿಯಬೇಕಾಗುತ್ತಿತ್ತು. ಸಿಗರೇಟ ಎಂದರೆ ಮೂಗು ಮುರಿಯುತ್ತಿದ್ದ ನಾನು, ಅದರ ಸಾಮೀಪ್ಯ ಸಹವಾಸದಿಂದ ಬರಬರುತ್ತ ಅದರ ಪಕ್ಷಪಾತಿಯಾಗಿಯೂ ಕೊನೆಗೆ ಪರಮ ಭಕ್ತನಾಗಿಯೂ ಪರಿವರ್ತಿಸಿಬಿಟ್ಟೆನು. ಸುಮಾರು ನಾಲ್ಕಾರು ತಿಂಗಳಲ್ಲಿಯೇ ನಮ್ಮ ಸಿಗರೇಟಿನ ಬಿಲ್ ಮೊದಲಿನ ಎರಡಷ್ಟಾದುದು ನಮ್ಮನ್ನು ದಂಗುಬಡಿಸಿತು. ಮೊದಮೊದಲು ಅದು ನಮಗೆ ತಿಳಿಯದಿದ್ದರೂ ಸಿಗರೇಟಿನ ಬಿಲ್ಲು ಬಂದಾಗ ಅದನ್ನು ನೋಡಿ ನಮಗೇ ಆಶ್ಚರ್ಯವೆನಿಸಿತು. ಏನೂ ಅರಿಯದ ನನ್ನನ್ನು, ಕರೆದು ಸಿಗರೇಟಿನ ಕೈಹಿಡಿಸಿ, ಅದರ ಗೆಳೆತನ ಮಾಡಿಸಿಕೊಟ್ಟಿದ್ದಕ್ಕಾಗಿ ಆ ನನ್ನ ಗೆಳೆಯ ಪರಾಂಜಪೆಗೆ ಸಾವಿರ ಪ್ರಣಾಮವನ್ನು ಸಲ್ಲಿಸಬೇಕೆಂದು, ಮುಕ್ತಕಂಠದಿಂದ ನಾನು ಆಣೆ ಮಾಡಿ ಹೇಳಬಲ್ಲೆ. ಶ್ರೀನಾಥ, ಅದೊಂದೇ ಎಂದಿಗೂ ನನ್ನ ಕೈಬಿಡದೆ ದಾರಿಯ ಬೆಳಕಾಗಿ, ಏಕಾಂತದಲ್ಲಿ ಪ್ರಿಯೆಯಾಗಿ, ನನ್ನ ಕೈ ಆಸರೆಯಾಗಿ ನಿಂತಿದೆ.

"ಪರಾಂಜಪೆ ಶ್ರೀಮಂತನಿರಬೇಕೆಂದು ಪ್ರತಿನಿತ್ಯ ಅವನಿಗೆ ಬರುತ್ತಿರುವ ತಿಂಡಿಯ ಪಾರ್ಸಲ್ಲಿನಿಂದ ತಿಳಿಯಿತು. ಮೊದಲು ತಿಂಡಿ ತಿನ್ನುವಾಗ, 'ನೀವೂ ತೆಗೆದುಕೊಳ್ಳಿ' ಎಂದು ಆಗ್ರಹ ಮಾಡಿದ್ದನು. ನಾನು ಒಪ್ಪದ್ದರಿಂದ ಒಂದು ದಿನ ಕೈಹಿಡಿದು,

'ಈ ತಿಂಡಿ ನಿಮ್ಮ ಗಂಟಲಲ್ಲಿ ಇಳಿಯುವದಿಲ್ಲವೆ?' ಎಂದನು.

'ನೀವೇಕೆ ಅಷ್ಟು ಆಗ್ರಹಪಡಿಸುತ್ತೀರಿ?'

'ಕೊಟ್ಟ ತಿಂಡಿಯನ್ನಾರಾದರೂ ತಿನ್ನದೇ ಇರುತ್ತಾರೆಯೆ?'

'ಉತ್ತರ ಹೇಳಲೇ? ಕೇಳಿದರೆ ನಿಮಗದು ಬೇಸರವಾದೀತು.'

'ನೋಡಿ, ಮಿ. ರವಿ, ನನ್ನ ತಂದೆ ಅಗರ್ಭ ಶ್ರೀಮಂತರು. ನಾನು ಅವರ ಏಕಮಾತ್ರ ಪುತ್ರ. ಅವರು ಗಳಿಸಿಟ್ಟದ್ದನ್ನು ನಾನೊಬ್ಬನೇ ತಿಂದು ಅರಗಿಸಲಾರೆ.'

'ನೋಡಿ ಪರಾಂಜಪೆ, ಈ ತಿಂಡಿಗಳನ್ನು ತಮ್ಮ ಮಗನಿಗೆಂದು ನಿಮ್ಮ ತಂದೆ-ತಾಯಿಗಳು ಪ್ರೀತಿಯಿಂದ ಕಳುಹಿಸಿಕೊಟ್ಟದ್ದರಿಂದ ನೀವೊಬ್ಬರೇ ತಿನ್ನ ಬೇಕು.'

'ಅದನ್ನು ನನಗೆಂದೇ ಕಳುಹಿಸಿರುವರೆಂದು ನೀವು ಒಪ್ಪುತ್ತೀರಲ್ಲವೆ?'

"ಹಾಗೆನ್ನುವಂತೆ ತಿಳಿದೂಗಿದೆ.

'ಹಾಗಾದರೆ ಆ ತಿಂಡಿಯ ಮೇಲೆ ನನ್ನದೇ ಸಂಪೂರ್ಣ ಅಧಿಕಾರವಿರು ವದರಿಂದ ಈಗ ಈ ತಿಂಡಿಯನ್ನು ನಾನು ಕೊಟ್ಟದ್ದೆಂದು ನೀವು ತಿನ್ನಬೇಕೇ ಹೊರತು, ತಂದೆಯವರು ಕಳುಹಿಸಿಕೊಟ್ಟಿದ್ದಾರೆಂದಲ್ಲ.'

ಅಂದಿನ ಫಿರ್ಯಾದೆ ನಿಕಾಲೆಯಾಗಿ, ಕೊಡುಗೆಯಾಗಿ ಬರುತ್ತಿರುವ ಆಸ್ತಿಯನ್ನು ನಾವಿಬ್ಬರೂ ಹಂಚಿಕೊಳ್ಳತೊಡಗಿದೆವು.

ಪ್ರತಿ ಸಿಗರೇಟನ್ನೂ ಪರಾಂಜಪೆಯೊಡನೆಯೇ ಕೇಳಬೇಕಲ್ಲ ಎಂದು ತಿಳಿದು ನನಗೇ ಬೇಸರವಾಗಿ, ನಾನೇ ಪರಾಂಜಪೆಯೊಡನೆ ಬೇಡಿಕೊಂಡೆ,

'ನೋಡಿ ಪರಾಂಜಪೆ, ನಾಳೆಯಿಂದ-ನಾನು ಸಿಗರೇಟ ಸೇದುವದಿಲ್ಲ.'

'ಅದಕ್ಕೆ ನಾನೇನು ಮಾಡಬೇಕು?'

'ನೀವು ಬೇಸರಪಟ್ಟುಕೊಳ್ಳಬಾರದು.'

'ಆಗಲಿ, ಅರ್ಜಿಯನ್ನು ದಾಖಲ ಮಾಡಿರಲ್ಲ. ನೀವೀಗ ಜಡ್ಜೋ ವಕೀಲರೋ?'

'ಹಾಗೇಕೆ ಕೇಳುತ್ತೀರಿ?'

'ನ್ಯಾಯ ಕೊಡಲು.'

'ಹಾಗಾದರೆ ನಾನು ವಕೀಲ, ನೀವೇ ಜಡ್ಜಾಗಿ.'

'ನೋಡಿ, ಇದು ನಮ್ಮ ನಿಕಾಲೆ. ನಿಮ್ಮ ಅರ್ಜಿಯು ಸ್ವೀಕರಿಸಲು ಅಯೋಗ್ಯವಾದುದರಿಂದ, ವಕಾಲತ್ತು ಪುರಾವೆಗಳನ್ನು ಸಾದರಪಡಿಸಿ ಕೊಳ್ಳದೆ, ನಮ್ಮ ಸ್ವಂತ ಮರ್ಜಿಯಿಂದ ಕಿತ್ತು ಹಾಕಲಾಗಿದೆ. ಇಷ್ಟೇ ಅಲ್ಲ, ಪುನಃ ಈ ಬಗ್ಗೆ ಮೇಲಿನ ಕೋರ್ಟಿಗೆ ಅಪೀಲ ಮಾಡಿಕೊಳ್ಳಲು ಬರಲಾರ

ದೆಂದು ಈ ನಿಕಾಲೆಯೊಂದಿಗೆ ನಮ್ಮ ಇವತ್ತಿನ ಹಿಯರಿಂಗ (ಅರ್ಜಿ ವಿಚಾರಿಸುವದು )ನ್ನು ಮುಕ್ತಾಯ ಮಾಡಿದ್ದೇವೆ.'

"ಅವನು ಹೇಳುವ ರೀತಿಯಲ್ಲಿ ಇವನು ಜಡ್ಜನೋ ಎನ್ನುವಷ್ಟು ಸಾಮ್ಯವಿತ್ತು. ನಾನು ಜಡ್ಜರ ಮರ್ಜಿಯನ್ನು ಹಿಡಿಯುವದಕ್ಕೆ ಕೈಜೋಡಿಸಿ ವಿನಯದಿಂದ ಬೇಡಿಕೊಂಡೆ :

'ರಾಯರೇ, ಈ ರೀತಿ ತಾವು ನಿಕಾಲೆ ಮಾಡುತ್ತ ಹೋದರೆ, ದಿವಾಣಿ ಕೋರ್ಟಿನ್ನೇ ಕೊಳ್ಳೆಹೊಡೆದೀರಿ. ಪಿನಲ್‌ಕೋಡಿನ ಕಲಮುಗಳು ತಿದ್ದುಪಡೆಯಾಗಬೇಕಾದೀತು.'

"ಇಬ್ಬರಿಗೂ ನಗು ತಡೆಯಲಾಗದ್ದರಿಂದ ಹೊಟ್ಟೆತುಂಬ ನಕ್ಕುಬಿಟ್ಟೆವು. ನಗುವಿನ ಪ್ರತಾಪದಿಂದ ಇಬ್ಬರ ಕಣ್ಣುಗಳೂ ನೀರೊಡೆದವು. ಕೊನೆಯಲ್ಲಿ ಅವನೇ ಹೇಳಿದನು :

'ಜಡ್ಜಮೆಂಟ ಕೇಳಿದಿರಲ್ಲವೆ?'

'ಹಾಗಲ್ಲ ಪರಾಂಜಪೇ, ಬಿಡಿಗಾಸು ಗಳಿಸಲು ಗತಿಯಿಲ್ಲದ ನಾವು ಬರೇ ಸಿಗರೇಟಿಗಾಗಿ ಐದಾಣೆ ಖರ್ಚು ಮಾಡಿದರೆ ಗತಿಯೇನು? ಇಲ್ಲಿ ನೀನಿರುವ ತನಕ ಕೊಟ್ಟೇರಿ. ನಂತರ ಸೇದುವ ಚಟ ಬಂದಾಗ ಯಾರ ಜೇಬಿಗಾದರೂ ಕತ್ತರಿ ಹಾಕಬೇಕಾದೀತಲ್ಲವೆ? ಆದುದರಿಂದ ದಯವಿಟ್ಟು ಸಿಗರೇಟ ಸೇದಲು ನನ್ನನ್ನು ಇಷ್ಟು ಆಗ್ರಹ ಪಡಿಸಬಾರದು.'

'ಇದಕ್ಕೇ ನಿಮಗೆ ಮಂಕುಪ್ರಾಣಿಗಳೆನ್ನಬೇಕು. ಸಾಲಾಗಿ ನಿಲ್ಲಿಸಿದ ಹೆಣ್ಣುಗಳಲ್ಲಿ ಇವಳೇ ಚೆಂದುಳ್ಳ ತುಟಿ, ಮೂಗಿನವಳೆಂದು ಬೊಟ್ಟು ತೋರಿಸಿ ಆರಿಸಿ, ಮದುವೆಯಾದ ಮೇಲೆ ಇವಳ ಹೊಟ್ಟೆ ಬರಿದೇ ಹೋಗ್ಲಿ, ಇವಳ ಹೊಟ್ಟೆ ತುಂಬ್ಸೋಕೆ ಆಗೋದಿಲ್ಲ. ಇದೆಲ್ಲ ಶನಿ ಮುಂಡೇದು ಗಂಟುಬಿತ್ತಪ್ಪ ಎಂದುಕೊಂಡು ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತರೆ! ಎಲ್ಲರೂ ಒಳ್ಳೆಯದನ್ನೇ ಮಾಡಿದರಲ್ಲವಯ್ಯಾ! ಹಾಗೆಲ್ಲಾ ಆಗೋದಾಗಿದ್ರೆ ಈ ಪ್ರಪಂಚವೇ ಉಲ್ಟಿ ಹೊಡ್ದೀತಿತ್ತು.'

"ಅದಕ್ಕೆ ನಾನೇನು ಉತ್ತರ ಹೇಳಬೇಕು, ಶ್ರೀನಾಥ? ಸನ್ಯಾಸಿಯ ಸೋಗು ಹಾಕಿದಂತಾಯಿತು. ಬಕಪಕ್ಷಿ—ಹಸಿವೆಯಿಂದ ಹೊಳೆದಂಡೆಯಲ್ಲಿ ಕುಳಿತು, ಮೀನು ಬರಲಿ ಎಂತ, ನಾನು ಮೀನು ತಿನ್ನೋದಿಲ್ಲ, ಬ್ರಹ್ಮ ಮೀನು

ತಿನ್ನುವವಕ್ಕೆ ಕೊಡದು ಪಾಪ ಬರುತ್ತದೆ ಎಂದಿದ್ದಾನೆ ಎನ್ನುವಂತಾಯಿತು. ತಿಳಿ ಯದೆ ಮಜ ಮಾಡುವವಕ್ಕೆಂದು ಕೈಹಿಡಿದ ತಪ್ಪಿಗೆ, ಅದೇ ದಿನವೇ ಪರಾಂಜಪೆ ನನ್ನ ಮತ್ತು ಸಿಗರೇಟಿನ ರಜಿಸ್ಟರ ಮದುವೆ ಮಾಡಿಸಿಬಿಟ್ಟ.

"ನೋಡು ಶ್ರೀನಾಥ, ಏನೋ ಹೇಳಬೇಕೆಂದು ಮನಸ್ಸಿದ್ದರೂ ಬೇರೇನೊ ನೆನಪಾಗಿ ಅದನ್ನೇ ಹೇಳುತ್ತ ಹೋದರೆ ಹರಿಕತೆಗಿಂತ ಉಪಕತೆ ಹೆಚ್ಚಾಯಿತು ಎನ್ನುವಂತಾಗುತ್ತದೆ. ನಾನೇನನ್ನೋ ಹೇಳಲು ಬಯಸಿದ್ದೆ. ಆದರೆ ಹೇಳಿದ್ದೇ ಬೇರಾಯಿತು.

"ಹೌದು, ಮೇಲಿನ ಪರಾಂಜಪೆಯೇ ಆ ದಿನವೂ ಹೇಳಿದ್ದು ; ಅವನು ಹೊರಡುವ ತಯಾರಿಯಿಂದ ಗಂಟುಮೂಟೆ ಕಟ್ಟುತ್ತಿರುವಾಗ, ಯಾವದೋ ಸಾಮಾನಿನ ನೆನಪಾಗಿ, ತರಬೇಕೆಂದು ರವಿವಾರ ಪೇಟೆಗೆ ಹೋದ. ಅವನು ತಿರುಗಿ ಬಂದಾಗ, ನಾನು ಓದುತ್ತ ಕುಳಿತಿದ್ದೆ. ಅದನ್ನು ನೋಡಿ ನನ್ನನ್ನು ಕೇಳಿದ:

'ಏನು ತಮ್ಮಾ, ಸ್ವದೇಶಾಗಮನ ಎಂದು ?'

'ನಾಳೆ ಹೊರಡಬೇಕೆಂದು ಮಾಡಿದ್ದೇನೆ.'

'ಯಾವಾಗಾದರೂ ಆಸಾಮಿಗೆ ಭೆಟ್ಟಿಯಾಗುವದಿದೆಯೊ? ನೀವು ಕಾನಡಿ ಮುಲಗಾ, ಬಲು ಹುಷಾರಿ ಜನ. ನಿಮ್ಮನ್ನು ನೋಡಿದರೆ ಮೊನ್ನರೆಂದೇ ಹೇಳ ಬೇಕು. ಆದರೆ ನೀವು ಕೊಡುವ ಸಣ್ಣ ಗುದ್ದುಗಳು ಪೈಯಲ್ಲಿ ಹಣ್ಣು ಮಾಡುತ್ತವೆ.'

"ಅವನು ಆಡುತ್ತಿದ್ದ ಮಾತಿನರ್ಥವೇ ಬೇರೆ. ಕಾಲೇಜ ಹುಡುಗಿಯ ರೊಡನೆ ಕಿವಿಕಚ್ಚಿ ಮಾತಾಡುವದೇನಾದರೂ ಇದೆಯೋ ಎನ್ನುವದು ಅವನ ಮಾತಿನರ್ಥವಾಗಿತ್ತು ; ನಾನು ಅದನ್ನು ತಿಳಿದುಕೊಂಡೆ.

"ಕಾನಡೀ ಮುಲಗಾ ಮರಾಠೀ ಮುಲಗೀ ಜತೆ ಸ್ನೇಹ ಬೆಳೆಸಿಕೊಳ್ಳುವ ದಿಲ್ಲ. ಯಾಕೆಂದರೆ ಮರಾಠಿ ಹೆಣ್ಣುಮಕ್ಕಳನ್ನು ಮದುವೆಯಾದರೆ, ಅವರಿಗೆ ಕನ್ನಡ ಕಲಿಸಲು ಬೇರೊಬ್ಬ ಮಾಸ್ತರರನ್ನು ಇಟ್ಟುಕೊಳ್ಳಬೇಕಾದೀತು. ದನಕ್ಕೆ ತಿನಿಸುವಂತೆ ನಮಗೆ ಸೊಪ್ಪು-ಗಡ್ಡೆಗಳನ್ನು ಕೊಚ್ಚಿ ಹಾಕಿ ತಿನ್ನು ಎಂದರೆ ನಾವು ಹೇಗಪ್ಪಾ ತಿನ್ನುವದು."

"ನನ್ನ ಆಲೋಚನೆ ಕೇಳಿ ಪರಾಂಜಪೆಯೇಕೋ ಉಕ್ಕುಕ್ಕಿ ನಕ್ಕುಬಿಟ್ಟ. ಮತ್ತೆ ಮೊದಲಿನ ವಿಚಾರ ಹರಿದು ಕೇಳಿದ : 'ನಿಮಗೆ ಆಪ್ತರಾರೂ ಇಲ್ಲವಲ್ಲ?'

'ಹೌದು.'

'ಹಾಗಾದರೆ ನೀವು ಬೆಳೆದ ಊರೆಂದು ಅಲ್ಲಿ ಹೋಗಿ ಏನು ಮಾಡುವದಿದೆ?'

'ಅದೇ ಬೆಟ್ಟ-ಗುಡ್ಡಗಳನ್ನೆಲ್ಲ ಪುನಃ ನೋಡಬಹುದಲ್ಲ.'

'ಎಷ್ಟೋ ಸಲ ನೋಡಿಯಾಗಿದೆ. ಮತ್ತೆ ನೋಡಲೂಬಹುದು. ಮತ್ತು ಈ ಎರಡೂವರೆ ತಿಂಗಳುಕಾಲ ಇಲ್ಲಿರಲೂ ಸಾಧ್ಯವಿಲ್ಲ; ನಮ್ಮೂರಿಗಾದರೂ ಬನ್ನಿ.'

'ಇಲ್ಲೇ ಉಳಿಯಬೇಕೆಂದು ಆಲೋಚಿಸಿರುವೆ.'

'ಪುಣಾದ ಸಂದಿ ಮತ್ತು ಬೀದಿಗಳನ್ನು ಸುತ್ತುವದಕ್ಕೆ ತಾನೇ!'

'ಅಲ್ಲ, ಈ ಅವಧಿಯಲ್ಲಿ ಏನಾದರೂ ಕೆಲಸ ಮಾಡಿ, ಸ್ವಲ್ಪಾದರೂ ಹಣ ಸಂಗ್ರಹಿಸಿದರೆ ಮುಂದಿನ ವರುಷದ ನೆರವಿಗಾಗುವದಿಲ್ಲವೆ?'

'ಮಹಾರಾಜರು ಬರುತ್ತಾರೆಂದು ನಿಮಗೆ ಕೆಲಸ ಕಾದಿಟ್ಟಿದ್ದಾರಲ್ಲವೆ? ಏನು ಹುಚ್ಚು ನಿಮಗೆ? ನನ್ನೊಡನೆ ಹೊರಡಿ. ರಜಾ ಮುಗಿದ ನಂತರ ಮತ್ತೆ ಬರಬಹುದು.'

'ಅಲ್ಲಿ ಸುಮ್ಮನೇ ಕಾಲಕಳೆಯಬೇಕಲ್ಲ.'

'ಇಲ್ಲ. ನಾನು ಅಲ್ಲಿ ನಿಮಗೆ ನೌಕರಿಯನ್ನು ಕೊಡಿಸುತ್ತೇನೆ.'

'ಚೇಷ್ಟೆ ಮಾಡಬೇಡಿ ಮತ್ತೆ.'

'ನಿಜವಾಗಿಯೂ.'

"ಹಾಸಿಗೆ, ಪುಸ್ತಕಗಳನ್ನೆಲ್ಲ ಹಾಸ್ಟೆಲ್ ಸುಪರಿಂಟೆಂಡೆಂಟರಿಗೆ ಹೇಳಿ ಬೇರೆ ರೂಮಿನಲ್ಲಿರಿಸಿದ್ದಾಯಿತು. ಲಕ್ಷ್ಮಣರಾಯರ ನೆನಪಾಯಿತು. 'ಪರೀಕ್ಷೆಯಾದ ಮೇಲೆ ಕುಳಿತಿರಬೇಡ, ದೊಡ್ಡ ಊರು, ಬಂದುಬಿಡು' ಎಂದು ಬರೆದಿದ್ದರು. ಬರಲಾಗದ್ದಕ್ಕೆ ಕ್ಷಮೆ ಕೇಳಿ, 'ನಿನ್ನಣ್ಣ ಮುಂದಿನ ವರುಷ ಬರುತ್ತಾನೆಂದು ಗೌರಾಳಿಗೆ ತಿಳಿಸಿ, ಲಚ್ಚಿ ಆರೋಗ್ಯವಾಗಿರುವಳಷ್ಟೇ?' ಎಂದು ಪತ್ರ ಬರೆದು ಮುಗಿಸಿ ಟಪಾಲ ಡಬ್ಬಿಗೆ ತುರುಕಿದೆ.

"ಪರಾಂಜಪೆಯ ಒತ್ತಾಯಕ್ಕೆ ಇದ್ದ ಬಟ್ಟೆಯನ್ನೆಲ್ಲ ಸರಿಮಾಡಿ, ಕೈಚೀಲದಲ್ಲಿ ತುಂಬಿ, ಮೋರೆ ತೊಳೆದುಕೊಂಡು ಬರಲು ಬಾವಿಗೆ ಓಡಿದೆ. ತಿರುಗಿ ಬರುತ್ತಿರುವಾಗ ಪರಾಂಜಪೆ ಹೇಳಿದ.

'ಏನೋ ಮಹಾರಾಯ, ಹೆಂಡತಿಯನ್ನು ತವರುಮನೆಯಿಂದ ಗಂಡನ ಮನೆಗೆ ಕರೆದೊಯ್ಯುವದಕ್ಕಿಂತಲೂ ಹೆಚ್ಚಾಯಿತಲ್ಲ!'

'ಹೌದು, ಹೊಸ ಗಂಡನ ಜೊತೆ ಹೊರಡಬೇಕಲ್ಲವೆ?'

## ೭

" ರವಿವರ್ಮ, ಊರು ನೋಡುವದಿಲ್ಲವೆ ? "

" ಏನು ಈ ಬೆಳುವಲದ ಬೈಲನ್ನೇ ? "

" ಇಲ್ಲಿಯ ಮನೆಗಳನ್ನೆಲ್ಲ ಸುತ್ತಬಹುದಲ್ಲ. "

" ಆ ಜೋಳತಲೆಯ ಮನೆಯನ್ನು ಕಂಡಾಗಲೆಲ್ಲ ನನ್ನ ಮನಸ್ಸು ಬರಿದಾಗುತ್ತದೆ. "

ಹಾಗೆಯೇ ನಾನೂ ಪರಾಂಜಪೆ ಸುತ್ತಾಡುತ್ತ ಹೊರಟೆವು. ಅಲ್ಲೇನು ವಿಶೇಷವಿರಲಿಲ್ಲ. ಉಷ್ಣಪ್ರದೇಶ. ಇಲ್ಲಿ ದೊಡ್ಡ ದೊಡ್ಡ ಶ್ರೀಮಂತರ ಮನೆಗಷ್ಟೇ ಹಂಚು ಹೊದಿಸಿದ್ದರು. ಅಲ್ಲಿಯ ಪರಿಚಯದ ಜನವೆಲ್ಲ ಪರಾಂಜಪೆಯನ್ನು ' ರಾಯರೆ ' ' ಸಣ್ಣ ಸಾಹುಕಾರರೆ ' ಎಂದು ಕರೆದು, ನಮ್ಮನ್ನು ಮರೆಯಬೇಡಿ. ಎನ್ನುವ ದೀನ ದೃಷ್ಟಿಯಿಂದ ನೋಡಿ, ಕೈಮುಗಿದು, ತಾಂಬೂಲದ ಬಾಯನ್ನು ಹಿಗ್ಗಿಸಿ, ಕಪ್ಪು ಹಲ್ಲುಗಳನ್ನು ಪ್ರದರ್ಶಿಸಿ ಮರೆಯಾಗುತ್ತಿದ್ದರು. ಇವರ ಮನೆಯಿಂದ ಒಂದು ಮೈಲಾಚೆ ಕೃಷ್ಣಾನದಿ ಹರಿಯುತ್ತಿತ್ತು. ಕೆಲವು ಕಡೆಯಲ್ಲಿ ಅದರ ಒಣಪ್ರದೇಶವಷ್ಟೇ ಕಾಣುತ್ತಿದ್ದರೆ, ಬೇರೆಡೆಯಲ್ಲಿ ಎದೆ ಮುಣುಗುವಷ್ಟು ನೀರು ಮಾತ್ರ ಪ್ರದರ್ಶಿತವಾಗುತ್ತಿತ್ತು. ಚಲನೆಯಿಲ್ಲದ ನದಿಯ ನೀರನ್ನು ನೋಡುವಾಗ್ಗೆ ಇದು ನದಿಯಲ್ಲ, ಜಲಾಶಯವಿರಬೇಕು ಎನ್ನುವಂತಿತ್ತು. ನಿಜವಾಗಿಯೂ ಆ ನದಿಯ ನೀರು ಅತಿ ಮಂದವಾಗಿ ಪ್ರವಹಿಸುತ್ತಿತ್ತು.

ಅಲ್ಲಿ ನೋಡುವದಾದರೂ ಏನಿದೆ ? ದೃಷ್ಟಿ ಓಡುವತನಕ ಬೈಲು. ಅಲ್ಲಲ್ಲಿ ಜಾಲಿ ಹಾಗೂ ಬೇವಿನ ಮರಗಳು. ಮತ್ತು ಅಲ್ಲಲ್ಲಿ ಹುಣಸೆ ಮರ. ಅಲ್ಲಿಯೇ ಹುಟ್ಟಿ ಬೆಳೆದ ಜನಕ್ಕೆ ಅಲ್ಲಿಯ ವಾಸ, ಆಹಾರ, ನದಿಯ ನೀರು ಹಿಡಿಸಲೇಬೇಕೇ ಹೊರತೂ ನಮ್ಮ ಜನ ಅಲ್ಲಿ ಖಾಯಂ ನೆಲಸಲಾರರು.

ನಾನು ಪರಾಂಜಪೆಯ ಮನೆಗೆ ಬಂದು ನಾಲ್ಕಾರು ದಿನಗಳಾಗಿದ್ದವು. ಸುಖದೂಟ, ಸುಖನಿದ್ರೆ, ಪರಾಂಜಪೆಯ ತಂದೆಗೆ ಗೊತ್ತಾಗದಂತೆ ಅವನ

ರೂಮು ಸೇರಿ ಸಿಗರೇಟೆ ಸೇದುವದು; ಇಷ್ಟೇ ನಮ್ಮ ಕಾರ್ಯಕ್ರಮ. ಅವರ ಮನೆ ವಿಶಾಲವಾಗಿತ್ತು. ಮನೆಯ ಪ್ರಧಾನ ಬಾಗಿಲಿಗೇ ಅದನ್ನು ಕಟ್ಟಿಸುವ ಕಾಲಕ್ಕೆ ೧೫೦ ರೂಪಾಯಿಯನ್ನು ಕೊಟ್ಟಿದ್ದರಂತೆ. ಬಾಗಿಲಿಗೆ ಕೆತ್ತಿದ ಬಳ್ಳಿಗಳು, ಸಹಸ್ರದಳದ ಕಮಲ, ಮೇಲ್ಭಾಗದಲ್ಲಿ ಕೆತ್ತನೆಯ ಲಕ್ಷ್ಮಿ ಹಾಗೂ ಅವಕ್ಕೆ ಅಭಿಷೇಕ ಮಾಡುತ್ತಿರುವ ಮರಿಯಾನೆಗಳು ಚಿತ್ರಕಾರನ ಹೆಮ್ಮೆಯನ್ನು ಪ್ರದರ್ಶಿಸುತ್ತಿದ್ದವು. ಮನೆಯ ತಳದ ಗೋಡೆ ಒಂದು ಯಾರ್ಡಿಗೂ ಮಿಕ್ಕಿ ಅಗಲವಾಗಿತ್ತು. ಸುಮಾರು ಹತ್ತೊಂಬತ್ತು ನೂರಾ ಇಪ್ಪತ್ತೈದನೆಯ ಇಸ್ವಿಯ ಕಾಲಕ್ಕೇ ಆ ಮನೆ ಕಟ್ಟಲು ಹದಿನೆಂಟು ನೂರು ರೂಪಾಯಿಗಳು ಖರ್ಚಾಗಿದ್ದವಂತೆ.

"ಪರಾಂಜಪೆಯ ತಂದೆಯವರೇ ಮನೆಯ ಹಿರಿಯರು ಹಾಗೂ ಯಜಮಾನರು. ಒಬ್ಬನೇ ಮಗ. ಬೆನ್ನಿಗೆ ಹೆಣ್ಣೂ ಇಲ್ಲ, ಗಂಡೂ ಇಲ್ಲ. ಅವರ ಕುಟುಂಬದ ಜನವೆಲ್ಲ ಕೂಡಿ ಮನೆಯಲ್ಲಿ ಎಂಟಕ್ಕಿಂತ ಹೆಚ್ಚು ಜನರಿಲ್ಲ. ಮನೆಯ ಮೂಲದವರು ಮರಾಠರ ಆಳಿಕೆಯಲ್ಲಿ ಸರದಾರರಾಗಿದ್ದರಂತೆ. ಹಾಗಾಗಿ ಇವರದು ದೇಶಪಾಂಡೆಯ ಮನೆತನ.

"ಪರಾಂಜಪೆ ಮನೆಯ ಮೇಲ್ಭಾಗದಲ್ಲಿಯೇ 'ಬಿಡದಿ' ಹೂಡಿದ್ದ. ಆಧುನಿಕ ಠೀವಿಗೆ ಹೋಲುವ ರೀತಿಯಲ್ಲಿ ಅವನ ಕೋಣೆ ಸುಸಜ್ಜಿತವಾಗಿತ್ತು. ಇವರ ಮನೆಗೆ ಬಂದು ಕುಳಿತುಣ್ಣಬೇಕಾಯಿತಲ್ಲ ಎಂಬಿಷ್ಟೇ ನನಗೆ ಬೇಸರ. ಒಮ್ಮೆ ನಾವಿಬ್ಬರೂ ಕುಳಿತಿರುವಾಗ ಕೇಳಿದೆ :

'ಪರಾಂಜಪೆ, ಸುಮ್ಮನೆ ದಿನಗಳು ವ್ಯರ್ಥವಾಗುತ್ತಿವೆಯಲ್ಲ.'

'ಕೆಲವು ದಿನವಾದರೂ ಆರಾಮಾಗಿ ಇದ್ದುಬಿಡು.'

'ಹಾಗೇ ಕುಳಿತರೆ ನನಗೆ ತಿಂದದ್ದು ಜೀರ್ಣವಾಗುವದಿಲ್ಲವಲ್ಲ.'

'ನೌಕರಿಯ ಬಗ್ಗೆ ಎಲ್ಲಿಯಾದರೂ ಪ್ರಯತ್ನಿಸಬಹುದಲ್ಲ. ಆದರೆ ತಂದೆಯವರಿಗೆ ಗೊತ್ತಾದರೆ ತೊಂದರೆಯಾದೀತು.'

'ಗೊತ್ತಾಗದಂತೆ ನೋಡಿಕೊಂಡರಾಯಿತು.'

ಪರಾಂಜಪೆ ಸುಲಭವಾಗಿ ಹೇಳಿದರೂ ಅದು ಹೇಳಿದಷ್ಟು ಸುಲಭವಾಗಿರಲಿಲ್ಲ. ಎರಡು ಮೂರು ದಿನಗಳ ನಂತರ ಒಂದು ನಿರೂಪ ಕಂಡಿದ್ದ— ಯಾರೋ ಸೆನಿಟರಿ ಇನಸ್ಪೆಕ್ಟರಂತೆ, ಅವರ ಪಟ್ಟೇವಾಲ ರಜೆ ತೆಗೆದುಕೊಂಡಿದ್ದ

ರಿಂದ ಮೂರು ತಿಂಗಳದ ತಾತ್ಪೂರ್ತಿಕ ಸ್ಥಳಕ್ಕೆ ಒಬ್ಬ ಪಟ್ಟೇವಾಲ ಬೇಕಂತೆ, ಅದು ನಿನ್ನಿಂದ ಮಾಡಲು ಸಾಧ್ಯವಿದೆಯೆ ?

'ಬೇಡಿದವನಿಗೆ ಅದು ಇದು ಎನ್ನುವದಿದೆಯೆ ?'

'ಅಲ್ಲಯ್ಯಾ, ಇಷ್ಟು ಕಲಿತು ಪಟ್ಟೇವಾಲಗಿರಿಯೆ ? ಅದು ನಿನ್ನ ಹತ್ತರ ಸಾಧ್ಯವಿಲ್ಲಪ್ಪಾ ; ಊರೂರು ತಿರುಗಬೇಕು ; ಅನ್ನ-ನೀರು ಸರಿಯಾಗಿ ದೊರೆಯುವದಿಲ್ಲ ; ಸ್ವಲ್ಪ ವಿಚಾರಿಸಿ ನೋಡು.'

'ಪರಾಂಜಪೆ, ಆ ವಿಚಾರ ನನಗಿರಲಿ. ಆ ಇನಸ್ಪೆಕ್ಟರನ ಹತ್ತರ ವಾಸ್ತವಿಕ ವಿಚಾರ ಹೇಳಬೇಡ. ನಿಮ್ಮ ಮನೆಯಲ್ಲಿ ಕೆಲಸಕ್ಕಿದ್ದವನೆಂದುಬಿಡು. ಇನ್ನು ಊಟಕ್ಕೇನು ಮಾಡುವದು ?'

'ಊಟಕ್ಕೆ ಇಲ್ಲೇ ಬಂದುಬಿಡು. ಮನೆಯವರಿಗೆ ಹೇಗಾದರೂ ಸಮಾಧಾನ ಹೇಳೋಣ. ಆದರೆ ನೀನು ಇಂತಹ ಕೆಲಸಕ್ಕೆ ಒಪ್ಪಿಕೊಂಡಿಯಲ್ಲ ಎಂದು ಮನಸ್ಸಿಗೆ ನೋವಾಗುತ್ತದೆ.'

'ಆದೆಲ್ಲ ನನ್ನದೆಂದು ತಿಳಿದು ಸುಮ್ಮನಿರು.'

'ಒಮ್ಮೆ ತಂದೆಯವರಿಗೆ ಗೊತ್ತಾದರೆ ಸುಮ್ಮನೆ ನಾಚಿಕಗೇಡು.'

'ಅಂತಹ ಪ್ರಸಂಗದಲ್ಲಿ ಸಹಾಯ ಮಾಡಲು ನೀನಿದ್ದೀಯಲ್ಲ.'

'ನಿನ್ನ ಈ ಹುಚ್ಚಾಟಿಕೆಗೆ ಏನೆನ್ನಬೇಕೋ ತಿಳಿಯದಾಗಿದೆ.'

'ಏನೇ ಇರಲಿ, ನಾಳೆ ಮುಂಜಾನೆ ಹೋಗೋಣವೆ ?'

"ಅವನೂ ಒಪ್ಪಿದ. ಮುಂಜಾನೆ ಇನಸ್ಪೆಕ್ಟರನನ್ನು ಭೆಟ್ಟಿಮಾಡಿದ್ವು. ಕರಿಯ ದಾಂಡಿಗ ಮನುಷ್ಯ ; ಕೆಂಪು ಕಣ್ಣಿನವ ; ಬಲು ಸಿಟ್ಟಿನವನಿರಬೇಕೆಂದು ತಿಳಿಯಿತು. ಅವನಿಗಿರುವವರು ತಾಯಿ, ಎರಡು ಜನ ಹೆಣ್ಣುಮಕ್ಕಳು. ಹೆಂಡತಿ ಸತ್ತು ಆಗಲೇ ಎರಡು ವರ್ಷವಾಯಿತಂತೆ. ಅವನನ್ನು ನೋಡಿದಾಗಲೇ ಭಾವೀ ನೌಕರಿಯ ಬಗ್ಗೆ ನನಗೇಕೋ ಅಳುಕುಂಟಾಯಿತು. ಪರಾಂಜಪೆ ಹೇಳಿದ, 'ಯಾವದೋ ಕಾರವಾರೀ ಜನವಿದು, ನಮ್ಮ ಹೊಸ್ಟೆಲ್ಲಿನಲ್ಲಿ ಭೆಟ್ಟಿಯಾಗಿತ್ತು. ನಮ್ಮ ಮನೆಯಲ್ಲಿ ಕೆಲಸಕ್ಕೆ ಇಟ್ಟುಕೊಳ್ಳೋಣವೆಂದಿದ್ದೆ. ನೀವು ಕಾಯಂ ಕೆಲಸ ಕೊಡುವಂತಿದ್ದರೆ, ಇವನನ್ನು ನೀವೇ ಇಟ್ಟುಕೊಳ್ಳಿ' ಎಂದನು. ನಿನಗೆ ಮರಾಠಿ ಬರುವದೋ ? ಎಂದು ಆ ಆಸಾಮಿ ಗಡಸು ಧ್ವನಿಯಲ್ಲಿ ಕೇಳಿದ. 'ಇಲ್ಲಾ' ಎಂದೆ. ಇನ್ನು ಕಲಿತುಕೊಳ್ಳುತ್ತಾನೆ ಎಂದುಕೊಂಡನು. ಅವೇ

ದಿನ ನಾನು ಪಟ್ಟೇವಾಲನ ಚಾರ್ಜು ವಹಿಸಿಕೊಂಡೆ. ಅಂದಿನಿಂದ ನಾನು ಪಟ್ಟೇವಾಲ. ಅದೊಂದು ದುರ್ದಿನದ ಕಹಿನೆನಪು ಶ್ರೀನಾಥ.

“ಪರಾಂಜಪೆ ಹೋದುದೇ ತಡ. ನಮ್ಮ ಅಧಿಕಾರಿಯ ಅಮಲು ನನ್ನ ಮೇಲೆ ಚಾಲೂ ಆಯಿತು. ‘ನಿನ್ನ ಹೆಸರೇನಪ್ಪ?’ ಎಂದರು. ಅಸಲು ಹೆಸರು ಹೇಳಿ ಆ ಹೆಸರಿಗೆ ಕಲಂಕ ತರುವದಕ್ಕಿಂತ ಬೇರೆ ಹೆಸರು ಹೇಳುವದೇ ಒಳಿತೆಂದು ಯೋಚಿಸಿ ‘ಶಂಕ’ ಎಂದೆ. ಆವನು ಸ್ವಲ್ಪ ಒಣ ನಗೆ ನಕ್ಕು, ಈ ಹಾಳೆಯ ಮೇಲೆ ಸಹಿ ಹಾಕಪ್ಪಾ ಎಂದು ಕಾಗದ ಕೊಟ್ಟನು. ನಾನು ಸೊಟ್ಟದಾಗಿ ಶಂಕ ಎಂಬೆರಡಕ್ಷರ ಬರೆದೆ.

“ಆವನಲ್ಲಿ ಸಾಮಾನಿನ ಒಂದು ದೊಡ್ಡ ಚೀಲವೇ ಇತ್ತು. ಅದರಲ್ಲಿ ನಾಲ್ಕೈದು ಚುಚ್ಚುವ ಆಯುಧಗಳು, ಲಸ್, ಸ್ಪಿರೀಟು, ಹತ್ತಿ ಇನ್ನೂ ಏನೇನೊ ಒಂದಿಷ್ಟು ಭಾರವಾಗುವ ಸಾಮಾನು ಇತ್ತು. ಅದನ್ನು ಹೊತ್ತುಕೊಂಡು, ಅವನ ಛತ್ರಿಯನ್ನು ಹಿಡಿದುಕೊಂಡು ಅವನೊಡನೆ ಸಾಗಬೇಕು. ಸೆನಟರಿ ರಾಯರೂ ಶೃಂಗಾರವಾಗಿ ಇದ್ದರು. ‘ಅದೋ ಅಲ್ಲಿ ಬೂಟಿನ ಜತೆಯಿದೆ; ಸ್ವಲ್ಪ ಅರಿವೆ ತಗೊಂಡು ಅದನ್ನು ಒರೆಸು’ ಎಂದನು. ನನಗೇಕೋ ಕಸಿವಿಸಿಯಾಯಿತು. ಉಪಾಯವಿಲ್ಲದೇ ಒರೆಸಿದೆ. ಅವರ ಬ್ಯಾಗ ಹೊತ್ತುಕೊಂಡು ಮುಂಬಾದೆ. ಆ ಶನಿರಾಯರು ದವಡೆ ಒಡೆಯುವಷ್ಟು ತಾಂಬೂಲ ತುಂಬಿಕೊಂಡು ಬಂದರು.

“ಯಾವದೋ ನಾಲ್ಕೈದು ಮೈಲು ದೂರದ ಹಳ್ಳಿ. ಅಲ್ಲಿಯ ಪಟೇಲರನ್ನು ಕರೆಯಿಸಿ ಅವರ ಹೇಳಿಕೆಯ ಪ್ರಕಾರ ಏಳೆಂಟು ಮಕ್ಕಳ ಕೈ ಚುಚ್ಚಿಯಾಯಿತು. ಪಟೇಲರೇ ಯಾರದೋ ಮನೆಯಿಂದ ಚಹ ಮಾಡಿಸಿ ತಂದಿದ್ದರು. ನಮ್ಮ ರಾಯರಿಗೆ ತಿಂಡಿಕೊಟ್ಟು, ನನಗೂ ಕೊಟ್ಟರು. ಚಹ ಕೊಡುವಾಗ್ಗೆ ನಮ್ಮ ರಾಯರು ಹೇಳಿದರು, ನಮ್ಮ ಸಿಪಾಯಿ ಚಹ ಕುಡಿಯುವದಿಲ್ಲವೆಂದು. ನನ್ನ ಪಾಲಿನ ಚಹವನ್ನೂ ಅದೇ ಆಸಾಮಿ ಗುಟುಕರಿಸಿತು. ನನಗೆ ನೀರಡಿಕೆಯಾಗಿ ಗಂಟಲೊಣಗಿ ಹೋಗಿತ್ತು. ಪಟೇಲರ ಹತ್ತಿರ ರಾಯರೇ ಸ್ವಲ್ಪ ನೀರು ಎಂದೆ.

“ಪಟೇಲರು ಒಳ್ಳೆಯ ಮನುಷ್ಯರಾಗಿದ್ದರು. ನೀರು ತರಿಸಿಕೊಟ್ಟರು. ಹೊಟ್ಟೆ ತುಂಬುವಷ್ಟು ಕುಡಿದು ಮನಸ್ಸಿನಲ್ಲಿಯೇ ಪಟೇಲರಿಗೆ ಕೃತಜ್ಞತೆ ಸಲ್ಲಿಸಿದೆ.

"ಬರುವಾಗ್ಗೆ ನಮ್ಮ ರಾಯರು ಪಟೇಲರ ಮನೆಯಿಂದ ನಾಲ್ಕು ಸೇರು ಅಕ್ಕಿ ನಾಲ್ಕು ಸೇರು ಗೋದಿ ತರಬೇಕೆಂದರು. ನಾನು ಅಯ್ಯೋ ಎಂದುಕೊಂಡೆ. ಹಮಾಲಿಗಳಿಗಿಂತ ಕೀಳಾಯಿತಲ್ಲ ನನ್ನ ಬಾಳು ಎಂದುಕೊಂಡೆ. ಮನೆ ಮುಟ್ಟಿದಾಗ್ಗೆ ೩ ಗಂಟೆಯಾಗಿತ್ತು. ನಮ್ಮ ರಾಮ ಬಟ್ಟೆ ಕಳಚಿ ಸ್ನಾನಕ್ಕೆ ಹೋದ, ನನ್ನನ್ನು ಕರೆದು, ನಾಲ್ಕು ಕೊಡ ನೀರು ಜಗ್ಗಲು ಹೇಳಿದ. ಅವರ ಮನೆಯಾಚೆಯೇ ಪಬ್ಲಿಕ್ ಬಾವಿಯಿದೆ. ಆ ಬಾವಿಯಿಂದಲೇ ನೀರು ತರಬೇಕು. ಬಾವಿಯ ನೀರು ಜಗ್ಗುವಾಗ್ಗೆ, ಬಾವಿಯ ತಿಳಿನೀರು ಕಂಡು ಕುಡಿಯ ಬೇಕೆನ್ನಿಸಿತು. ಹೊಟ್ಟೆ ತಣಿಯುವಷ್ಟು ನೀರು ಕುಡಿದು ರಾಯರ ಸ್ನಾನಕ್ಕೆ ನೀರು ತಕ್ಕೊಂಡು ಹೋದೆ. ರಾಯರು ಕಣ್ಣು ಕೆಂಪಗೆ ಮಾಡಿಕೊಂಡು ಹೇಳಿದರು. 'ಮಗನೆ, ನೀರು ತರೋಕೆ ಕಳಿಸಿದ್ರೆ ನೀರು ಕುಡ್ಕೊಂಡು ಬಿದ್ದಿದ್ಯಾ. ಸ್ನಾನಕ್ಕೆ ನಿಂತಿರೋದು ಕಣ್ಣಿಗೆ ಕಾಣಿಸೋದಿಲ್ವೆ. ನೋಡುತ್ತಾ ನಿಂತಿಯಲ್ಲ ದೆವ್ವನ ಹಾಗೆ; ನೀರು ಹಾಕಲ್ಲಿ. ಇನ್ನು ನಾಲ್ಕು ಕೊಡ ನೀರು ತಂದು ಸುರುವಿಡು.' ಮಾತಾಡದೆ ಅದೆಲ್ಲ ಮುಗಿಸಿ, ಕೊಡ ಇಟ್ಟು ಅವನ ಮನೆಗೆ ಹೋದೆ. ಅವನ ಇಬ್ಬರು ಹೆಣ್ಣುಮಕ್ಕಳು; ಇಬ್ಬರೂ ವಯಸ್ಸಿಗೆ ಬಂದವರೆ; ಊಟ ಮುಗಿಸಿ ಎಲೆ-ಅಡಿಕೆ ಜಗಿಯುತ್ತ ಕಾಲು ತೂಗುತ್ತ ಕುರ್ಚಿಯ ಮೇಲೆ ಕುಳಿತಿದ್ದರು. ನನ್ನ ಬಾಡಿದ ಮೋರೆ ನೋಡಿ, ಅವರಿಗೆ ಕರುಣೆ ಬಂತೋ ಏನೋ, 'ನಮ್ಮ ಮಠಿಯಾನ ಬದಲಿಗೆ ನೀನು ಬಂದೇನಪ್ಪಾ, ಯಾವ ಊರಪ್ಪಾ ನಿಂದು?' ಎಂದು ಒಬ್ಬಳು ಕೇಳಿದಳು. ನಾನು ಕಾರವಾರದವ ನೆನ್ನುವಾಗ ಅವರಜ್ಜಿ ಒಳಗಿನಿಂದ ಬಂದು, 'ಆ ಕೊಡ ತಕ್ಕೊಂಡು ಹೋಗಿ ನಾಲ್ಕು ಕೊಡ ನೀರು ಒಳಗೆ ತಾರಪಾ' ಎಂದಳು. ಅದನ್ನೂ ಉಸಿರುಕಟ್ಟಿ ಮಾಡಲೇಬೇಕಾಯಿತು. ರಾಯರು ಊಟ ಮುಗಿಸಿ ಮಲಗಲು ಹೋದರು. ನಾನಿನ್ನೂ ಹೊರಗಡೆಯೇ ಕುಳಿತಿದ್ದೆ. ನನಗಿನ್ನೂ ಊಟ ವಾಗಿರಲಿಲ್ಲ. ಹೋಗಲು ಅಪ್ಪಣೆ ತೆಗೆದುಕೊಳ್ಳಲೆಂದು, 'ರಾಯರೆ, ನಾನು ಹೋಗಲೆ' ಎಂದೆ. 'ಹೇಳೋದೇನು, ಆಗಲೇ ಹೋಗಬಾರದಿತ್ತೆ?' ಎಂದರು. 'ನಾಳೆ ಮುಂಜಾನೆ ಬೇಗ ಬಂದುಬಿಡು' ಎಂದು ಸೂಚನೆ ಇತ್ತರು.

"ಹುಂ, ಎಂದು ಹೊರಬಿದ್ದೆ. ಅಲ್ಲಿಂದ ಪರಾಂಜಪೆಯವರ ಮನೆಗೆ ಬಂದು

ಮೈಲು ದೂರವಿತ್ತು. ನಾನು ಊಟಮಾಡುವಾಗ್ಗೆ ಐದು ಗಂಟೆಯಾಗಿತ್ತು. ಪರಾಂಜಪೆ 'ಕೆಲಸ ಹೇಗಿದೆಯಪ್ಪ?' ಎಂದು ಕೇಳಿದ.

'ಏನೋ ಸರಿಯಾಗಿ ಗೊತ್ತಾಗುವದಿಲ್ಲ; ಇನ್ನೂ ನಾಲ್ಕು ದಿನ ಹೋಗಬೇಕು.'

'ಆಸಾಮಿ ಹೇಗೆ?'

'ಬಹಳ ಸಿಟ್ಟಿನವನೆಂತ ಕಾಣುತ್ತದೆ.'

'ತ್ರಿಕಟೆಯ ಸರಕಾರಿ ನೌಕರರೆಲ್ಲ ಹಾಗೆಯೇ; ಅತಿ ಉದ್ಧಟ ಸ್ವಭಾವದವನು.'

'ಅವನಿಗೆ ಇಬ್ಬರು, ಊರ್ವಸಿ-ಮೇನಕೆಯರಿದ್ದಾರೆ; ಇಂಗ್ಲೀಷ ಕಲಿಯುತ್ತಿದ್ದಾರೆ.'

'ಹಾಗಾದರೆ ಸ್ವಲ್ಪ ಎಚ್ಚರಿಕೆಯಿಂದಿರಪ್ಪಾ.'

'ಅದನ್ನು ಹೇಳುವ ಅವಶ್ಯಕತೆಯೇ ಇಲ್ಲ.'

'ಅಮ್ಮ ಕೇಳಿದರು, ನೀನು ಎಲ್ಲಿಗೆ ಹೋದಿಯೆಂತ? ನನಗೂ ಯೋಚನೆ ಮಾಡುವ ಪ್ರಸಂಗ ಬಂತು. ಅವರಿಲ್ಲೇ ಪಬ್ಲಿಕ್ ಸ್ಕೋಲಿನಲ್ಲಿ ಕೆಲಸಕ್ಕಿದ್ದಾರೆ; ಸಂಜೆಗೆ ಊಟಕ್ಕೆ ಬರುತ್ತಾರೆ ಎಂದೆ. ಅವರು ಕೇಳಿದರೆ ನೀನೂ ಹಾಗೆಯೇ ಅನ್ನು. ಇಲ್ಲವಾದರೆ ನಾನು ಪೇಚಿನಲ್ಲಿ ಸಿಗಬೇಕಾಗುವದು.'

"ನಾನು ಆಗುವದೆನ್ನುವಂತೆ ತಲೆದೂಗಿದೆ.

"ಬೆಳಗಿನ ಐದು ಗಂಟೆಗೇ ರಾಯರ ಮನೆಯ ಬಾಗಿಲಲ್ಲಿ ಹಾಜರಾದೆ. ಯಾರೂ ಎದ್ದಿರಲಿಲ್ಲ. ರಾಯರ ಸದ್ದಿಲ್ಲ. ಮುಂಜಾನೆ ಐದು ಗಂಟೆಗೇ ಬಾ ಎಂದಿದ್ದಾರೆ. ಎಬ್ಬಿಸಲಿಲ್ಲವಾದರೆ ಇನ್ನೇನಾದರೂ ಹಚ್ಚಿಕೊಂಡು ಕೂಗಾಡಿಯಾರು ಎಂದುಕೊಂಡೆ. ಕೂಗಿದೆ, 'ರಾಯರೆ, ರಾಯರೆ' ಎರಡ್ಮೂರು [illegible] ಕೂಗಿದೆ. ಗೃಹಸ್ಥರ [illegible]. 'ಇದು ಯಾವನಿವ [illegible] ಹೊರಗಡೆ ಒದರಿಕೊಳ್ಳುವನು! ಮುಂಜಾನೆಯೇ [illegible] [illegible]' ನನಗೆ ತಲೆ [illegible] ಎಂದಿತು; [illegible] [illegible]. [illegible] [illegible] ಬಂದು, 'ಏ ಹುಡುಗಾ, ಯಾಕೆ ಒದರಿಕೊಳ್ಳುತ್ತಿದ್ದೀ?' ಎಂದರು.

'ಮುಂಜಾನೆ ಐದು ಗಂಟೆಗೇ ಕೆಲಸಕ್ಕೆ ಬಾ ಎಂದಿದ್ದಿರಿ.'

'ಹೇಳಿರಬಹುದು, ಒಳಗಡೆ ಬಾ' ಎಂದು ಒಳಗಡೆ ಕರೆದೊಯ್ದಳು. ಮುಸುರೆ ಪಾತ್ರೆಗಳನ್ನು ತಿಕ್ಕಿ ಒಂದಿಷ್ಟು ತೊಳೆದು ತಾ ಎಂದು ಅಜ್ಞಾಪಿಸಿದಳು. ರಾಯರ ತಾಯಿ ಕೊಟ್ಟ ಕೆಲಸ ಅವಳೇ ಮಾಡಿದರೆ ಅವಳ ಕೈ ಬಿಚ್ಚುತ್ತವೆಯೆ? ಇದೂ ಒಂದು ಹೊಸ ಅನುಭವ. ಇರಲಿ, ಎಂದು ಪಾತ್ರೆ ತಿಕ್ಕಿದೆ ನಂತರ ಮನೆಸುತ್ತಲೂ ಕಸಗುಡಿಸಿಯಾಯಿತು. ಒಳಗಡೆ ನೀರು, ಬಚ್ಚಲ ಮನೆಗೆ ನೀರು ತುಂಬಿದ್ದಾಯಿತು. ರಾಯರು ಎದ್ದು ತಾಸುಗಟ್ಟಲೆ ಹಲ್ಲುಜ್ಜಿದರು. ನೀರು ಹಾಕುವದು ಮುಗಿದ ಮೇಲೆ ರಾಯರಿದ್ದಲ್ಲಿ ಹೋದೆ. 'ಹೋಗಲಾ, ಹಾಸಿಗೆ ತೆಗಿ, ಅದೂ ಹೇಳಬೇಕೇನು? ಮದುಮಗನ ಹಾಗೆ ನಿಂತುಬಿಟ್ಟೆಯಲ್ಲ. ಹಾಗೇ ಹಾಸಿಗೆಯಡಿ ಕಸ ಜಾಡಿಸಿ ಆ ಬೂಟ್ಸಗೆ ಸ್ವಲ್ಪ ಪಾಲಿಷ ಮಾಡು.'

'ನನಗೆ ಪಾಲಿಷ ಮಾಡುವದಕ್ಕೆ ತಿಳಿಯೂದಿಲ್ಲ ರಾಯರೆ!'

'ತಿಳಿಯೋದಿಲ್ಲ ಅಂದ್ರ ಏನು? ಎಲ್ಲಾನೂ ಕಲಿತೇ ಬರುತ್ತಾರೆಯೆ? ಬಂದ್ಹಾಂಗ ಮಾಡು.'

'ಬೂಟಿನ ಪಾಲಿಷ ಎಲ್ಲಿ ಇದೆ?'

'ಎಲ್ಲಿದೆ ಅಂದ್ರೆ! ಹುಡುಕಲಾ.'

'ಬ್ರಶ್ಶು.'

'ಅಯ್ಯೋ ಹುಚ್ಚಪ್ಪಾ! ಪಾಲಿಷ ಬಿಟ್ಟು ಬ್ರಶ್ ಇರುತ್ತದೆಯೆ?'

'ಈ ಮುಕ್ಕಣ್ಣನ ಹತ್ತರ ಮಾತಾಡುವದು ಕಷ್ಟವೆ? ಎಲ್ಲಾ ಉರುಟು ಸವಾಲು. ಅವನು ಹೇಳಿದ್ದಕ್ಕೇ ಹುಂ ಎಂದು ಸುಮ್ಮನುಳಿಯಬೇಕು. ಇವನ ಹತ್ತಿರ ದಿನಕಳಿಯುವದು ಕಷ್ಟವೆಂದು ಅರಿವಾಯಿತು; ಎಮ್ಮೆಯಂತೆ ಎರಡು ಹೆಣ್ಣುಮಕ್ಕಳನ್ನು ಬೆಳೆಸಿದ್ದಾನೆ. ಅವರಿಗೆ ನೀರು ಹಾಕಲೇನು ಧಾಡಿಯೆ? ಸರಕಾರ ನಮಗೆ ಪಗಾರ ಕೊಟ್ಟು, ಕೆಲಸ ಮಾಡಿಸಿಕೊಳ್ಳುವದು ಇವರ ಊಳಿಗಕ್ಕೆಂತೇ!'

ಇಷ್ಟರಲ್ಲಿ ರಾಯರದು ಚಹ ಕುಡಿದಾಗಿತ್ತು. ಅವರ ತಾಯಿ ನನ್ನನ್ನು ಹಿಂದುಗಡೆ ಕರೆದು ಒಣರೊಟ್ಟಿ ಇಟ್ಟು ಹೋದಳು. ಚಹವನ್ನು ಒಂದು ಉದ್ದ ಲೋಟದಲ್ಲಿ ತಂದಿಟ್ಟಳು. ಚಹ ಬೆಳ್ಳಗೂ ಇರಲಿಲ್ಲ, ಕೆಂಪಗೂ ಇರ ಲಿಲ್ಲ. ಸ್ವಲ್ಪ ಕುಡಿದೆ; ಸಿಹಿಯೂ ಇಲ್ಲ, ಕಹಿಯೂ ಇಲ್ಲ. ಅದಕ್ಕೆ ಬದಲಾಗಿ

ಒಗರು. ಆ ಚಹ ನನ್ನಿಂದ ಕುಡಿಯುವದಾಗಲಿಲ್ಲ; ಚೆಲ್ಲಿಬಿಟ್ಟೆ. ಅವರ ತಾಯಿ ಅದನ್ನು ನೋಡಿ, ' ಯಾಕೋ ಹಾಗೆ ' ಎಂದು ಕೇಳಿದಳು.

' ಅದನ್ನು ಕುಡಿಯೋದಕ್ಕಾಗುವದಿಲ್ಲಮ್ಮ; ಒಗರು ವಾಸನೆ ಬರುತ್ತಿದೆ. ಕುಡಿದರೆ ವಾಂತಿಯಾಗುತ್ತೆ.'

' ಇದಕ್ಕೂ ಮೊದಲು ಚಹ ಕುಡಿದಿದ್ದಿಯಾ ? '

' ಬೇಕಾದಷ್ಟು ಸಲ. '

ಮುದುಕಿ ಬೆಪ್ಪಾಗಿ ಒಳಗಡೆ ಹೋದಳು; ಆ ಇಬ್ಬರೂ ಹೆಣ್ಣುಮಕ್ಕಳು ಒಬ್ಬರೊಬ್ಬರ ಮುಖ ನೋಡಿಕೊಂಡರು. ರಾಯರಿಗೂ ನಮ್ಮ ಮಾತು ಕೇಳಿಸಿರಬೇಕು; ಅದಕ್ಕಾಗಿಯೇ ಹೇಳಿದರು, ' ನಿನ್ನನ್ನು ಕಾಯ್ದೇ ಮಾಡೋದಕ್ಕೆ ಕರೆಸಿಲ್ಲ; ಹೆಂಗಸರ ಹತ್ತಿರ ಕಾನೂನು ಓದಲಿಕ್ಕಲ್ಲ. ಆ ಬೂಟ್ಸು ತಕ್ಕೊಂಡು ಇನ್ನಷ್ಟು ತಿಕ್ಕು.'

" ಮೊದಲಿನ ದಿನದಂತೆಯೇ ಇವತ್ತು ಕೂಡ ನಾವು ಬೇರೊಂದು ಕಡೆ ಹೊರಟೆವು. ಅಲ್ಲಿಯೂ ಹಾಗೆ ಕಂಡ ಕಂಡ ಮಕ್ಕಳ ಕೈ ಚುಚ್ಚುವದಾಯಿತು. ಅಲ್ಲಿಯೂ ರಾಯರಿಗೆ ಚಹ ಬಂತು; ನಾನು ಮಾತ್ರ ಕುಡಿಯಲಿಲ್ಲ. ನೀರೇ ಒಳ್ಳೆಯದೆಂದು ಮೂಗಿನತನಕ ಕುಡಿದುಬಿಟ್ಟೆ. ಬರುವಾಗ್ಗೆ ಅವನ ಮನೆಯ ಸಾಮಾನಿನ ಭಾಂಡಾರವಿತ್ತು. ಆ ದಿನವೂ ಬರುವದಕ್ಕೆ ಎರಡು ಗಂಟೆ. ಅವನ ಹೆಣ ಶೃಂಗಾರ ಮಾಡುವದಕ್ಕೆ ಸ್ನಾನಕ್ಕೆ ನೀರು ಸುರಿದು ಕೊಡಬೇಕಾದ್ದಾಯಿತು. ಸ್ನಾನಮಾಡಿ, ಧೋತರ, ಶರ್ಟ್, ನಿಕ್ಕರೆಲ್ಲ ಅಲ್ಲೇ ಬಿಟ್ಟುಬಂದ. ಬಾವಿಗೆ ಹೋಗಿ ಅವನ್ನು ಒಗೆದು ತಂದೆ. ರಾಯರು ಊಟಮಾಡಿ ಮಲಗಿದ್ದರು. ಅವನ ಕಾಲಿಗೆ ಜೇನೆ ಬಂದಿತ್ತಂತೆ; ನನ್ನನ್ನು ಕರೆದು ಸ್ವಲ್ಪ ಕಾಲು ಒತ್ತಲು ಹೇಳಿದರು. ಒಂದು ತಾಸಿನತನಕ ಒತ್ತುತ್ತ ನಿಂತರೂ ಸಾಕೆನ್ನಲಿಲ್ಲ ಆ ಪ್ರಾಣಿ. ' ನಾನಿನ್ನೂ ಊಟ ಮಾಡಲಿಲ್ಲವೆನ್ನುವದು ಈ ಶಿಸಿದಾರರಿಗೆ ಗೊತ್ತಿಲ್ಲವೆ' ಎಂದುಕೊಂಡೆ. ಕಾಲು ತಿಕ್ಕಿದ ನಂತರ ಬಚ್ಚಲಿಗೆ ನೀರು, ಮತ್ತೆ ಒಳಗೆಲ್ಲ ನೀರು ತುಂಬಿ, ಅವನ ಹೆಣ್ಣುಮಕ್ಕಳು ಬೆಳೆಸಿದ ಹೂವಿನ ಗಿಡಕ್ಕೂ ನೀರು ಹಾಕಿದೆ. ಅಂತೂ ಅಷ್ಟು ಕೆಲಸ ಮಾಡಿ ಮನೆ ಸೇರಿಕೊಳ್ಳುವಾಗ್ಗೆ ಐದೂವರೆ ಆಗಿತ್ತು. ಎರಡೇ ದಿನಕ್ಕೆ ನನಗೀ ನೌಕರಿಯ ಮೇಲೆ ತಿರಸ್ಕಾರ ಬಂದು ಬಿಟ್ಟಿತ್ತು.

" ಸಾಮಾನ್ಯವಾಗಿ ದಿನನಿತ್ಯವೂ ಇದೇ ಕಾರ್ಯಕ್ರಮವಾಯಿತು.

" ಹೀಗೆ ಎಲ್ಲಿಯೂ ವಿಸಿಟಿಗೆ ಹೋಗದ ದಿನ ತಾನು ಬರುತ್ತೇನೆಂದು ತಿಳಿಸಲು ಹಳ್ಳಿಗೆ ಹೋಗಬೇಕು. ಅಪರಿಚಿತ ಊರಿಗೆ, ಅಪರಿಚಿತ ವ್ಯಕ್ತಿಯನ್ನು ಕೇಳಿಕೊಳ್ಳುತ್ತಾ ಅವನು ಕೊಟ್ಟ ರಿಪೋರ್ಟನ್ನು ಜಾರಿ ಮಾಡಿ ಬರಬೇಕು. ಕೆಲವು ಹಳ್ಳಿಗಳು ಏಳೆಂಟು ಮೈಲು ದೂರ ಸಹ ಇದ್ದವು. - ಮತ್ತೆ ಅವನಿಗೆ ನಾಳೆ ಹೋಗಲಾಗದಿದ್ದರೆ, ಮತ್ತೆ ಪುನಃ ನಾನಲ್ಲಿಗೆ ರಾಯರಿಗೆ ಇವತ್ತು ಬರಲಾಗುವದಿಲ್ಲವಂತೆ, ನಾಳೆ ಬರುತ್ತಾರೆಂಬ ನಿರೂಪವನ್ನು ಹೊತ್ತುಕೊಂಡು ಹೋಗಬೇಕು. ಮತ್ತೆ ಇವರ ಮನೆಗೆ ಬಂದು ಮನೆಗೆಲಸ ಮಾಡಬೇಕು; ಅಂತೂ ದಿನ ನೂಕತೊಡಗಿದೆ.

" ಒಮ್ಮೆ ಅವನ ಹೆಣ್ಣುಮಕ್ಕಳು ಊಟ ಮುಗಿಸಿ ಯಾವುದೋ ಇಂಗ್ಲಿಷ ಪಾಠ ಓದುತ್ತ ಕುಳಿತಿದ್ದರು. 'Destination' ಇದರ ಅರ್ಥ ಗೊತ್ತಾಗದೇ ಅದು ಹೀಗಿರಬೇಕು, ಹಾಗಿರಬೇಕು ಎಂದು ಹೇಳುತ್ತಿದ್ದರು. ಅದರರ್ಥ ನಾವು ಮುಟ್ಟಬೇಕಾದ ಸ್ಥಳ ಎಂದು—ನಾನು ಸೂಚಿಸಿದೆ. ಅವರು ಕಣ್ಣರಳಿಸಿ ಕೇಳಿದರು, 'ನಿನಗೂ ಇಂಗ್ಲಿಷ ಬರುತ್ತದೆಯೆ?' 'ಇಲ್ಲ, ರಾಯರು ಇದೇ ಶಬ್ದ ಹೇಳಿದ್ದು ನಾನು ಕೇಳಿದ್ದೆ' ಎಂದೆ. 'ಎಷ್ಟು ಜ್ಞಾಪಕ ಶಕ್ತಿ ಇದೆ ನೋಡು' ಎಂದು ತಮ್ಮೊಳಗೇ ನಕ್ಕರು. ನಾವು ಆದಾಗಲೇ ಹಳ್ಳಿಗೆ ಹೋಗಿ ಬಂದವನಾದ್ದರಿಂದ ರಾಯರು ಸ್ನಾನ ಮುಗಿಸಿದ್ದರು. ಅವರ ಬಟ್ಟೆ ಒಗೆಯಲು ಹೋದಾಗ ರಾಯರ ಬಟ್ಟೆಯ ಜೊತೆ, ಅವರ ಮಗಳ ಸೀರೆ, ಬ್ಲೌಜುಗಳು ಎಲ್ಲವೂ ಇದ್ದವು. ಇದೂ ಒಂದು ಪ್ರಾರಬ್ಧವೇ ಎಂದುಕೊಂಡೆ. ಬಾವಿಗೆ ಹೋಗಿ ಬಟ್ಟೆಗೆ ಸಾಬೂನು ಹಚ್ಚಲು ತೊಡಗಿದೆ. ನೀರೊಯ್ಯಲೆಂದು ಬಾವಿಗೆ ಬಂದ ಹೆಣ್ಣುಮಕ್ಕಳಿಗೆ ನನ್ನನ್ನು ನೋಡಿ ಕನಿಕರವುಂಟಾಗಿರಬೇಕು. ಒಬ್ಬೊಬ್ಬರು ಒಂದೊಂದು ರೀತಿಯಲ್ಲಂದುಕೊಂಡರು.

'ಅಯ್ಯೋ! ಕೆಲಸ ಹೇಳೋದಕ್ಕೂ ಹೊತ್ತು ಗೊತ್ತು ಬೇಡವೆ?'

'ಅವರಿಗೇನೂ, ಕೆಲಸ ಆದದ್ದೇ ಗೊತ್ತು.'

" ನಾನು ಸೀರೆ ಮತ್ತು ಬ್ಲೌಜುಗಳಿಗೆ ಸಾಬೂನು ಹಚ್ಚಿದ್ದು ನೋಡಿ—

'ನೋಡಿದೆಯಾ, ಆ ಹಿಡಂಬೀರನ್ನು. ಅವರಿಗೆ ಬೇರೆ ಮೈ ಬಗ್ಗಬೇಕಲ್ಲ. ತಮ್ಮ ಅರಿವೆಯನ್ನೂ ಸೆಳೆಯಲು ಕೊಟ್ಟಿದ್ದಾರೆ.'

‘ ಈ ಗಂಡಸು ಇನ್ನು ಮದುವೆಯಾಗಿ ಸಂಸಾರ ಮಾಡುವದು ಹೇಗೇ ! ’

‘ ಆ ಲಕ್ಷಣ ಇಲ್ಲೇ ಕಾಣುತ್ತಿದೆಯಲ್ಲ, ’

‘ ಈ ಕೆಲಸವಿಲ್ಲದಿದ್ದರೆ ಇವನಿಗೆ ಬೇರೆಲ್ಲೂ ಕೆಲಸ ಸಿಗುತ್ತಿರಲಿಲ್ಲವೆ ? ’

‘ ಈಗಿನವರ ಹಣೆಬರವೇ ಇಷ್ಟು ’ ಇನ್ನೊಬ್ಬಳು ಧ್ವನಿಗೂಡಿಸಿದಳು.

‘ ಈ ಮುಂಡೇರಿಗೆ ಇನ್ನೆಂಥ ಗಂಡ ಸಿಗ್ಬೇಕೋ ಹುರಿದು ತಿನ್ನೋಕೆ. ’

“ ನೋಡಿದಿಯಾ ಶ್ರೀನಾಥ! ಎಂಥೆಂಥಹ ಮಾತುಗಳು ಬಂದವು? ನನಗೆ ನಿಜವಾಗಿಯೂ ಅಳು ಬಂದುಬಿಟ್ಟಿತ್ತು. ನಾನು ಅತ್ತದ್ದನ್ನು ನೋಡಿ ಸಂತೈಸುವವರಾರೂ ಅಲ್ಲಿದ್ದಿಲ್ಲ; ಆ ಹೆಣ್ಣುಮಕ್ಕಳೆಲ್ಲ ಹೋದ ಬಳಿಕ ಬಟ್ಟೆಯನ್ನೆಲ್ಲ ಹಾಗೆಯೇ ಬಕೆಟ್ಟಿನಲ್ಲಿ ತುಂಬಿ ಜಗುಲಿಯ ಮೇಲಿಟ್ಟೆ. ಇದನ್ನು ಅವನ ಹೆಣ್ಣುಮಕ್ಕಳು ನೋಡಿ,

‘ ಬಟ್ಟೆಯೇಕೆ ತಿರುಗಿ ತಂದೆ ? ’ ಎಂದು ನನ್ನನ್ನು ಪ್ರಶ್ನಿಸಿದರು.

‘ ಬಟ್ಟೆ ಒಗೆಯುವದಿಲ್ಲವೆ ? ’

‘ ಇಲ್ಲ. ’

‘ ಯಾಕೆ ? ’

‘ ನನಗೆ ಸೆಳೆಯುವದಾಗುವದಿಲ್ಲ. ’

‘ ಹೋಗು, ಸೆಳೆದುಕೊಂಡು ಬಾ ’ ಎಂದು ಸಿಟ್ಟಿನಿಂದಲೇ ಗರ್ಜಿಸಿದರು.

‘ ಅದರಲ್ಲಿ ನಿಮ್ಮ ಮಗಳಿಬ್ಬರ ಬಟ್ಟೆಯೂ ಇದೆ. ’

‘ ಇರಬಹುದು ; ಅದಕ್ಕೇನು ಮಾಡಬೇಕು ? ’

‘ ನಾನು ನಿಮ್ಮ ಮನೆಯ ಪರಿಚಾರಿಕೆಯಲ್ಲ. ’ ನಾನು ದಿಟ್ಟತನದಿಂದಲೇ

“ ಅವರ ಉತ್ತರಕ್ಕೆ ಕಾಯದೆ, ನಾನು ಊಟಕ್ಕೆ ಹೊರಟುಬಿಟ್ಟೆ; ಮರು ದಿನ ಇನ್ನೇನು ಅನ್ನುತ್ತಾನೋ ಎಂದುಕೊಂಡಿದ್ದೆ ; ಏನೂ ಅನ್ನಲಿಲ್ಲ. ಬಟ್ಟೆ ಸೆಳೆಯುವಾಗ ಅವನ ಮಗಳಂದಿರ ಬಟ್ಟೆಯಿರಲಿಲ್ಲ.

“ ಇದಾದ ನಾಲ್ಕೆಂಟು ದಿನಗಳ ನಂತರ ನಿತ್ಯದಂತೆ ನಾವೊಂದು ಊರಿಗೆ ಹೋಗಿದ್ದೆವು; ನಿತ್ಯಕ್ರಮ ಮುಗಿದ ಮೇಲೆ, ಅಲ್ಲಿ ಎರಡು ಮಣ ಅಕ್ಕಿ ಖರೀದಿ ಮಾಡಿದ ; ಅವನ ಚೀಲ ಬೇರೆ. ಅದರ ಜೊತೆಗೆ ಈ ಅಕ್ಕಿ ಹೊತ್ತುಕೊಂಡು ಬರಬೇಕಂತೆ.

"ನನ್ನ ಹತ್ತಿರ ಇದನ್ನು ಹೊರುವದು ಸಾಧ್ಯವಿಲ್ಲ, ರಾಯರೆ."

"ಪೋಕೋ ಬರೇ ಮಾತಾಡಲು ಕಲಿತಂತಿದೆ."

"ಹಾಗೆಂದರೇನು ರಾಯರೆ ?"

"ಅದನ್ನು ನೀನು ತಗೋತೀಯೋ ಇಲ್ಲವೋ ?"

"ಅದನ್ನು ಹೊತ್ತು ನಾಲ್ಕಾರು ಮೈಲು ತರಲು ಸಾಧ್ಯವಿಲ್ಲ ರಾಯರೆ; ಯಾರೊಡನೆಯಾದರೂ ಹೊರಿಸಿಕೊಂಡು ಹೋಗಿ; ಅವರ ಹಮಾಲಿ ನಾನು ಕೊಡುತ್ತೇನೆ."

"ಹಾಗೆಯೇ ಅಕ್ಕಿಯನ್ನು ಹೊರಿಸಿಕೊಂಡು ಬರುವಾಗ್ಗೆ ಕೃಷ್ಣಾನದಿ ಸಿಕ್ಕಿತು; ರಾಯರು ಧೋತರ ಮೇಲೆ ಮಾಡಿಕೊಂಡು ನದಿಯಲ್ಲಿ ನಡೆದೇ ನಡೆದರು. ನೀರು ಸೊಂಟದಿಂದ ಎದೆಗೆ ಬಂದಿತು; ನಾವು ಅಕ್ಕಿ ಹೊತ್ತವನ ಹೇಳಿಕೆಯಂತೆ ಮೇಲಿನಿಂದ ನಡೆದೆವು. ಅಕ್ಕಿ ನೆನೆದುಹೋಗಿ ನಿಂತಿತ್ತು; ಅದನ್ನು ಕಂಡು ರಾಯರು ರೇಗಿಬಿಟ್ಟರು.

"ಬಡ್ಡೀ ಮಗನೇ, ಗುಂಡಿಗೆ ಹಾಕಿ ನನ್ನನ್ನು ಕೊಲ್ಲಬೇಕೆಂದು ಮಾಡಿದ್ದೀಯಾ ?"

"ರಾಯರೆ, ನಾಲಿಗೆ ಬಿಗಿಹಿಡಿದು ಮಾತನಾಡಿ."

"ಸುತ್ತಲೂ ಬೇರೆ ಬೇರೆ ಜನವಿದ್ದರು; ನನ್ನ ಮಾತು ಕೇಳಿ ನಕ್ಕುಬಿಟ್ಟರು. ಅದರಿಂದವರು ಹಲ್ಲುಮುರಿದ ಹಾವಿನಂತಾದರು.

"ಮೂಳಾ, ಆಡುವ ಮಾತಿಗೆಲ್ಲಾ ಜವಾಬು ಕೊಡುತ್ತೀಯಾ ?"

"ನಾಲಿಗೆಯ ಲಗಾಮು ತಪ್ಪಿಲ್ಲವಷ್ಟೇ ?" ನಾನು ಜೋರಾಗಿಯೇ ಕೇಳಿದೆ.

"ಇಲ್ಲಿ ಗುಂಡಿಯಿದೆಯೆಂದೇಕೆ ಹೇಳಲಿಲ್ಲ ?"

"ನನಗೆ ಗೊತ್ತಿರಲಿಲ್ಲ."

"ಯಾರನ್ನಾದರೂ ಕೇಳಬೇಕಾಗಿತ್ತು !"

"ನಾನು ಕೇಳುವ ಪೂರ್ವದಲ್ಲಿಯೇ ನೀವು ಬಲು ದೂರ ಹೋಗಿದ್ದಿರಿ."

"ಕರೆಯಬೇಕಿತ್ತು."

"ನೀವು ಬಯ್ಯಬಹುದೆಂದು ಕರೆಯಲಿಲ್ಲ."

ಬಟ್ಟೆಯೆಲ್ಲ ಒದ್ದೆಯಾದುದರಿಂದ ಅವರಂಗವು ಅಸಹ್ಯವಾಗಿ ಕಂಡಿತು;

ಬಾಯಿಗೆ ಬಂದಂತೆ ನನಗೆ ಬಯ್ದರು. ' ನಿನ್ನನ್ನು ಕೆಲಸದಿಂದ ಕಿತ್ತೊಗೀತೀನಿ ' ಎಂದರು. ನನಗೂ ಸ್ವಲ್ಪ ಸಿಡಿಲಾಗಿತ್ತು.

" ನೀವು ಹೇಳುವದಕ್ಕಿಂತ ಮೊದಲೆಯೇ ನಾನು ರಾಜೀನಾಮೆಯನ್ನು ಕೊಡುತ್ತೇನೆ. "

" ನನಗೆ ಹೆದರಿಸ್ತೀಯಾ ? "

" ನಿಮ್ಮ ಸಿಪಾಯಿಗಿರಿಗೆ ಕೈಮುಗಿದು ನಾನು ಬಂದಿಲ್ಲ ರಾಯರೆ ? "

" ಮತ್ತೆ ? "

" ನಿಮ್ಮನ್ನು, ನಿಮ್ಮ ಅಧಿಕಾರವನ್ನು ಕೊಂಡುಕೊಳ್ಳುವ ಯೋಗ್ಯತೆ ನನಗಿದೆ ರಾಯರೆ; ಅಧಿಕಾರವಿದೆಯೆಂದು ಮದಿರೆಯನ್ನು ಕುಡಿದವರಂತೆ ಮತ್ತರಾಗಬೇಡಿ. "

" ನಿನ್ನನ್ನು ಈ ದಿನವೇ ಕಿತ್ತೊಗೆಯುತ್ತೇನೆ. "

" ಅಡ್ಡಿಯಿಲ್ಲ. "

" ಆದಿನ ಬಲು ಜೋರಾಗಿ ಮನೆಗೆ ಬಂದೆವು. ಮನೆ ಹೊಕ್ಕಿದ್ದೇ ತಡ, ರಾಯರ ತಾಯಿ ಬಾಗಿಲಿಗೆ ಬಂದು ಸೊಟ್ಟ ಮೋರೆ ತೋರಿಸುತ್ತ, ' ತಗೋಪ್ಪ ಕೊಡ, ಒಳಗಿಷ್ಟು ನೀರು ತಂದು ಹಾಕು ' ಎಂದಳು.

" ನಿನ್ನ ಮನೆ ನೀರು ತರಲಿಕ್ಕೆ ನಾನು ಬರಲಿಲ್ಲ ಅಜ್ಜಿ. ಸರಕಾರ ನಮ್ಮನ್ನು ಸಿಪಾಯಿಯೆಂದು ನೇಮಿಸಿರುವದು ; ನಿಮ್ಮ ಮನೆಯ ಊಳಿಗಕ್ಕಲ್ಲ."

" ಆ ಮಾತನ್ನು ಕೇಳಿ ಅವನ ಇಬ್ಬರೂ ಹೆಣ್ಣುಮಕ್ಕಳು ಹೊರಗೋಡಿ ಬಂದರು. ರಾಯರು ಹೊರಗಡೆ ಕುರ್ಚಿಯ ಮೇಲೆ ಕುಳಿತಿದ್ದರು. ರಾಯರೆಂದರು : ' ಅವನ ತಲೆ ಕೆಟ್ಟಿದೆ ; ಅವನನ್ನು ಈ ದಿನ ಕೆಲಸದಿಂದ ಕಿತ್ತೊಗೆಯುತ್ತೇನೆ. '

" ನಾನು ಇಂಗ್ಲೀಷಿನಲ್ಲಿಯೇ ರಾಜೀನಾಮೆ ಬರೆದುಕೊಟ್ಟೆ ; ಅದನ್ನೋದಿ ಅವನ ಮೋರೆ ಪೆಚ್ಚಾಯಿತು. ' ನಿನಗೆ ಇಂಗ್ಲೀಷ ಬರುವದೋ ? ' ಎಂದು ಕೇಳಿದನು.

" ಅದನ್ನು ಕೇಳುವ ಅವಶ್ಯಕತೆ ನಿಮಗಿಲ್ಲ. "

" ನಾನು ರಾಜೀನಾಮೆಯನ್ನು ಸ್ವೀಕರಿಸುವದಿಲ್ಲ. "

" ನೀವೊಬ್ಬರೇ ಸರಕಾರದ ದಾತಾರರಿರಲಿಕ್ಕಿಲ್ಲ; ನಾನು ಸ್ವತಃ ಆಫೀಸಿಗೆ ಹೋಗಿ ರಾಜೀನಾಮೆ ಕೊಟ್ಟು ಬರುತ್ತೇನೆ ; ನಿಮ್ಮ ಅವಶ್ಯಕತೆಯೂ ನನಗಿಲ್ಲ."

"ಅಷ್ಟರಲ್ಲಿ ಪರಾಂಜಪೆಯೂ ಅಲ್ಲಿಗೆ ಬಂದನು. ನಿಜವಿಷಯ ತಿಳಿದು ಕೊಂಡು ಹೇಳಿದನು : 'ಇನಸ್ಪೆಕ್ಟರ ಸಾಹೇಬ, ತಾವು ದಯವಿಟ್ಟು ರಾಜೀ ನಾಮೆಯನ್ನು ಮಂಜೂರ ಮಾಡಿರಿ ; ಆಸಾಮಿ ನಿಮಗೆ ಬಗ್ಗುವಂತಿಲ್ಲ. ನಿಮ ಗಿಂತ ಹೆಚ್ಚು ಆತನು ಕಲಿತಿದ್ದಾನೆ. ಇಂಥ ವಿಷಮಪರಿಸ್ಥಿತಿಯ ಮೂಲಕ ನಿಮ್ಮಲ್ಲಿ ಕೆಲಸಕ್ಕಿಳಿದನೆಂದು ಗಗನಕ್ಕೇರಬೇಡಿ."

"ನಿಜ ವಿಷಯ ತಿಳಿದಾಗ, ಅವರ ಮೋರೆ ಪೆಚ್ಚಾಯಿತು ; ಕ್ಷಮೆ ಕೇಳಿ ದರು. ಆ ಹೆಣ್ಣುಮಕ್ಕಳಿಗೂ ತಮ್ಮ ತಪ್ಪು ಅರಿವಾಗಿ, ತಮ್ಮ ಕಣ್ಣಿನಿಂದಲೇ ತಪ್ಪಾಯಿತೆಂದು ಬೇಡಿಕೊಂಡರು. ಕೊನೆಯಲ್ಲಿ ನಾನು ರಾಯರಿಗಿಷ್ಟೇ ಹೇಳಿದೆ : 'ರಾಯರೆ, ತಾವು ದೊಡ್ಡವರು, ಅನುಭವಸ್ಥರು, ದೊಡ್ಡ ಸರಕಾರದ ಅಧಿಕಾರಿಗಳು ; ತಾವು ತಮ್ಮ ಕೈಕೆಳಗಿನ ನೌಕರರನ್ನು ಇಷ್ಟು ಕನಿಷ್ಠ ದರ್ಜೆ ಯಿಂದ ನಡೆಸಿಕೊಳ್ಳುತ್ತೀರೆಂದು ನಾನೆಣಿಸಲಿಲ್ಲ ; ಆದರೂ ವಿಷದೂಟದ ಅನುಭವವಾಯಿತು. ನೀವು ಅಷ್ಟು ಗೌರವದಿಂದ ನಡೆಸಿಕೊಳ್ಳುವಿರೆಂದೂ, ಅಷ್ಟು ಉಚ್ಚ ಮಾತುಗಳನ್ನು ಆಡೀರೆಂದೂ ನಾನು ಭಾವಿಸಿರಲಿಲ್ಲ. ನೀವು ಕಲಿತ ವಿದ್ಯೆಯೆಲ್ಲ ಹಿಟ್ಟಿಗೆ ಬೂದಿ ಕಲಿಸಿದಂತಾಗಿ ನಿರುಪಯೋಗವಾಗಿ ಹೋಗಿದೆಯೆಂದು ನಾನು ತಿಳಿದಿರಲಿಲ್ಲ. ಆದರೂ ಉಪಾಯವಿಲ್ಲ. ಇನ್ನಾ ವನೂ ನನ್ನಂತಹ ಸಿಪಾಯಿ ಬಂದರೆ, ದಯವಿಟ್ಟು ಪ್ರೇಮ-ಸೌಹಾರ್ದದಿಂದ ನಡೆಸಿಕೊಳ್ಳುವಿರಾಗಿ ಬೇಡಿಕೊಳ್ಳುತ್ತೇನೆ. ತಾವು ಅಧಿಕಾರಿಗಳೆಂದು ತಿಳಿದೂ ನಾನು ಉದ್ಧಟ ಮಾತಾಡಿದ್ದರೆ ಅದು ಮನಸ್ಸಿಗೆ ತಾಕಿ ನಿಮ್ಮ ಅಧಿಕಾರಕ್ಕೆ ಹಾನಿ ತಟ್ಟಿದ್ದರೆ, ದಯಮಾಡಿ ನನ್ನ ಆ ಅಪರಾಧವನ್ನು ಕ್ಷಮಿಸಬೇಕು. ನಿಮ್ಮ ತಾಯಿಯೂ ಅಷ್ಟೇ ; ವಯಸ್ಸಾಗಿಯೂ ಬುದ್ಧಿ ಬರಲಿಲ್ಲ. ತನ್ನ ಮಗನ ಹೊಟ್ಟೆಗೆ ಹಸಿವಾಗುವದೆಂದು ನಿಮ್ಮ ತಾಯಿಗೆ ತಿಳಿಯುತ್ತಿದೆ. ಆದರೆ ನಮ್ಮ ಹೊಟ್ಟೆಗೇನು ಕಲ್ಲು ಹಾಕಿಕೊಂಡಿರಬೇಕೆಂದು ಕಾಣಿಸುತ್ತಿದೆಯೇ ? ನಿಮ್ಮ ಹೆಣ್ಣುಮಕ್ಕಳೂ ಹಾಗೆಯೆ ? ನೀವು ದುಡಿದು ತರುತ್ತೀರೆಂದು ತಾವು ಉಟ್ಟ ಬಟ್ಟೆಯನ್ನು ಸೆಳೆಯಲು ಮನಸ್ಸು ಬಾರದೆ, ಗಂಡುಸಾದ ನನ್ನಿಂದ ಒಗೆಯಿಸಿ ಕೊಳ್ಳಬೇಕೆನ್ನುವಷ್ಟು ದೊಡ್ಡ ಬುದ್ಧಿ ಬಂತು. ತಮ್ಮೆಲ್ಲರ ಕ್ಷಮೆ ಕೇಳಿ ನಾನು ಹೊರಡುತ್ತೇನೆ" ಎಂದು ನಾನೂ ಪರಾಂಜಪೆಯೂ ಅಲ್ಲಿಂದ ಹೊರಟು ಮನೆ ಸೇರಿದೆವು.

" ಶ್ರೀನಾಥ, ನಾನು ಕಳೆದ ಈ ದಿನಗಳು ನನ್ನ ಜೀವನದಲ್ಲಿ ಕಪ್ಪು ಬಣ್ಣದಿಂದ ಬರೆದಿಡುವಂತಹವು. ಬರೀ ಮೂವತ್ತು-ನಾಲ್ವತ್ತು ದಿನಗಳಾದರೂ ಒಂದು ಶತಮಾನ ಕಳೆದಷ್ಟು ಆಗಿತ್ತು. ಇಂತಹ ಕೆಲಸವೊಂದನ್ನು ನೀನು ಮಾಡಿ ಸಾಯಬೇಕು ಎಂದು ವಿಧಿಲಿಖಿತವಿರಬೇಕು.

" ಮುಂದಿನ ತಿಂಗಳು ಸದ್ದಿಲ್ಲದೆ ಕಳೆಯಿತು ಶ್ರೀನಾಥ! ಆಗಲೇ ಲಕ್ಷ್ಮಣ ರಾಯರಿಂದ ಪತ್ರ ಬಂದಿತ್ತು. ಅದರಡಿಯಲ್ಲಿ ಅಡಿಕೆಯಷ್ಟು ದೊಡ್ಡದಾಗಿ ಬರೆದ ಗೌರಾಳ ಒಂದು ಚಿಕ್ಕ ಪತ್ರವೂ ಇತ್ತು. 'ಅಣ್ಣಾ, ಎಂಟುದಿನಗಳಲ್ಲಿ ಬರುತ್ತೇನೆಂದು ಹೇಳಿ ಹೋದವನು, ಇನ್ನೂ ಬಂದಿಲ್ಲವಲ್ಲ. ನಿನ್ನ ತಂಗಿ ಅಣ್ಣ ತರುವ ಪೀಪಿ, ಪೊಪ್ಪಕ್ಕಾಗಿ ಕಾಯುತ್ತಿದ್ದಾಳೆ.' ಕೆಳಗೆ ಅವಳೇ ಬರೆದ ಅವಳ ಹೆಸರ ಎರಡಕ್ಷರಗಳಿದ್ದವು. ಆ ಅಕ್ಷರಗಳ ವಿಕಾರರೂಪ ನೋಡಿ ನಗು ಬಂತು; ಗೌರಾಳ ಜೀವ ನನ್ನ ಬಗ್ಗೆ ಎಷ್ಟು ತತ್ತರಿಸುತ್ತಿದೆ ಎಂಬ ನೋವೂ ಆಯಿತು.

" ಪರಾಂಜಪೆಯ ಮನೆಯಲ್ಲಿ ನಾನಿರುವಾಗಲೇ ಅವನ ಮದುವೆಯೂ ಆಗುವದೆಂದು ಗೊತ್ತಾಯಿತು; ಮದುವೆಯ ಸಂಭ್ರಮದಲ್ಲಿ ದಿನ ಬೆಳಗುಗಳೂ ಸರಿಯಾಗಿ ಗೊತ್ತಾಗಲಿಲ್ಲ. ಮತ್ತೆ ಪುನಃ ಕಾಲೇಜ ಸೇರುವಕ್ಕೆಂದು ಪುಣೆಗೆ ಬಂದುಬಿಟ್ಟೆ. ಮುಂದಿನ ವರ್ಷ ಹೇಗೆ ಕಳೆಯಿತೋ ಗೊತ್ತಾಗಲಿಲ್ಲ. ಇಂಟರ ಪರೀಕ್ಷೆಯಾಗಿ, ಲಕ್ಷ್ಮಣರಾಯರ ಮನೆಗೆ ಹೊರಡುವ ತಯಾರಿ ನಡೆಸಿದೆ."

" ಶ್ರೀನಾಥ, ರಾತ್ರಿ ಎಷ್ಟಾಯಿತು ? "

ಗಡಿಯಾರ ನೋಡಿ " ಒಂಬತ್ತಾಯಿತು " ಎಂದೆ.

" ಜ್ವರ ಬರುವಂತೆ ಕಾಣುತ್ತದೆ. "

ತಲೆ ಮುಟ್ಟಿ ನೋಡಿದಾಗ ಜ್ವರ ಬಹಳವಿತ್ತು.

" ಬಹಳ ನಿಃಶಕ್ತಿಯಾದಂತೆನಿಸುತ್ತಿದೆಯಲ್ಲ, ಶ್ರೀನಾಥ. "

" ನಾಳೆ ಡಾಕ್ಟರನ್ನು ಕೇಳುವೆ. "

" ಅವರು ಯಾವಾಗಲೂ ಸುಳ್ಳೇ ಹೇಳುತ್ತಾರೆ, ಮಾರಾಯಾ! "

ರಾತ್ರಿ ಜ್ವರ ಬಂದುದರಿಂದ ರವಿಗೆ ತನ್ನ ಮೈಮೇಲಿನ ಪ್ರಜ್ಞೆಯೇ ಇರಲಿಲ್ಲ. ರಾತ್ರಿಯಿಡೀ ಏನೋ ಹಲಬುತ್ತಿದ್ದುದರಿಂದ ನಮಗೂ ನಿದ್ರೆ ಬರಲಿಲ್ಲ.

೮

‘ ಅಣ್ಣಾ, ಅಕ್ಕ ಕರೆಯುತ್ತಾಳೆ. ”

‘ ಕರೆಯಲಿಕ್ಕೆ ಬಂದವರಾರು ? ”

‘ ಅವಳ ತಂಗಿ. ’

‘ ನೀನು ಅಕ್ಕನ ಟಪಾಲು ಮುಟ್ಟಿಸುವ ಪೇದೆಯೆ ? ”

‘ ಅಲ್ಲ, ಸೂತ್ರಧಾರಿಣಿ. ’

‘ ಕೈಗಳಲ್ಲಿ ಗೊಂಬೆಗಳು ಇಲ್ಲವಲ್ಲ. ’

‘ ಇವೆ. ’

‘ ಎಲ್ಲಿವೆ ? ’

‘ ನೀನು ಮತ್ತು ಅಕ್ಕ. ’

‘ ನಮ್ಮಿಬ್ಬರನ್ನೂ ನೀನು ಕುಣಿಸುವವಳೆ ? ’

ಕುಣಿಸುವವಳಲ್ಲವೆಂದು ಹಿಂದುಗಡೆಯಿಂದ ನನ್ನ ಎರಡೂ ಕಿವಿಗಳನ್ನು ಹಿಂಡಿ ಓಲಾಡಿಸಿದಳು. ‘ ಇನ್ನೂ ಹತ್ತು ವರುಷದ ಹುಡುಗಿ ನೀನು, ತುಂಬಾ ಸೊಕ್ಕಿಬಿಟ್ಟಿದ್ದೀಯೆ ? ’ ಎಂದೆ.

“ ಈಗ ನಾನು ಬಿ. ಎ. ಮುಗಿಸಿ ಬಂದಿದ್ದೆ; ನಾನು ಮತ್ತು ನೀನು ಜೂನಿಯರ ಬಿ. ಎ.ದಲ್ಲಿದ್ದಾಗಲೇ ನನ್ನ ನಿನ್ನ ಗೆಳೆತನವಾದದ್ದು. ಕಾರಣ ಮುಂದಿನ ವಿಷಯ ಹೇಳುವ ಅವಶ್ಯಕತೆಯಿಲ್ಲವಲ್ಲ. ಬಿ. ಎ. ಮುಗಿಸಿ ಬಂದ ನಂತರ ನನಗೆ ಇಲ್ಲಿಯೇ ಕಾರವಾರದಲ್ಲಿ ಸೆಂಟ್ರಲ್ ಎಕ್ಸಾಯಿಜದಲ್ಲಿ ನೌಕರಿಯೂ ಸಿಕ್ಕಿತ್ತು. ನಾನು ಅವರ ಮನೆಯಿಂದ ಸ್ವಲ್ಪ ಆಚೆ ರೂಮು ಹಿಡಿದಿದ್ದೆ. ಅಲ್ಲಿಗೆ ಬೆಳಿಗ್ಗೆ, ಸಂಜೆ ಹೀಗೆ ಎರಡು ಬಾರಿ ಗೌರಾ ಬಂದು, ವ್ಹಿಜಿಟ್ ಬುಕ್ಕಿಗೆ ಸಹಿ ಹಾಕಿ ಹೋಗಲೇಬೇಕು; ಜೊತೆಗೆ ಅಕ್ಕನ ತಂತಿ ಟಪಾಲೂ ತರುತ್ತಿದ್ದಳು.

“ ಇದಕ್ಕೂ ಹಿಂದೆ ಮಹತ್ವದ ಸನ್ನಿವೇಶಗಳು ಸಂದುಹೋಗಿವೆಯೆಂದರೆ ನೀನು ಆಶ್ಚರ್ಯಪಡಲಿಕ್ಕಿಲ್ಲವೆ? ಅವನ್ನು ಬಚ್ಚಿಟ್ಟುಕೊಂಡು ನನಗೇನು ಆರಮನೆ

ರಚಿಸಬೇಕಾಗಿಲ್ಲ; ಅವೂ ನಿನ್ನ ಜೊತೆಗಿದ್ದರೆ ಬಾಳಿನ ಮಿಡಿತದ ಅರಿವಾಗಿ, ನೆನಪಾದಾಗಲೊಮ್ಮೆ ಕೃತಜ್ಞತೆ ತೋರಿಸೀಯೆ! ನೋಡು, ಬಾಳಬಳ್ಳಿ ತಾನಾಗಿಯೇ ಬಂದು ನಮ್ಮನ್ನು ಸುತ್ತುವರಿಯುತ್ತಿದೆಯಂತೆ.

"ಬಿ. ಎ. ಪರೀಕ್ಷೆ ಮುಗಿಸಿ, ನಾನು ಹೊರಟಿದ್ದೇನೆಂದು ನನ್ನ ಪತ್ರದಿಂದ ಲಕ್ಷ್ಮಣರಾಯರಿಗೂ, ಲಚ್ಚಿ-ಗೌರಾರಿಗೂ ಗೊತ್ತಾಗಿತ್ತು. ನಾನು ಬಂದಿಳಿದಾಗ ಲಕ್ಷ್ಮಣರಾಯರು ಬಸ್ ಸ್ಟೆಂಡಿನಲ್ಲಿಯೇ ಇದ್ದರು. ಟ್ರಂಕನ್ನೂ ಬೆಡ್ಡಿಂಗನ್ನೂ ಹಮಾಲನಿಂದ ಹೊರಿಸಿ ತಂದೆವು; ರಾಯರು ಅವೆರಡೂ ಸಾಮಾನುಗಳನ್ನು ಮಾಳಿಗೆಯ ಮೇಲಿಡುವಂತೆ ಹೇಳಿದರು. ನಾನು ನಿಧಾನವಾಗಿ ಪರೀಕ್ಷೆಯ ವಿಷಯ, ಹಾಸ್ಟೆಲಿನ ವಿಷಯ ಮತ್ತು ಪ್ರವಾಸದ ವಿಷಯಗಳನ್ನು ಮಾತಾಡುತ್ತ ಬರುತ್ತಿದ್ದೆನು. ನಾವು ಮನೆಮುಟ್ಟಿದಾಗ, ಕೂಲಿ ಹಿಂತಿರುಗಿದ್ದನು. ಊಟದ ತಯಾರಿ ಮಾಡಿಸಲೆಂದೋ ಇಲ್ಲವೆ ನಾನು ಬಂದಿರುವ ವಿಷಯ ತಿಳಿಸಲೆಂದೋ ರಾಯರು ನೇರವಾಗಿ ಮನೆಯೊಳಗೆ ಹೋದರು. ನಾನು ಕೈಕಾಲು ತೊಳೆದುಕೊಳ್ಳುವದಕ್ಕೆ ಹೋದೆ.

"ನಾನು ಚಪ್ಪಲ್ ಕಳಚಿ ಅಟ್ಟೆ ರೂಮಿಗೆ ಹೋಗುವಾಗ್ಗೆ ಅಲ್ಲಿ ಲಚ್ಚಿ ಇದ್ದಳು; ನಾನವಳನ್ನು ಈ ರೂಪದಲ್ಲಿ ಎಂದೂ ನೋಡಿರಲಿಲ್ಲ. ಎರಡು ವರ್ಷದ ಹಿಂದೆ ಲಂಗ ಉಟ್ಟು, ಮಾತಾಡಿಸಿದರೆ ನಸುನಾಚಿ ಉತ್ತರ ಕೊಡುತ್ತಿದ್ದ ಹುಡುಗಿ ಈಗ ನನ್ನ ಕಲ್ಪನೆಯಿಲ್ಲದಷ್ಟು ಎತ್ತರವಾಗಿ ಬೆಳೆದಿದ್ದಳು. ಅವಳ ಮೋರೆಯನ್ನು ನಾನು ಇನ್ನೂ ತನಕ ಸರಿಯಾಗಿ ನೋಡಿರಲಿಲ್ಲ; ಗುಲಾಬಿ ಬಣ್ಣದ ಸೀರೆ ಉಟ್ಟು, ಕಪ್ಪು ಬಣ್ಣದ ಬ್ಲಾವುಜ ತೊಟ್ಟಿದ್ದಳು. ನಾನು ಮೇಲೆ ಬಂದೆನೆಂದು ತಿಳಿದೋ ಏನೋ, ಕಿಟಕಿಯ ಎದುರಿಗೆ ನಿಂತು ಹೊರಗಡೆ ನೋಡುತ್ತಿದ್ದಳು. ಬಹುಶಃ ಅವಳ ಕಣ್ಣು-ಮನ-ಕಿವಿಗಳೆಲ್ಲ ನನ್ನ ಕೋಣೆಯಲ್ಲಿಯ ಚಲನವಲನವನ್ನು ನಿರೀಕ್ಷಿಸುತ್ತಿರಬಹುದು; ಬಟ್ಟೆ ಕಳಚುವ ಬದಲು ಅವಳನ್ನೇ ನೋಡುತ್ತ ನಿಂತುಬಿಟ್ಟೆ.

"ಅವಳ ಅಂಗಗಳೆಲ್ಲ ಬೆಳವಣಿಗೆಯಲ್ಲಿ ಮಾಟವಾಗಿದ್ದು, ಕಣ್ಣು ಕೋರೈಸುವ ಮಿಸುನಿ ಬಣ್ಣ, ಕೈ-ಕೆನ್ನೆಗಳ ಮೇಲೆ ಮಿಂಚಿ ಪ್ರತಿಬಿಂಬಿಸುವಂತಿತ್ತು. ಅವೇ ತಾನೇ ಹೆರಳನ್ನು ಬಾಚಿರಬೇಕು; ಉದ್ದವಾದ ಒಂದೇ ಹೆಳಲನ್ನು ಹಾಕಿಕೊಂಡು ತುದಿಯಲ್ಲಿ ಎರಡು ರಿಬ್ಬನ್ನುಗಳನ್ನು ಸುತ್ತಿದ್ದಳು. ಒಂದು

ಕುಚ್ಚು ಹುಲ್ಲಿಗೆಯ ಹೂವನ್ನು ಮುಡಿದಿದ್ದಳು. ಹೆಣ್ಣು ವಯಸ್ಸಿಗೆ ಬಂದಾಗ ಈ ರೀತಿ ಬದಲಾಘುವಳೆ? ಎಂದು ನನ್ನಷ್ಟಕ್ಕೆ ನಾನೇ ಉದ್ಗಾರ ತೆಗೆದೆ. ಅವಳ ಹಿಂಬದಿಯಷ್ಟೇ ನನಗೆ ಕಾಣುತ್ತಿದ್ದುದರಿಂದ, ಅವಳ ಕೈಹಿಡಿದು ತಿರುಗಿಸಿ, ನೋಡಬೇಕೆನ್ನಿಸಿತು. ನಾನೂ ಅವಳನ್ನೇ ನೋಡುತ್ತಿರುವೆನೆಂದು ತಿಳಿದು, ಅವಳು ಓಡಿಹೋಗಲು ಯೋಚಿಸಿ, ಗೋಡೆಯ ಹಿಂದೆಯೇ ಬಾಗಿಲ ಬಳಿ ಬರತೊಡಗಿದಳು; ನಾನು ಅವಳ ಎರಡೂ ತೋಳುಗಳನ್ನು ಹಿಡಿದು ನಿಲ್ಲಿಸಿ ಅವಳ ಮೋರೆ ನೋಡಿದೆ; ಅವಳು ನನ್ನನ್ನು ನೋಡಿದಳು. ನನ್ನ ಮೈಯಲ್ಲಿ ವಿದ್ಯುತ್‌ಸಂಚಾರವಾದಂತಾಗಿ ಅವಳನ್ನು ತಬ್ಬಿಕೊಳ್ಳಬೇಕೆನಿಸಿತು. ಅವಳ ಮೋರೆಯನ್ನೇ ನೋಡುತ್ತ ನಿಂತುಬಿಟ್ಟೆ. ಅವಳೆದೆ ಏರಿಳಿದು ಅದರ ಮಾಟದ ಬಹುಭಾಗವೆಲ್ಲ ಹೊರತೋರುವಂತಿತ್ತು. ನಾನದನ್ನು ನೋಡಿದಾಗ, ಅವಳ ಕಣ್ಣುಗಳು ಅದನ್ನು ಗುರುತಿಸಿ, ನಾನದನ್ನು ನೋಡದ ಹಾಗೆ ತಲೆತಗ್ಗಿಸಿ ಮರೆಮಾಡಿಬಿಟ್ಟಳು. ಅವಳ ಮೈಯಲ್ಲಿ ನಡುಕ ಹುಟ್ಟಿತೊಡಗಿತ್ತು; ಅವಳ ತಲೆಯೆತ್ತದೆ, ಮೋರೆ ಮುಚ್ಚಿಕೊಂಡುಬಿಟ್ಟಳು. ಕದ್ದು ನೋಡುತ್ತಿರುವ ಕಳ್ಳನಿಗೆ ಅಧಿಕಾರ ಕೊಟ್ಟು ಮೆರವಣಿಗೆ ಮಾಡಿಸಿದಂತಾಯಿತು. ಹಣೆ, ಹುಬ್ಬು, ಮೂಗು, ಎಸಳಾದ ರಾಗರಂಜಿತವಾದ ತುಟಿ; ತುಂಬುಕೆನ್ನೆಗಳು ನಾಚಿಕೆಯಿಂದ ಕೆಂಪಡರಿ ಮೋಹಕವಾಗಿತ್ತು. ಯಾವಾಗಲೂ ಲಚ್ಚಿಯ ಹೆಸರು ಹೇಳಿ ನಾನು ಕರೆದಿರಲಿಲ್ಲ. ಆ ಹೆಸರನ್ನು ನೆನೆಸಿಕೊಂಡೇ ನನ್ನ ಹೃದಯ ತುಂಬತೊಡಗಿತ್ತು. ಈಗ ನಾಲಿಗೆ ನನಗೆ ಗೊತ್ತಿಲ್ಲದಂತೆ 'ಲಚ್ಚೀ' ಎಂದು ಕರೆದುಬಿಟ್ಟಿತು. ಅವಳೊಮ್ಮೆ ಅರೆಗಣ್ಣು ಬಿಟ್ಟು ನೋಡಿ, 'ಬಿಡಿ ಹೋಗುತ್ತೇನೆ' ಎಂದಳು. ಆ ಧ್ವನಿ ಅದೆಷ್ಟು ಮಧುರವಾಗಿ ನನ್ನೆದೆ ಮುಟ್ಟಿತೆನ್ನಲಿ! ಶ್ರೀನಾಥ, ಆದೊಂದು ರಸನಿಮಿಷ ನನ್ನ ಜೀವನದಲ್ಲಿಯೇ ಸ್ವರ್ಗಧಾಮವದು! ಅಮೃತದ ಸವಿ ಗೊತ್ತಿಲ್ಲದ ನನಗೆ, ಅದು ತಾನಾಗಿಯೇ ಲಭಿಸಿದಂತಾಯಿತು. ಅವಳು ಬಿಡು ಎಂದಾಗಲೂ ನಾನವಳನ್ನು ಬಿಡಲಿಲ್ಲ. ಇನ್ನೂ ನೋಡುತ್ತಲೇ ಇದ್ದೆ. ಮತ್ತು ನೋಡಿದ ಹಾಗೆ ನನ್ನ ಆಶಾಕಪಲು ನೊರೆಯುಕ್ಕಿ ಹರಿಯುತ್ತಿತ್ತು.

"ಆಶೆಯ ಅಶ್ವ ಗಗನಕ್ಕೇರಿ ಉಚ್ಚೈಃಶ್ರವಸ್‌ನ್ನು ಮೀರಿಸಬೇಕೆಂದಿತು. ಅವಳ ಹಣೆಯ ಮೇಲೆ ತುಟಿಯಚ್ಚು ಒತ್ತಿದೆ; ಬಲವಾಗಿ ಆಲಿಂಗಿಸಿ ಚುಂಬಿ

ಅವಳು ನಗುತ್ತ ಕೆಳಗಿಳಿದು ಹೋದಳು. ಮತ್ತೊಮ್ಮೆ ಅವಳಾಗಿಯೇ ಬರಬಹುದೇನೋ ಎಂದುಕೊಂಡು ಸ್ವಲ್ಪ ಹೊತ್ತು ಅಲ್ಲಿಯೇ ನಿಂತೆ. ಕರೆದರೂ ಬರಲಾಗದ ಲಜ್ಜೆ ತಾನಾಗಿಯೇ ಬರುತ್ತಾಳೆಯೇ? ಹುಚ್ಚು ಕಲ್ಪನೆ. ಆ ವೇಳೆಯಲ್ಲಿ ಹುಚ್ಚಿನ ಅರ್ಥವೇನೆಂದು ನನಗಾಗುವದಿಲ್ಲ. ಜೀವನದಲ್ಲಿ ಒಮ್ಮೆಯೇ ಪ್ರಣಯದ ಪರಮಾವಧಿ ಸುಖ ಬಂದು ಹೋಗುವದಂತೆ. ಸಂಸಾರಕ್ಕೆ ತೊಡಗಿದ ಮೇಲೆ ಸರಸದಿಂದ ನಿಧಾನವಾಗಿ ನಿರಸಕ್ಕೆ ಕಾಲಿಕ್ಕುವದಂತೆ. ಅಂತಹ ಸನ್ನಿವೇಶವನ್ನು ನಾವು ಒಮ್ಮೆಯಾದರೂ ಕಂಡಿದ್ದೇವೆಯೆ? ಎಂಬ ಸಂಶಯ ಬಂದುಬಿಡುತ್ತದೆ; ಹೀಗಿಲ್ಲವಾದರೆ ಅವರು ಹೇಳುವ ಸತ್ಯದ ಬೆಲೆಯೇನು?

"ನಾನು ಊಟ ಮುಗಿಸಿ, ಮಾಳಿಗೆಗೆ ಬಂದು ಹಾಸಿಗೆ ಬಿಚ್ಚಿಕೊಂಡು ಮಲಗಿದ್ದೆ; ನಿದ್ದೆ ಮಾತ್ರ ಬರಲಿಲ್ಲ. ಅಷ್ಟರಲ್ಲಿ ಪೇಟೆಯ ಕಡೆಗೆ ಹೋದ ಗೌರಾ ಬಂದಳು. ಬರುವಾಗ್ಗೆ, ನಾಲ್ಕು ಬಳೆ, ಎರಡು ಮಲ್ಲಿಗೆಯ ದಂಡೆಯನ್ನು ತಂದಿದ್ದಳು. ನಾನು ಅವಳು ಬಂದದ್ದು ನೋಡಿ, ನಿದ್ರೆ ಬಂದವನಂತೆ ನಟಿಸಿ ಕಣ್ಣು ಮುಚ್ಚಿದೆ. ಹೂವಿನ ದಂಡೆ, ಬಳೆಗಳನ್ನಿಟ್ಟು ನನ್ನನ್ನು ಕೂಗಿದಳು. ನನಗೆ ನಿದ್ದೆ ಬಂದಿದೆಯೆಂದು ತಿಳಿದು ಅಕ್ಕನನ್ನು ಕರೆದು ಕೇಳಿದಳು:

'ಅಕ್ಕಾ, ಅಣ್ಣ ಯಾವಾಗ ಬಂದ?'

'ನನಗೆ ಗೊತ್ತಿಲ್ಲ.'

'ಅವನು ಬಂದಾಗ ನೀನಿಲ್ಲಿರಲಿಲ್ಲವೆ?'

'ಇದ್ದರೆ? ಯಾವಾಗ, ಎಷ್ಟು ವೇಳೆಯಲ್ಲಿ ಬಂದಿದ್ದಾರೆಂದು ನಾನು ನೋಡಲಿಲ್ಲ.'

'ಮತ್ತೆ ಮೊನ್ನೆ ನೀನೇ ಹೇಳಿದ್ದೆಯಲ್ಲ, ನಿನ್ನ ಅಣ್ಣ ಬರುತ್ತಾರೆಂದು.'

'ಗಲಾಟೆ ಮಾಡಬೇಡ, ಪ್ರವಾಸದ ದಣಿವು; ಎಚ್ಚರವಾದೀತು.'

'ಓಹೋ, ಈಗಲೇ ಇಷ್ಟೆ?'

"ಆಗ ಲಜ್ಜೆ ಅವಳ ಬಾಯಿ ಮುಚ್ಚಿದ್ದಳು.

'ಅಕ್ಕಾ, ಮಲ್ಲಿಗೆಯ ದಂಡೆಯನ್ನು ತಂದಿದ್ದೇನೆ.'

'ಅಲ್ಲೇ ಇರಲಿ.'

'ಮುಡಿದುಕೊಳ್ಳುವದಿಲ್ಲವೆ?'

'ಈಗ ಬೇಡ.'

‘ ಮತ್ತೆ ನೀನೇ ಹೇಳಿದ್ದಿಯಲ್ಲ; ಅಣ್ಣ ಬರುತ್ತಾರೆ, ಮಲ್ಲಿಗೆ ದಂಡೆ ಕೊಂಡು ಬಾ ಎಂದು. ’

‘ ಮಾತು ಬಹಳಾಯಿತು ನಿನ್ನದು ! ’

‘ ಅಣ್ಣ ಏಳಲಿ, ನಿನಗೆ ಅವನಿಂದ ಹೊಡೆಯಿಸುವೆ. ’

‘ ಏನು ? ’

‘ ಅಣ್ಣನಿಗೆ ಆ ದಿವಸ ನೀನು ಬಯ್ದಿದ್ದೆಯಲ್ಲ ! ’

‘ ಸುಳ್ಳು ಹೇಳಬೇಡ. ’

‘ ಮತ್ತೆ ಅವನು ಪತ್ರ ಹಾಕಲಿಲ್ಲಂತ ನೀನು ಬಯ್ದಿರಲಿಲ್ಲವೆ ? ’

“ ನಾನು ಮೈ ಮುರಿದುಕೊಂಡೆ; ಲಜ್ಜೆ ಆಚೆಗೆ ಓಡಿಹೋದಳು. ಗೌರಾ ಎಚ್ಚರವಾಯಿತೆಂದು ತಿಳಿದು, ಅಣ್ಣಾ, ಎಂದಳು. ನಾನು ಕಣ್ಣುಬಿಟ್ಟು ಅವಳನ್ನು ನೋಡಿದೆ. ಹೆಣ್ಣಿನಲ್ಲಿ ಸಹಜವಾಗಿಯೇ ಬರುವ ಗಾಂಭೀರ್ಯತೆ ಬೆಳೆಯುವ ಗೌರಾಳಿಗೂ ಬಂದುಬಿಟ್ಟಿತ್ತು. ಲಂಗ ಉಟ್ಟು ಅದೇ ಬಣ್ಣದ ರವಕೆಯನ್ನು ತೊಟ್ಟಿದ್ದಳು; ನಾನು ಅವಳನ್ನೇ ನೋಡುತ್ತಿರುವೆನೆಂದು ತಿಳಿದು ಗೌರಾ ಸಹಜ ವಾಚಾಳತನದಲ್ಲಿ ಹೇಳಿದಳು :

‘ ಥೂ, ಥೂ, ಹಾಗೆಲ್ಲ ನೋಡಬಾರದು ; ದೃಷ್ಟಿಯಾದೀತು. ’

‘ ಯಾಕೆ ಗೌರಾ, ಏನಾಯಿತು ? ’

‘ ಅಣ್ಣ, ನೀನು ಬಂದು ಎಷ್ಟು ಹೊತ್ತಾಯಿತು ? ’

‘ ಒಂದು ತಾಸಾಗಿರಬಹುದು. ’

‘ ನೀನು ಬಲು ಹುಷಾರಿ; ನಾನಿಲ್ಲದ ವೇಳೆ ನೋಡಿಯೇ ಬಂದೆ ನೋಡು. ಅಕ್ಕನೂ ನೀನೂ ಮಾತಾಡಿಕೊಂಡಿದ್ದಿರೆಂದು ಕಾಣುತ್ತದೆ; ಅಕ್ಕ ಉಪಾಯ ಮಾಡಿ ವನಗೆ ಹೂವು ತರಲು ಕಳಿಸಿದಳು. ’

‘ ನಾನು ನಿನ್ನ ಅಕ್ಕನ ಜೊತೆ ಮಾತೇ ಆಡುವದಿಲ್ಲವಲ್ಲ. ’

‘ ನಾನಿದ್ದಾಗ ಮಾತ್ರ ಮಾತಾಡುವದಿಲ್ಲ. ಆದರೂ ಮೋಸವಾಯಿತು, ಅಕ್ಕನ ಮೇಲೆ ನನ್ನದು ನಾಲ್ಕೈದು ಫಿರ್ಯಾದಿ ಇತ್ತು; ನೀವಿಬ್ಬರೂ ಮಾತಾಡಿಕೊಂಡು ಫ್ಲಸ್ ಮಾಡಿಬಿಟ್ಟಿರಿ. ’

‘ ಅದೆಂತಹ ಫಿರ್ಯಾದಿಗಳೆ ? ’

‘ ಮೊದಲನೆಯದು, ಒಂದು ದಿನ ನಾನಿಲ್ಲದಾಗ—ಅಲ್ಲ—ಅಕ್ಕ ನನ್ನನ್ನು ಬೇಕೆಂತಲೇ ಏನೋ ಕೆಲಸಕ್ಕೆ ಕಳುಹಿಸಿದ್ದಳು. ಆಗವಳು ನಿನ್ನ ಫೋಟೋ ನೋಡುತ್ತಿದ್ದಳು. ಒಂದು ದಿನ ನಾನೂ ಅವಳಿಲ್ಲದಾಗ್ಗೆ ನಿನ್ನ ಫೋ ತೆಗೆದು ನನ್ನ ಟ್ರಂಕಿನಲ್ಲಿಟ್ಟು ಬೀಗ ಹಾಕಿದ್ದೆ. ಅಕ್ಕ ಹುಡುಕಿಯೇ ಹುಡುಕಿದ ಳೆಂದು ಕಾಣುತ್ತದೆ. ನಾನು ಏನೆಂದು ಕೇಳಿದರೆ ಇಲ್ಲಿಯೇ ನನ್ನ ಜಾಕೀಟ ಸೀರೆಯ ಮಡಿಯಲ್ಲಿಟ್ಟ ನೋಟು ಕಾಣುವದಿಲ್ಲವೆಂದಳು. ನನಗದು ಖಾತ್ರಿಯಾಗದೇ ಏನು ಫೋಟೋ ಕಳೆದಿದೆಯೋ ಎಂದು ಕೇಳಿ ನಕ್ಕು ಬಿಟ್ಟೆ. ಅಕ್ಕ ನನ್ನನ್ನು ಸಿಟ್ಟುಗಣ್ಣಿನಿಂದ ನೋಡಿ ಫೋಟೋ ಕಸಿದುಕೊಂಡಿದ್ದಳು.

‘ ಎರಡನೆಯದು, ನೀನು ಇಲ್ಲಿಂದ ಹೋಗುವಾಗ್ಗೆ ಬಟ್ಟೆ ಬಿಟ್ಟು ಹೋಗಿ ದ್ದೆಯಲ್ಲ. ಅವನ್ನು ತಾನೇ ಒಗೆದು ಇಸ್ತ್ರಿ ಮಾಡಿಸಿ ತನ್ನ ಟ್ರಂಕಿನಲ್ಲಿ ಇಟ್ಟುಕೊಂಡಿದ್ದಾಳೆ.

‘ಮೂರನೆಯದು, ನಿನಗೊಂದು ಪತ್ರ ಅರ್ಧ ಬರೆದು ಎಲ್ಲಿಯೋ ಪುಸ್ತಕ ದಲ್ಲಿಟ್ಟುಕೊಂಡಿದ್ದಳು; ಅದು ಅವಳಿಗೆ ಮರೆತಿರುವಂತೆ ಕಾಣುತ್ತದೆ. ನೀನು ಸುಳ್ಳು ಎನ್ನುವಿಯೆಂದು ಆ ಪತ್ರವನ್ನು ಹಾಗೆಯೇ ಇಟ್ಟಿದ್ದೇನೆ.’

‘ ಗೌರಾ, ನೀನು ಬಲು ಸಾಹಸಗಾರ.’

‘ ಬಾಯಿಂದ ಹೇಳಿದರೆ ಸಾಧ್ಯವಿಲ್ಲ; ಅದು ಯಾಕೆ ಹಾಗೆ ಎಂತ ಹೇಳಲೇ ಬೇಕು; ನಾನು ಬಿಡುವವನಲ್ಲ.’

‘ ಮುಂದೆ ?’

‘ ನಾಲ್ಕನೆಯದು, ನಿನಗೆ ಸರಿಯಾಗಿ ಪತ್ರ ಬರೆಯುವದಕ್ಕೂ ಬರುವ ದಿಲ್ಲವಂತೆ: ಹೀಗೆಂದು ಅಕ್ಕ ನನ್ನ ಹತ್ತಿರ ಹೇಳುತ್ತಿದ್ದಳು. ನಾನು ನಿನ್ನೊಡನೆ ಜಗಳಾಡುವೆನೆಂದರೆ, ಹೇಳು, ಯಾರು ಹೆದರಲು ಕಲಿಸಿದ್ದಾರೊ? ಎಂದಳು. ಅಕ್ಕ ನಿನಗೆ ಹಾಗೆ ಹೇಳಬಹುದೆ?’

‘ ಕೊನೆಯದು ?’

‘ ಸರಿ, ನೆನಪಿಲ್ಲ; ಹಾ! ನೆನಪಾಯಿತು. ನಾನು ಅಕ್ಕನ ಚಾಡಿ ನಿನ್ನ ಹತ್ತಿರ ಹೇಳುವೆನಂತೆ; ಅದಕ್ಕಾಗಿ ನಿನ್ನ ಹತ್ತಿರ ಹೇಳಿ ಹೊಡಿಸುತ್ತಾಳಂತೆ. ಹೌದಣ್ಣಾ, ನೀನು ನನಗೆ ಹೊಡೆಯುತ್ತೀಯಾ ?’

‘ ನಿಲ್ಲು ವಿಚಾರ ಮಾಡಿ ಹೇಳುತ್ತೇನೆ. ’

ನಾನೇನು ಹೇಳುವೆನೆಂದು ಗೌರಾ ನನ್ನನ್ನೇ ನೋಡುತ್ತ ಕುಳಿತಿದ್ದಳು.

* * * *

“ ಅದಕ್ಕೂ ಎರಡು ವರುಷಗಳ ಹಿಂದೆ ಶ್ರೀನಾಥ.

“ ಶ್ರೀನಾಥ, ಲಚ್ಚಿ, ಗೌರಾ ಹಾಗೂ ರಾಮು, ಜಯಾ, ವಿಜಯಾ ಒಂದೇ ತಂದೆಯ ಮಕ್ಕಳಾಗಿದ್ದಾಗ್ಯೂ ವ್ಯಕ್ತಿತ್ವದಿಂದ ಬೇರೆ ಬೇರೆಯಾಗಿ ಕಾಣುತ್ತಿದ್ದರಲ್ಲ. ಅವಕ್ಕೆ ನೀನು ಆಕ್ಷೇಪವೆತ್ತಬಹುದು; ಮೊಟ್ಟಮೊದಲಿಗೆ ನನ್ನದೂ ಅದೇ ರೀತಿಯಾಗಿತ್ತು. ಹೀಗೆಂತ ಯಾರೊಡನೆಯೂ ಕೇಳುವ ಹಾಗಿಲ್ಲ; ಅಲ್ಲದೆ ಯಾರಿಂದಲೂ ಸಮರ್ಪಕ ಉತ್ತರ ದೊರೆಯುವಂತಿರಲಿಲ್ಲ. ಆ ವೇಳೆಯಲ್ಲಿ ಲಕ್ಷ್ಮಣರಾಯರೇ ತಮ್ಮ ನಿಜಸ್ಥಿತಿಯನ್ನು ಹೇಳಿದರು. ಯಾವ ತಂದೆಯೂ ಹೇಳದ ವಿಷಯವಾದರೂ, ಲಕ್ಷ್ಮಣರಾಯರ ಬಾಯಿಂದ ಕೇಳಿ ತಿಳಿದಾಗ, ಅವರ ಹೃದಯ ಇಷ್ಟು ತಿಳಿಯಾದುದೆ? ಎನ್ನುವ ಗೌರವ ಭಾವನೆಯು ನನ್ನಲ್ಲಿ ಉಂಟಾಯಿತು.

“ ಗೌರಾ ಮೊದಲುಬಾರಿಗೆ ನನ್ನನ್ನು ನೋಡಿ ಅಷ್ಟು ಹಚ್ಚಿಕೊಳ್ಳಲು ಏನೋ ದೈವಸಂಕಲ್ಪಿತ ಋಣಾನುಬಂಧವೇ ಇರಬೇಕೆಂದು ನನ್ನ ಕಲ್ಪನೆಯಾಗಿತ್ತು. ಗೌರಾ ನನ್ನನ್ನು ಅಣ್ಣಾ ಎಂದು ಕರೆಯತೊಡಗಿದಂದಿನಿಂದ, ನನಗೂ ಅವರ ಮನೆಯಲ್ಲಿಯ ಜನರಿಗೂ ಸಂಪರ್ಕ ಹೆಚ್ಚಾದಂದಿನಿಂದ, ಲಕ್ಷ್ಮಣರಾಯರು ನನ್ನ ಬಗ್ಗೆ ಹೆಚ್ಚು ಆಸಕ್ತಿಯನ್ನು ತಳೆದರು. ಗೌರಾಳ ಅಮರ ನಿಷ್ಕಳಂಕಿತ ಸ್ನೇಹಲತೆಯು ಚಿಗುರುವಿಕೆಯಿಂದ ನನಗೂ ಲಚ್ಚಿಗೂ ಒಂದು ಬಗೆಯ ಭಾವೀ ಸಂಬಂಧವು ಮನಸ್ಸಿನಲ್ಲಿಯೇ ಬೆಳೆದುಬಂದಿತು. ಪುರವಾಗಿ, ಹೀಚುಕಾಯಾಗುವ ವೇಳೆಗೆ ನಾನು ಬಿ.ಎ. ಪರೀಕ್ಷೆ ಮುಗಿಸಿ ಬಂದಾಗ ಅವಳ ಎರಡೂ ಕೈಗಳನ್ನು ಹಿಡಿದು, ಅವಳನ್ನು ನೋಡಬೇಕೆಂಬಾಶೆಯಿತ್ತಷ್ಟೇ. ಇದಕ್ಕೂ ಮೊದಲು ಹಾಗೇಕೆ ಆಗಲಿಲ್ಲವೆಂದು ನಾನು ನನ್ನನ್ನೇ ಕೇಳಿಕೊಳ್ಳುತ್ತಿರುವೆ. ಅದಕ್ಕೂ ಮೊದಲು ಅಕ್ಕ-ತಂಗಿ ಅದೆಷ್ಟು ವೇಳೆ ನನ್ನೆದುರಿಗೇ ಚದುರಂಗದಾಟವಾಡುತ್ತಿದ್ದರು. ಆ ವೇಳೆಯಲ್ಲಿ ನಾನವಳನ್ನು ನೋಡುತ್ತಿರಲಿಲ್ಲವೆಂತಲ್ಲ; ನೋಡುವ ಕಣ್ಣುಗಳಲ್ಲಿ ಆಸ್ಥೆಯಿರಲಿಲ್ಲ. ನಾವು ಬೀದಿ ಬೀದಿ ಸುತ್ತುತ್ತಿರುವಾಗ ಅದೆಷ್ಟೋ ಜನರ ಮೋರೆಯನ್ನು ನೋಡುವದಿಲ್ಲವೆ?

ಹಾಗೇನೇ. ಪ್ರತಿಯೊಂದು ವಿಷಯ ತನ್ನದೊಂದು ವ್ಯವಸ್ಥಿತ ಸ್ಥಿರತ್ವವನ್ನು ಹೊಂದುವದಕ್ಕೆ ಒಂದು ಕಾಲ ಕೂಡಿಬರಬೇಕೆಂದು ಕಾಣುತ್ತದೆ.

" ಒಂದು ದಿನ ನಾನೂ ಅವರೂ ಎದುರಿಗೇ ಕುಳಿತಿದ್ದೆವು. ಲಕ್ಷ್ಮಣ ರಾಯರ ಯೋಚನೆ ಬಲವಾಗಿದೆ ಎಂದು ಅವರ ಹಣೆಯಮೇಲೇರುತ್ತಿರುವ ನಿರಿಗೆಗಳೇ ಹೇಳುತ್ತಿದ್ದವು. ನಾನಿನ್ನೂ ಒಬ್ಬನೇ ಹಾಗೆ ಅವರೆದುರಿಗೆ ಕುಳಿತಿರ ಲಿಲ್ಲ. ಗೌರಾಳಿದ್ದರೆ ಅವಳೊಡನೆ ಅವಳದೇ ಭಾಷೆಯಲ್ಲಿ ಮಾತನಾಡುತ್ತ ಚೇಷ್ಟೆ ಮಾಡುತ್ತ ಲಕ್ಷ್ಮಣರಾಯರ ಎದುರಿಗೆ ಕುಳಿತುಕೊಂಡರೂ ನನಗೇನೂ ಆಗುತ್ತಿರಲಿಲ್ಲ. ಕೊನೆಗೇನೋ ಹೇಳಲೇಬೇಕೆನ್ನುವ ನಿರ್ಧಾರಕ್ಕೆ ಬಂದು, ' ಮಗು ' ಎಂದರು. ನಾನು ತಲೆಯೆತ್ತಿ, ' ಹೂಂ 'ಗುಟ್ಟಿದೆ.

' ಮಗು, ಒಂದು ಗಹನವಾದ ವಿಷಯ. ಅದು ನಿನ್ನೊಡನೆ ಹೇಳುವ ಅವಶ್ಯಕತೆಯಿಲ್ಲದಿದ್ದರೂ ಅದು ನಿನಗೆ ತಿಳಿದಿರಲಿ ಎಂದು ಹೇಳುತ್ತಿದ್ದೇನೆ. ಒಮ್ಮೊಮ್ಮೆ ನಮಗರಿಯದಂತೆ ನಮ್ಮಿಂದ ತಪ್ಪುಗಳಾಗುತ್ತವೆ. ಅದನ್ನು ತಿಳಿ ಯುವದರಿಂದ ನಿನಗೇನು ಲಾಭವಿಲ್ಲವಾದರೂ, ನಾವೆಲ್ಲಿ ತಪ್ಪುತ್ತೇವೆ ಎನ್ನುವ ದರ ಕಲ್ಪನೆ ಬರಲೆಂದು ಹೇಳುತ್ತಿದ್ದೇನೆ. ಗೌರಾ-ಲಚ್ಚಿಯರು ಇನ್ನುಳಿದ ನನ್ನ ಮಕ್ಕಳಿಗಿಂತ ಬೇರೆ ಬೇರೆಯಾಗಿ ಕಾಣುತ್ತಾರಲ್ಲವೆ? ಈ ಮೂವರು ಮಕ್ಕಳಿಗೆ ಅವರ ತಾಯಿ ಆರೈಕೆ ಮಾಡುವಂತಿದ್ದರೆ, ಈ ಎರಡು ಗುಬ್ಬಚ್ಚಿಗಳಿಗೆ ನಾನೇ ತಾಯಾಗಿ-ತಂದೆಯಾಗಿ ಆರೈಕೆ ಮಾಡುತ್ತಿದ್ದೇನೆ. ಇವರಿಬ್ಬರ ತಾಯಿ, ಅವಳು ನನಗೆ ಸಲ್ಲಿಸುವ ಋಣಕ್ಕಾಗಿ, ನನ್ನ ಜೊತೆ ಕೆಲವು ದಿವ ನಿಂತು ಅದರ ಬಡ್ಡಿಯೆಂದು ಈ ಎರಡು ಮಕ್ಕಳನ್ನು ಬಿಟ್ಟು, ಅನಾಥ ರನ್ನಾಗಿ ಮಾಡಿ, ನನ್ನನ್ನು ಚಿರದುಃಖಿಯನ್ನಾಗಿ ಮಾಡಿ ಈ ಲೋಕ ಬಿಟ್ಟು ಹೋಗಿದ್ದಾಳೆ.

' ಲಚ್ಚಿ-ಗೌರಾರು ನಿಮ್ಮ ಮಕ್ಕಳಲ್ಲವೆ ? '

' ನನ್ನವೇ ಮಕ್ಕಳವರು ; ನಾನು ಬಾಗಿಲುಕೋಟೆಯಲ್ಲಿರುವಾಗ ನನ್ನ ಹೆಂಡತಿ ರಾಮೂನನ್ನು ಹಡೆಯುವದಕ್ಕಾಗಿ ರತ್ನಾಗಿರಿಗೆ— ಅಂದರೆ ಅವಳ ತವರುಮನೆಗೆ ಹೋಗಿದ್ದಳು. ಲಚ್ಚಿ-ಗೌರಾರ ತಾಯಿ ಆಗಿನ್ನೂ ಯುವತಿ. ನಮ್ಮ ಮನೆಯಲ್ಲಿ ಕೆಲಸಕ್ಕಿದ್ದಳು. ಹೆಂಡತಿಯನ್ನು ಅಗಲಬೇಕಾದ ವಿಧುರಾ ವಸ್ಥೆ ನನಗೆ ಬಂದುದರಿಂದ ಆ ಕಾಲವಲ್ಲಿ ದೇಹದ ದಾಹ ತಣಿಸಲು ಇನ್ನೊಂದು

ಹೆಣ್ಣಿನ ಅವಶ್ಯಕತೆ ನನಗುಂಟಾಯಿತು. ಹರೆಯದ ಹುಡುಗಿ, ಜೋಕಾಲಿಯ ಮೇಲೆ ಕುಳಿತು ವಿರಹಗೀತೆಯನ್ನು ಹಾಡುತ್ತಿರುವಾಗ ವಿರಹಿಯಾದ ನನ್ನ ಮನಸ್ಸಿಗೆ ಅದೇನು ' ಉಬ್ಬಣ 'ವುಂಟಾಗಬೇಡ. ಎದುರಿಗೆ ನವಯುವತಿಯೊಬ್ಬಳಿರುವಳೆಂದು ಸಲ್ಲದ್ದನ್ನು ಮಾಡುವದೆ? ಅದೇ ವಿಚಾರ ನನ್ನ ತಲೆಯಲ್ಲಿ ಸುಳಿದು ನನ್ನನ್ನು ಬಹುದಿನ ಪೀಡಿಸಿತು; ಹಾಗೆಂದು ಒಮ್ಮೆಲೆ ದುಡುಕಿ ಹೆಣ್ಣನ್ನು ಹುಚ್ಚಾಪಟ್ಟೆಯಾಗಿ ಏನೂ ಕೇಳಲಿಕ್ಕೆ ಬರುವದಿಲ್ಲವಲ್ಲ; ನನ್ನಿಂಗಿತವನ್ನರಿತ ಅವಳು ನನ್ನಿಂದ ದೂರವಿರತೊಡಗಿದಳು. ಅವಳು ನನ್ನೆದುರಿಗೆ ಬಂದಾಗಲೆಲ್ಲ ನನ್ನ ಮೈ-ಕೈಗಳು ಆದರಿದಂತಾಗಿ ಮೈಯಲ್ಲಿ ಶಕ್ತಿ ಸಂಚಾರವಾಗುತ್ತಿತ್ತು. ಇಚ್ಛೆಯ ತೃಪ್ತಿಗಾಗಿ ಒಮ್ಮೊಮ್ಮೆ ಮರ್ಯಾದೆಯನ್ನೂ ಬಿಡಬೇಕಾಗುವದು. ಒಂದು ದಿನ ನನ್ನ ಮನದಿಂಗಿತವನ್ನು ಸೂಚಿಸಿದೆ; ಮೊದಲಿಗೆ ಅವಳು ಒಪ್ಪಲಿಲ್ಲ; ನಾನು ಏನೇನೋ ಧೈರ್ಯ ಹೇಳಿ ಒಪ್ಪಿಸಿಬಿಟ್ಟೆ. ಕಾಲ ಬದಲಾಗಿ ನಾವಿನ್ನೂ ಸುಖದ ಕನಸಿನಲ್ಲಿರುವಾಗಲೇ ಅಜನು ಪಟ್ಟ ವಿಯೋಗ ದುಃಖಕ್ಕಿಂತ ಬಲವಾಗುವ ಹಾಗೆ ಬರಸಿಡಿಲೊಂದು ನಮ್ಮ ಮೇಲೆರಗಿತು. ದಿನವೂ ರೋ-ರೋ ಎಂದಳತೊಡಗಿದಳು. ಅವಳು ಜನಾಪವಾದಕ್ಕೆ ಬೆದರಿದಳು; ಅದರ ಪರಿಣಾಮ ಲಕ್ಷ್ಮಿ, ನೀವೆಲ್ಲ ಕರೆಯುತ್ತಿರುವ ಲಚ್ಚಿ. ಮತ್ತು ನಾಲ್ಕು ವರುಷಗಳ ನಂತರ ಗೌರಾ. ಗೌರಾಳ ಹೆರಿಗೆಯಾಗಿ ಇನ್ನೂ ಹತ್ತು ದಿನವಾಗುವದರೊಳಗೇ ಅವಳು ನಮ್ಮನ್ನು ಕೈಬಿಟ್ಟು ಹೋದಳು. ಮಗುವಿನ ರಕ್ಷಣೆ ಮಾಡುವವರಾರು? ಹೆಂಡತಿಯ ಹತ್ತಿರ ಹೇಳಲು ಅವಳೇನೆನ್ನುವಳೋ ಎಂದು ತೀರ ಸಣ್ಣಾದೆ. ನನ್ನ ಹೆಂಡತಿಯೂ ದೇವರಂತಹ ಮನುಷ್ಯಳು. ನನಗೂ ಸಂತೈಸಿ ಆ ಎರಡು ಮಕ್ಕಳ ರಕ್ಷಣೆಯನ್ನು ತಾನು ವಹಿಸಿಕೊಂಡಳು. ನಂತರ ಬಾಗಿಲುಕೋಟೆ ನನ್ನ ಪಾಲಿಗೆ ಮಸಣವಾಯಿತು. ಅಲ್ಲಿಂದ ಇಲ್ಲಿಗೆ ವರ್ಗಮಾಡಿಸಿಕೊಂಡೆ. ಈಗ ಆ ಎರಡೂ ಮಕ್ಕಳಿಗೆ ನನ್ನನ್ನು ಕಂಡರೆ ಮಾತ್ರ ಹಾಯೆನಿಸುವದು. ಅದಕ್ಕಾಯೇ ನಾನು ಆ ಎರಡು ಮಕ್ಕಳ ಜೊತೆ ಇಲ್ಲಿ ಮಲಗುತ್ತೇನೆ. ನಾನು ಈ ಜೀವನದಲ್ಲಿ ಮಾಡಿದ ಅದೊಂದು ದೊಡ್ಡ ತಪ್ಪಿಗಾಗಿ ನನ್ನ ಕೈಕಾಲಿನ್ನೂ ಗಟ್ಟಿಯಿರುವಾಗಲೇ ಅವರಿಬ್ಬರನ್ನೂ ಯೋಗ್ಯ ವರನ ಕೈಗೊಪ್ಪಿಸಿದರೆ, ಬಳಿಕ ನಾನು ಸುಖವಾಗಿ ಸಾವನ್ನಪ್ಪಲು ಅಡ್ಡಿಯಿಲ್ಲ. ಇನ್ನುಳಿದ ಮೂವರು ಮಕ್ಕಳಿಗೆ ನಾನೇನೂ ಕಡಿಮೆ ಮಾಡಲಿಲ್ಲ. ಅವರಿಗೂ

ವ್ಯವಸ್ಥೆ ಮಾಡಿ ಇಟ್ಟಿದ್ದೇನೆ. ಯಾವ ಕಾರಣದಿಂದಲೇನೋ, ನೀನೂ ನಾನು ಕರೆದಂತೆ ಹತ್ತಿರ ಬಂದೆ.'

"ನಂತರ ಅವರು ಕಣ್ಣೀರಿಳಿಸುತ್ತ ಕೆಳಗೆ ಹೋದರು. ಆ ಪ್ರೊಫೆಸರ ಹಾಸವ ಅರಿವಿನಿಂದಲೋ ಏನೋ ಅವರು ನನಗೆ ಅತಿ ಆಪ್ತರಾಗಿ, ಅವರ ಬಗ್ಗೆ ನನಗೆ ವಾತ್ಸಲ್ಯ ಮೂಡಿದೆ.

"ನಾನು ಉದ್ಯೋಗವನ್ನು ದೊರಕಿಸಿ ಕಾರವಾರದಲ್ಲಿಯೇ ಉಳಿಯುತ್ತೊಡಗಿದ ಮೇಲೆ ನಾನೂ ಲಕ್ಷ್ಮಿ ಹತ್ತಿರವಾಗುತ್ತ ಬಂದೆವು. ನಮ್ಮ ಮಾತುಕತ್ತ, ದೃಷ್ಟಿಗಳ ಮಿಲನ ಎಲ್ಲವೂ ದೂರದಿಂದಲೆ. ಅವಳೆಂದೂ ನನ್ನ ಸಮೀಪ ಬರುತ್ತಿರಲಿಲ್ಲ. ನಾನೇನಾದರೂ ತೊಂದರೆ ಕೊಟ್ಟೇನೆಂತ ನನ್ನೊಡನೆ ಏನಾದರೂ ಮಾತನಾಡುವಾಗ್ಗೆ ಗೌರಾಳನ್ನು ತನ್ನ ಜೊತೆಯಲ್ಲಿ ಇರಿಸಿಕೊಳ್ಳುತ್ತಿದ್ದಳು. ಒಮ್ಮೆ ನಾನು ಗೌರಾಳಿಗೆ ಏನೋ ಕೆಲಸ ಹೇಳಿ ಹೊರಗೆ ಕಳುಹಿಸಿ, ಲಕ್ಷ್ಮಿಯನ್ನು ಮಾಳಿಗೆಗೆ ಬರಲು ಸನ್ನೆ ಮಾಡಿದೆ. ಗೌರಾ ಇಲ್ಲದ್ದು ಅವಳಿಗೂ ಗೊತ್ತಿತ್ತು. ಅದಕ್ಕಾಗಿ ಬರುವದಕ್ಕೇ ಅನುಮಾನ ಮಾಡಿದಳು. ಬಾಗಿಲಲ್ಲಿ ಬಂದು ನಿಂತಳು. ನಾನವಳ ಕೋಣೆಯಲ್ಲಿಯೇ ಕುಳಿತಿದ್ದೆ. 'ಬಾ' ಎಂದೆ. ಒಳಗೆ ಬರದೆ ಬಾಗಿಲಿನ ಎರಡೂ ಬದಿಗೆ ಕೈಯಿಟ್ಟು ತನ್ನ ಶರೀರವನ್ನು ಹಿಂದೆ ಮುಂದೆ ಓಡಿಸುತ್ತಿದ್ದಳು. ಮತ್ತೂ 'ಬಾ' ಎಂದು ಕರೆದೆ. ಇಲ್ಲ ಎನ್ನುವಂತೆ ತಲೆ ದೂಗಿದಳು.

'ಇಲ್ಲಿ ಬಾ, ನಿನ್ನನ್ನೇನೂ ತಿನ್ನುವದಿಲ್ಲ.'

'ಇಲ್ಲ, ಬರುವದಿಲ್ಲ.'

'ನಿಜಕ್ಕೂ ನಿನಗೇನೂ ಮಾಡುವದಿಲ್ಲ.'

'ಈ ಕೋಣೆಗೆ ಬೇಕಾದರೆ ಬರುತ್ತೇನೆ; ನೀವು ಕುಳಿತ ಕೋಣೆಗೆ ಬರುವದಿಲ್ಲ.' ಹುಸಿಗಣ್ಣಿನಿಂದ ನನ್ನನ್ನೇ ನೋಡಿದಳು.

'ನಾನು ಆ ದಿನ ನಿನಗೆ ಓದಲು ಕೊಟ್ಟ ಕಾದಂಬರಿ ಎಲ್ಲಿದ?'

'ಯಾಕೆ?'

'ತಿರುಗಿ ಒಯ್ದು ಕೊಡಬೇಕಾಗಿತ್ತು.'

'ನನ್ನದು ಪೂರ್ಣ ಓದಿಯಾಗಿಲ್ಲ.'

‘ ಅದು ಹೇಗೆ ಓದುತ್ತೀಯೆ ಪುಣ್ಯಾತ್ಗಿತ್ತಿ ? ಓದಲು ಕೊಟ್ಟು ಒಂದು ವಾರವಾಯಿತು. ಒಂದು ಇನ್ನೂರು ಪುಟ ಓದಲು ಇಷ್ಟು ದಿನವೆ ? ’

‘ ನಿಮಗೇನು ಅದೊಂದೇ ಕೆಲಸ ; ನಮಗದೊಂದೇ ಕೆಲಸವಲ್ಲ, ವೇಳೆ ಉಳಿದರೆ ಮಾತ್ರ ಓದುವದು. ’

ಕಾದಂಬರಿ ಕೊಡುವದಕ್ಕೂ ಒಳಗೆ ಬರುವದಿಲ್ಲವೆಂಪಾಯಿತು. ಬೇರೇನೂ ವಿಷಯ ಮಾತಾಡಲು ಇಲ್ಲದ್ದರಿಂದ ಸನ್ನೆಯಿಂದಲೇ ಬಾ ಎನ್ನುವಂತೆ ಸೂಚಿಸಿದೆ. ಅದಕ್ಕೂ ನಿರಾಕರಣೆ.

‘ ನೀನು ಬರುತ್ತೀಯೋ ಇಲ್ಲವೊ ? ’ ನಾನು ಸಿಟ್ಟಿನಿಂದಲೇ ಕೇಳಿದೆ.

‘ ಇಲ್ಲ. ’

‘ ನಿಜವಾಗಿಯೂ. ’

‘ ಗೌರಾ ಬರಲಿ, ಬರುತ್ತೇನೆ. ’

‘ ಅವಳ ಆವಶ್ಯಕತೆಯಿಲ್ಲ ; ನೀನೊಬ್ಬಳೇ ಬರಬೇಕು. ’

‘ ಕುಳಿತುಕೊಳ್ಳಿ, ಕೆಳಗೆ ಹೋಗಿ ಬರುತ್ತೇನೆ. ’

“ ಪುನಃ ನಾನವಳನ್ನು ನೋಡಲಿಲ್ಲ ; ಹೋದವಳು ಐದು ನಿಮಿಷವಾದರೂ ತಿರುಗಿ ಬರಲಿಲ್ಲ. ನನ್ನ ಕಣ್ಣು ಕಟ್ಟಲಿಕ್ಕೆ ಈ ವಿದ್ಯೆ ಹೂಡಿದಳು ಎಂದುಕೊಂಡು ನಿರಾಶೆಯಾಯಿತು. ಅದರ ಜೊತೆಗೆ ಸಿಟ್ಟಿನ ಕಾವೂ ಏರತೊಡಗಿತು. ನಾನು ಸರಸರ ಮಾಳಿಗೆಯ ಮೆಟ್ಟಲಿಳಿದು ಹೋದೆ. ನಾನು ಮೆಟ್ಟಲ ಮುಟ್ಟಿದಾಗ, ಅವಳು ಮಾಳಿಗೆಗೆ ಬರಲೆಂದು ಬಂದಿರಬೇಕು ; ನಾನವಳನ್ನು ತಿರುಗಿ ಸಹ ನೋಡಲಿಲ್ಲ. ನೇರವಾಗಿ ನಾನು ರೂಮಿಗೆ ಹೋದೆ. ಬಹುಶಃ ಅವಳು ನಾನವಳ ದೃಷ್ಟಿಯಿಂದ ಮರೆಯಾಗುವತನಕ ‘ ನಾನೇಕೆ ಹೀಗೆ ಮಾಡಿಹೋದೆ ? ’ ಎಂದು ನೋಡುತ್ತಿರಬೇಕು. ರೂಮಿನ ಕೀಲಿ ತೆಗೆಯುತ್ತಿರುವಾಗ ನನಗೇ ಬೇಸರವಾಯಿತು. ನಾನು ಅಷ್ಟು ಬೇಗನೇ ಬರಬಾರದಾಗಿತ್ತು ; ಅವಳು ಬರುವದಕ್ಕೆ ಹೊರಟಿದ್ದಳು. ಸ್ವಲ್ಪ ಕಾದಿದ್ದರಾಗುತ್ತಿತ್ತು ಎಂದುಕೊಂಡೆ. ಹಾಗೆ ಮಾಡಿದ್ದೇ ಒಳಿತಾಯಿತು ಎಂದು ಇನ್ನೊಂದು ಮನಸ್ಸು ಹೇಳಿತು.

“ ನಾನು ಕಾರವಾರದಲ್ಲಿದ್ದ ದಿನಗಳಲ್ಲೆಲ್ಲ ಅವರ ಮನೆಯಲ್ಲಿಯೇ ಊಟ ಮಾಡುತ್ತಿದ್ದೆನೆಂದು ಹೇಳಿಯೇ ಇದ್ದೇನೆ. ಊಟಕ್ಕೆ ಬೇಕಾಗುವಷ್ಟು ಹಣ

ವನ್ನು ಪ್ರತಿತಿಂಗಳೂ ನಾನು ಕೊಡುತ್ತಿದ್ದೆ. ಮೊದಲನೇ ಸಲ ನಾನು ಹಣ ಕೊಡಲು ಹೋದಾಗ್ಗೆ ಲಕ್ಷ್ಮಣರಾಯರು ಸರ್ವಥಾ ತೆಗೆದುಕೊಳ್ಳಲಿಲ್ಲ. ನಾನೇ ನಿಷ್ಠುರವಾಗಿ ಹೇಳಿದೆ: 'ನಾನು ಈಗ ನೂರಾಗಲೀ, ಆರಾಗಲೀ ಕಾಸು ಗಳಿಸುತ್ತೇನೆ. ಗಳಿಸುವ ಕಾಲದಲ್ಲಿ ಹೊಟ್ಟೆಗೆ ತಿಂದ ಅನ್ನದ ಅರ್ಧ ಹಣ ವನ್ನು ಸಹ ಕೊಡಲಾಗದ ನಾನು, ಗಳಿಕೆಯಿಲ್ಲದ ಕಾಲದಲ್ಲಿ ಕೊಡುವದು ಹ್ಯಾಗೆ? ನೀವೀಗ ಹಣ ತೆಗೆದುಕೊಳ್ಳದಿದ್ದರೆ ಮುಂದಿನ ತಿಂಗಳಿಂದ ಜ್ಞಾನಾವಳಿ ಯಲ್ಲಿ ಊಟ ಮಾಡುವೆ. ಊಟಕ್ಕೆ ಬರುವದಿಲ್ಲ ಎಂತ ಬೇಸರಪಟ್ಟುಕೊಳ್ಳ ಬೇಡಿ. ಯಾವದೇ ರೀತಿಯ ಬೇಸರದಿಂದ ಮಾತ್ರ ನಾನಿದನ್ನು ಹೇಳಲಿಲ್ಲ. ಲಕ್ಷ್ಮಣರಾಯರು ಮರುಮಾತನಾಡದೆ ಹಣವನ್ನು ತೆಗೆದುಕೊಂಡರು. ಅದರ ಲ್ಲಿಯ ಒಂದು ಕಾಸನ್ನೂ ಖರ್ಚು ಮಾಡದೆ ಅಕ್ಕ-ತಂಗಿಯರ ಹೆಸರಿನಲ್ಲಿ ಆ ಹಣವನ್ನೆಲ್ಲ ಬ್ಯಾಂಕಿನಲ್ಲಿಡುತ್ತ ಬಂದಿದ್ದಾರೆ; ಆದರೂ ನಾನು ಈ ರೀತಿ ನುಡಿದೆ ನೆಂದು ಲಕ್ಷ್ಮಣರಾಯರಿಗೆ ಬೇಸರವಾಗಿರಬೇಕು.

"ಎಂದಿನಂತೆ ನಾನು ಊಟಕ್ಕೆ ಬಂದೆ; ಆಗ ಲಚ್ಚಿ ಮಾಳಿಗೆಯ ಮೇಲಿ ದ್ದಳು. ನಾನು ಊಟ ಮಾಡಿ ಮಾಳಿಗೆಗೆ ಬರಬಹುದೆಂದೆಣಿಸಿ ಅಲ್ಲಿಯೇ ಇದ್ದ ಳೆಂದು ಕಾಣುತ್ತದೆ. ಇವಳ ಸೊಕ್ಕಿಗೆ ತಕ್ಕ ಶಿಕ್ಷೆ ಮಾಡಬೇಕೆಂದುಕೊಂಡಿದ್ದ ನಾನು ನೇರವಾಗಿ ನನ್ನ ರೂಮಿಗೆ ಹೋಗಿಬಿಟ್ಟೆ. ಗೌರಾಳ ಹತ್ತಿರ ಕೇಳಿದ್ದ ಳಂತೆ: 'ಅಣ್ಣ ಊಟಮಾಡಿ ಹೋದರೆ?' ಎಂದು. ಜಾಣಾಕ್ಷಳಾದ ಗೌರಾ 'ನನಗೇನು ಗೊತ್ತು?' ಎಂದಿದ್ದಳು.

"ಮರುದಿನ ನಾನು ಊಟಕ್ಕೆ ಬಂದಾಗ ಒಂದೆರಡು ಸಾರೆ, ಅಡಿಗೆ ಮನೆಯ ಬದಿ ಸುಳಿದು ಹೋಗಿದ್ದಳು. ಆ ದಿನವೂ ನಾನಲ್ಲಿ ಹೋಗಲಿಲ್ಲ. ಸಂಜೆಗೆ ಊಟ ಮಾಡಿ ಹೋಗುವಾಗ ಮಾಳಿಗೆಯ ಬಾಗಿಲಲ್ಲಿ ನಿಂತಿದ್ದಳು; ನಾನವಳ ಕಡೆ ನೋಡದೆ ಹೋದೆ. ಅದಕ್ಕೂ ಮಾರನೆಯ ದಿನ ಸಂಜೆಯಲ್ಲಿ ಬಾಗಿಲಲ್ಲಿ ನಿಂತಿದ್ದಳು. ಬಾಗಿಲು ದಾಟುವಾಗ್ಗೆ, ನನ್ನ ಭುಜ ಅವಳ ಮೈಗೆ ತಾಗಿದ್ದರೂ, ಲೆಕ್ಕಿಸದೆ ಊಟ ಮುಗಿಸಿ ನಾನು ಹೋಗಿಬಿಟ್ಟಿದ್ದೆ. ದಿನವೂ ಗುಡುಗು ಮಿಂಚುಗಳ ಹಾಗೆ ಪರಿವರ್ತನೆಯಾಗುತ್ತ, ಇನ್ನೂ ಹೊಸ ಹೊಸ ರೀತಿಯ ಬದಲಾವಣೆಯೊಂದಿಗೆ, ಅವಳು ನನ್ನೆದುರಿಗೆ ಬಂದು ಸುಳಿದರೂ ನಾನ ವಳ ಕಡೆ ನೋಡುತ್ತಿರಲಿಲ್ಲ.

"ಅವಳು ಅದೇ ವರ್ಷ ಮೆಟ್ರಿಕ್ಯದಲ್ಲಿದ್ದಳು. ನಾನು ಇನ್ನು ಬರುವ ದಿಲ್ಲವೆಂದು ತಿಳಿದು, ತಂಗಿಯೊಡನೆ ಹೇಳಿ ಕಳುಹಿದ್ದಳು : 'ಒಂದು ಅಲ್ಜಿಬ್ರಾದ ಲೆಕ್ಕ ಬರುವದಿಲ್ಲವಂತೆ, ಊಟಮಾಡಿ ಹೋಗುವಾಗ್ಗೆ ಹೇಳಿಕೊಟ್ಟು ಹೋಗು' ಎಂತ. ಅದರ ಇಂಗಿತ ಬಲ್ಲ ನಾನು, 'ಪುರಸೊತ್ತಿಲ್ಲ, ನಾಳೆ ನೋಡೋಣ' ಎಂದೆ. ಮಾರನೆಯ ದಿನವೂ ಅದೇ ಹಾಡು ; ನನಗೆ ಅಲ್ಜಿಬ್ರಾ ಬರೋದಿಲ್ಲ. ಮರೆತು ಹೋಗಿದೆ, ಗೌರಾ, ನಿನ್ನಕ್ಕನ ಹತ್ತಿರ ಹಾಗೆಯೇ ಹೇಳು. ಅಲ್ಜಿಬ್ರಾ ಮಾಸ್ತರ ಹತ್ತಿರವೇ ಹೇಳಿಸಿಕೊಳ್ಳಲು ಹೇಳು ಎಂದೆ.

"ನಾಳಿಗೆಗೆ ಬರುವದಿಲ್ಲವೆ ?" ಗೌರಾ ಕೇಳಿದಳು.

"ರಾತ್ರಿಯಾಯಿತಲ್ಲ ಗೌರಾ."

"ಹಾಗೇ ಹೋಗಬಹುದಲ್ಲ."

"ಇನ್ನೂ ಕತ್ತಲೆಯಾಗುವದಿಲ್ಲವೆ ?"

"ನಿನಗೆ ಹೆದರಿಕೆಯಾಗುತ್ತಿದೆಯೇನೋ ?"

"ಅವಳ ಕೆನ್ನೆಗೆ ಮೆಲ್ಲನೆ ಹೌದೆನ್ನುವಂತೆ ಏಟು ಕೊಟ್ಟು ಹೊರಟು ಹೋಗಿದ್ದೆ. ಮರುದಿನ ಶುಕ್ರವಾರ, ಎಂದೂ ಗುಡಿಗೆ ಹೋಗದ ಲಚ್ಚಿ, ಮತ್ತು ಗೌರಾ ಗೆಳತಿಯರ ಜೊತೆ ಹನುಮಪ್ಪನ ಗುಡಿಗೆ ಹಣ್ಣು-ಕಾಯಿ ಮಾಡಿಸಲು ಹೋಗಿದ್ದರು. ನಾನು ಬಟ್ಟೆ ಹಾಕಿಕೊಳ್ಳುತ್ತಿರುವಾಗ ಅವರು ಗೆಳತಿಯರ ಜೊತೆ ದೂರ ಬರುತ್ತಿರುವದನ್ನು ನೋಡಿದೆ. ಅವಳೆಂದೂ ನನ್ನ ರೂಮಿಗೆ ಬಂದಿದ್ದಿಲ್ಲ. ನಾನು ಬೇರೆ ಕಡೆ ಹೊರಡುವ ತಯಾರಿಯಿಂದ ರೂಮಿನ ಹೊರ ಬಂದು ಬಾಗಿಲೆಳೆದು ಬೀಗ ಹಾಕುತ್ತಿರುವಾಗ ಅವಳು ನನ್ನ ಹಿಂದುಗಡೆ ನಿಂತಿದ್ದಳು ; ನಾನದನ್ನು ನೋಡಿರಲಿಲ್ಲ.

"ಕಾದಂಬರಿ ತಂದಿದ್ದೇನೆ"ಯೆಂದಳು.

"ದೃಷ್ಟಿ ಹೊರಳಿಸಿ ನೋಡಿದಾಗ, ಅವಳ ಕಣ್ಣುಗಳೂ ನನ್ನನ್ನೇ ನೋಡುತ್ತಿದ್ದವು. ಮೋರೆ ತಿರುವಿ ಕಿಟಕಿ ತೋರಿಸಿ, ಇನ್ನಷ್ಟು ಬಿರುಸಾಗಿ ಗಡಸು ಧ್ವನಿಯಿಂದ ಸರಳುಗಳ ಸಂದಿಯಿಂದ "ಒಳಗೆ ಚೆಲ್ಲು" ಎಂದಿದ್ದೆ.

"ಹಾಳಾದರೆ?"

"ಆಗೋದಿಲ್ಲ."

"ಹಾಳೆ ಜಜ್ಜಿ ಹೋದರೆ ?"

" ಹೋದರೆ ನಾನು ನೋಡಿಕೊಳ್ಳುತ್ತೇನೆ; ನೀನು ಒಗೆದು ಹೋಗು " ಎಂದಿದ್ದೆ.

" ನಾನು ಬೀಗ ಹಾಕಿ, ತಂದಿದ್ದ ಬಾಡಿಗೆಯ ಸ್ಯಾಕಲ್ಲನ್ನೇರಿದೆ. ಎದುರಿನಲ್ಲಿಯೇ ಗೆಳತಿಯರು ನಿಂತಿದ್ದರು. ಅವರೆದುರಿಗೇ ನಾನು ಹಾದು ಹೋಗಬೇಕು; ಅವರೆಲ್ಲರೂ ನನ್ನನ್ನು ನೋಡುತ್ತಾರೆ; ಹರಕು ಬಾಯಿಯ ಗೌರಾಳೂ ಅಲ್ಲಿದ್ದಳು. ಯಾರ ಬಾಯಿ ಬಂದಾದರೂ ಅವಳ ಬಾಯಿ ಬಂದಾಗೋದಿಲ್ಲ. ನಾನೆಣಿಸಿದಂತೆಯೇ ನಾನವರೆದುರಿಗೆ ಬಂದ ಕೂಡಲೇ,

" ಎಲ್ಲಿಗೆ ಅಣ್ಣಾ ? " ಎಂದು ಕೇಳಿದಳು.

ಅವರ ಗೆಳತಿಯರು ಮುಗುಳುನಗೆ ನಕ್ಕಿರಬೇಕು.

" ಆಫೀಸಿಗೆ. "

" ಅದೆಂತಹ ಆಫೀಸಪ್ಪ, ಇಷ್ಟೊತ್ತಿನಲ್ಲಿ ? "

" ಬಾ ಹೇಳುತ್ತೇನೆ. "

" ಹತ್ತಿರ ಬಂದಾಗ ಕಿವಿ ಹಿಂಡಬೇಕೆಂದು ಕಿವಿಗೆ ಕೈ ಹಾಕುವಷ್ಟರಲ್ಲಿಯೇ

" ಮಾರನೆಯ ದಿನ ನಾನು ಊಟಕ್ಕೆ ಬಂದಾಗ ಗೌರಾ ಬದಿಯಲ್ಲಿ ಕರೆದು ಹೇಳಿದಳು; ಹೇಳುವಾಗ್ಗೆ ಅವಳ ಮೋರೆಯೂ ಬಾಡಿತ್ತು. ' ಅಣ್ಣಾ, ಅಕ್ಕ ಗುಡಿಗೆ ಬರಲೇ ಇಲ್ಲ. ನಿನ್ನೆ ಹಾಗೆ ನೀನು ಹೋದ ಮೇಲೆ ತನಗೆ ತಲೆನೋವೆಂದು ಹೇಳಿ ಅಕ್ಕ ಮನೆಗೆ ಬಂದುಬಿಟ್ಟಳು. ಅದು ನನಗೆ ವಿಚಿತ್ರವಾಗಿಯೇ ಕಂಡಿತು. ನಾನು ಹನುಮಪ್ಪನ ಗುಡಿಯಿಂದ ಹಿಂದಿರುಗಿ ಬರಬೇಕಾದರೆ, ಅಕ್ಕ ಅಳುತ್ತ ಕುಳಿತಿದ್ದಳು. ಕತ್ತಲೆಯಾದೊಡನೆ ದೀಪ ಉರಿಸುತ್ತಿದ್ದವಳು, ಅಂದು ಇನ್ನೂ ಹಚ್ಚಿರಲಿಲ್ಲ. ಟೇಬಲ್ಲಿಗೆ ಒರಗಿ ಕುಳಿತು ಅಳುತ್ತಿದ್ದಳು. ನಾನು ದೀಪ ಹಚ್ಚಿ ಅವಳ ಮೋರೆಯನ್ನು ನೋಡಿದೆ. ಅವಳಾಗಲೇ ಮೋರೆ ಒರೆಸಿಕೊಂಡಿದ್ದು ಗೊತ್ತಾಗುತ್ತಿತ್ತು. ಅಮೃತಾಂಜನ ಹಚ್ಚಲೇ ಎಂದು ಕೇಳಿದ್ದಕ್ಕೆ ಬೇಡವೆಂದಳು. ಊಟ ಮಾಡಿ ಬರುತ್ತೇನೆಂದು ಹೋದೆ. ಹೇಗೆ ಊಟ ಮಾಡಿದೆನೋ ಗೊತ್ತಾಗಲಿಲ್ಲ. ಊಟ ಮಾಡಿ ಬಂದಾಗ ಮಾಳಿಗೆಗೆ ಹೋಗದೇ ಹಾಗೇ ಹೋಗಬೇಕೆನ್ನಿಸಿತು. ಮನಸ್ಸು ಕೇಳಲಿಲ್ಲ. ನಿಧಾನವಾಗಿ ಮಾಳಿಗೆ ಏರಿದೆ. ಬಾಗಿಲಿಗೆ ಬಂದ ಹಾಗೆ ಒಳಗೆ ಹೋಗಲಿಕ್ಕೆ ಧೈರ್ಯವಾಗಲಿಲ್ಲ.

ಅವಳ ರೂಮಿಗೆ ಹೋದಾಗ ಅವಳ ಸಾಮಾನು, ಬಟ್ಟೆ, ಪುಸ್ತಕಗಳೆಲ್ಲ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಲಚ್ಚಿ ಹಾಸಿಗೆಯ ಮೇಲೊರಗಿ ತಲೆದಿಂಬಿನಲ್ಲಿ ಮೋರೆ ಮುಚ್ಚಿಕೊಂಡಿದ್ದಳು. ತಲೆ ಕೆದರಿದೆ; ಅವಳ ತಲೆ ಆ ರೀತಿ ಕೆದರಿದ್ದು ನಾನು ಎಂದೂ ನೋಡಿರಲಿಲ್ಲ. ಅವಳನ್ನು ಮುಟ್ಟಿ ಎಬ್ಬಿಸಬೇಕೆಂದು ಕೈ ಮಾಡಿದವನು ಏನೆನ್ನುವಳೋ ಎಂದು ಕೈ ಹಿಂದಕ್ಕೆಳೆದುಕೊಂಡೆ. ನನ್ನ ಹೇಡಿತನಕ್ಕೆ ನನಗೇ ನಾಚಿಕೆಯೆನಿಸಿತು. ಅವಳ ತಲೆ ತಟ್ಟಿ 'ಲಚ್ಚೀ' ಎಂದೆ. ಏಳಲಿಲ್ಲ. ಎರಡೂ ಭುಜ ತಿರುವಿ ಹಾಸಿಗೆಯಿಂದ ಎಬ್ಬಿಸಿದೆ. ಮೋರೆಯನ್ನು ನನ್ನೆದೆಯಲ್ಲಿ ಹುದುಗಿಸಿಕೊಂಡು ಮುಳುಮುಳು ಅತ್ತುಬಿಟ್ಟಳು. ಆಕಾಶವೆಲ್ಲ ಮೋಡಗಳಿಂದಾವರಿಸಿತ್ತು. ಮಳೆಸುರಿದು ಆಕಾಶ ನಿರಭ್ರವಾಯಿತು.

"ಲಚ್ಚಿ ಹೀಗೇಕೆ ಮಾಡಿದೆ ?"

"ಅತ್ತು ಕೆಂಪಾದ ಕಣ್ಣುಗಳಿಂದ ನನ್ನನ್ನೇ ನೋಡುತ್ತ ಕೇಳಿದಳು.

"ನನ್ನನೇನು ಕೇಳುತ್ತೀರಾ ? ನಿಮಗೆ ಗೊತ್ತಿಲ್ಲವೆ ?"

"ನನಗೇನು ಗೊತ್ತು ?"

"ನಿನ್ನೆ ನಾನು ನಿಮ್ಮ ರೂಮಿಗೆ ಬಂದಾಗ ಬೀಗವೇಕೆ ಹಾಕಿದಿರಿ ?"

"ನನಗೆ ಪೇಠೆ ಕಡೆಗೆ ಹೋಗುವ ಕೆಲಸವಿತ್ತು."

"ಸ್ವಲ್ಪ ನಿಂತು ಹೋಗುತ್ತಿದ್ದರೆ ಆಗುತ್ತಿರಲಿಲ್ಲವೆ ?"

"ನೀನು ಬರುತ್ತೀಯೆಂತ ನನಗೇನು ಗೊತ್ತು ?"

"ನಾವು ಬರುವದನ್ನು ನೀವು ನೋಡಿದ್ದಿಲ್ಲವೇ ?"

"ಇಲ್ಲ."

"ಬೇಕಂತಲೇ ಹೇಳುತ್ತೀರಿ."

"ಇಲ್ಲ, ನಿನ್ನಾಣೆಗೂ."

"ಆದರೂ ಅವಳಿಗೆ ನಂಬಿಕೆಯಿರಲಿಲ್ಲ. ಹಿಂದಿನ ವಿಷಯ ಎತ್ತಿದಳು.

"ಇಷ್ಟು ದಿನ ಇಲ್ಲಿಗೇಕೆ ಬರಲಿಲ್ಲ ?"

"ಯಾಕೂ ಇಲ್ಲ."

"ನನ್ನ ಮೇಲಿನ ಸಿಟ್ಟಿನಿಂದಲ್ಲ ತಾನೇ ?"

"ಹುಚ್ಚು ಮಾತನಾಡಬೇಡ."

"ನಾನು ನಿಮ್ಮೆದುರಿಗೆ ಬಂದರೂ ನೀವು ನನ್ನನ್ನು ನೋಡುತ್ತಿರಲಿಲ್ಲ."

" ನನಗೆ ನೋಡುವ ಅಗತ್ಯವಾದರೂ ಏನಿತ್ತು ? "

" ಅದಕ್ಕೂ ಮೊದಲು ನೋಡುವ ಅಗತ್ಯವಿತ್ತೆಂತ ತೋರುತ್ತದೆ. "

ಹೌದೆನ್ನುವಂತೆ ತಲೆಯಲ್ಲಾಡಿಸಿದೆ.

" ಆದಿನ ನಾನು ಬರುವದಕ್ಕಿಂತ ಮೊದಲೇಕೆ ಹೋದಿರಿ ? "

" ನಿನಗೆ ಬರಲಿಕ್ಕೆ ಯಾಕೆ ಅಷ್ಟೊತ್ತು ? "

" ಅಮ್ಮ ನನಗೆ ಯಾವದೋ ಕೆಲಸ ಮಾಡುವಂತೆ ಹೇಳಿದಳು. ಮಾಡಿ ಬರುವಾಗ್ಗೆ ಹೊತ್ತಾದರೆ ಅದು ನನ್ನ ತಪ್ಪೆ ? "

" ನಾನು, ನೀನು ಅಷ್ಟು ವೇಳೆಯಾದರೂ ಬರಲಿಲ್ಲವೆಂದು ಹೋಗಿ ಬಿಟ್ಟೆ. ನೀನು ಬೇಕೆಂತಲೇ ತಡಮಾಡಿದೆಯೆಂದು ಸಿಟ್ಟುಬಂದಿತು. "

" ಹೀಗೆ ಕಾರಣವಿಲ್ಲದೆ ಇನ್ನು ಮುಂದೂ ಸಿಟ್ಟು ಮಾಡುವಿರೇನೋ ? "

" ಅದಿರಲಿ, ಮೋರೆ ನೋಡು, ಎಷ್ಟು ಅಸಹ್ಯವಾಗಿದೆ ; ಹೋಗಿ ತೊಳೆದು ಕೊಂಡು ಬಾ. "

ಅವಳು ಮೋರೆ ತೊಳೆದುಕೊಂಡು ಬಂದು, ಸೀರೆಯ ಸೆರಗಿನಿಂದ ಒರೆಸಿ ಕೊಳ್ಳುತ್ತಾ, ನನಗೆ ಹೊಂದಿಯೇ ನಿಂತಳು.

" ಸ್ವಲ್ಪ ದೂರ ನಿಂತರೆ ಆಗುವದಿಲ್ಲವೆ ? "

" ಅವಳು ದೂರ ಸರಿಯಲು ಯತ್ನಿಸಿದರೂ ನಾನು ಸರಿಯಲು ಕೊಡ ಲಿಲ್ಲ. ಅವಳ ಮೋರೆಯೆತ್ತಿ ' ಇಬ್ಬರೂ ತಪ್ಪುದಂಡ ಇಡಬೇಕು ' ಎಂದೆ.

" ಏನನ್ನು ? "

" ಇದನ್ನೇ ಎಂದು ಅವಳನ್ನು ಬಾಚಿ ತಬ್ಬಿಕೊಂಡು, ಮುತ್ತುಗಳ ಸುರಿ ಮಳೆಗರೆದೆ. ಅವಳದಕ್ಕೆ ಪ್ರತಿಕ್ರಿಯೆ ತೋರಿಸಲಿಲ್ಲ. ಶ್ರೀನಾಥ, ಆ ದಿನ ನಾನು ಉಂಡ ಸುಖ, ಎಂದೂ ಮರೆಯಲು ಸಾಧ್ಯವಿಲ್ಲ. "

೯

' ಗೌರಾ, ಒಂದು ಪಾಕೇಟ ಸಿಗರೇಟ ತರುತ್ತೀಯಾ ? '

' ಎಂಟಾಣೆ ಕೊಟ್ಟರೆ ತರುತ್ತೇನೆ. '

' ಇನ್ನು ನಾಲ್ಕಾಣೆ ಹೆಚ್ಚಿಗೆ ಯಾಕೆ ? '

' ಇಲ್ಲಿಂದ ಪೇಟೆಗೆ ಹೋಗಿ ಬರಲಿಕ್ಕೆ. '

" ಗೌರಾ ಹೋಗಿ ಸಿಗರೇಟ ತಂದಿದ್ದಳು. ಕೆಳಗಡೆ ಲಚ್ಚಿ ಏನೋ ಕೆಲಸದಲ್ಲಿದ್ದುದರಿಂದ ಇನ್ನೂ ಬಂದಿರಲಿಲ್ಲ. ನಾನು ಸಿಗರೇಟ ಸೇದುತ್ತ ಏನೇನೋ ಹರಟೆ ಕೊಚ್ಚುತ್ತಿದ್ದೆ. ಯಾರು ಬರುತ್ತಾರೆ, ಯಾರು ಹೋಗುತ್ತಾರೆ ಎನ್ನುವ ಕಲ್ಪನೆಯೂ ಇದ್ದಿರಲಿಲ್ಲ ನಮ್ಮ ಹರಟೆಯಲ್ಲಿ. ನಾನು ಸಿಗರೇಟ ಸೇದಿ ಉದ್ದಕ್ಕೆ ಹೊಗೆ ಬಿಡುತ್ತಿರುವಾಗ ಬಾಗಿಲಲ್ಲಿ ನೆಳಲು ಬಿದ್ದಂತಾಯಿತು. ಹೊಗೆ ಬಾಯಲ್ಲಿಯೇ ಉಳಿಯಿತು. ಉರಿಯುತ್ತಿರುವ ಸಿಗರೇಟನ್ನು ಕಿಸೆಗೆ ತುರುಕಿದೆ. ಆಗ ಕೋಣೆ ಪ್ರವೇಶಿಸಿದವರು ಲಕ್ಷ್ಮಣರಾಯರು. ಮೈಮೇಲೆ ಕುದಿನೀರು ಚೆಲ್ಲಿದಂತಾಯಿತು. ಇನ್ನೂತನಕ ಅವರೆದುರಿಗೆ ಸಿಗರೇಟ ಸೇದಿರಲಿಲ್ಲ. ಅವರಿಗೆ ನಾನು ಸಿಗರೇಟ ಸೇದುತ್ತಾನೇನೋ ಎಂಬುವ ಸಂಶಯವಿರಬೇಕು. ಅವರೇನೂ ಕಣ್ಣಿನಿಂದ ನೋಡಿರಲಿಲ್ಲ. ಸಿಗರೇಟಿನ ಹೊಗೆ ಕೋಣೆಯೆಲ್ಲ ಸುತ್ತಾಡಿ, ಕಿಟಕಿ ದಾಟಿ ಹೋಗಿದ್ದರೂ ಅದರ ವಾಸನೆ ಉಳಿಯದೇ ಇರುತ್ತದೆಯೆ ? ಅವರ ಹುಡುಕುವ ಕಣ್ಣುಗಳು ನನ್ನನ್ನೊಮ್ಮೆ ನೋಡಿ, ಸುತ್ತಲೂ ಸುಳಿಯಿತು. ಮತ್ತೊಮ್ಮೆ ನನ್ನ ಕಡೆ ನೋಡಿ ಕಿರುನಗೆಯನ್ನು ತಂದುಕೊಂಡು,

' ಏನು ರವಿ, ಈ ದಿನ ಮೊದಲೇ ಹರಟೆ ಹೊಡೆಯಲು ಬಂದೆಯಲ್ಲ ? '

' ಹುಂ ' ಹೊಗೆ ಬಾಯಲ್ಲಿದ್ದುದರಿಂದ ನುಂಗಲೂ ಉಪಾಯವಿಲ್ಲ; ಬಿಡಲೂ ಸಾಧ್ಯವಿಲ್ಲ. ಗೌರಾಳಿಗೆ ನನ್ನ ಸಂಕಟ ನೋಡಿ ನಗು ಬಂದಿತು.

' ಇವತ್ತು ಭಾನುವಾರವಲ್ವೆ ? ' ಮತ್ತೆ ಅವರೇ ಕೇಳಿದರು.

' ಹುಂ. '

‘ ಆಫೀಸಿಗೆ ಹೋಗಬೇಕೋ ? ’

‘ ಹುಂ.

“ ನಾನವರ ಪ್ರತಿಯೊಂದು ಮಾತಿಗೂ ‘ ಹುಂ ’ ಗುಟ್ಟುತ್ತಿದ್ದುದರಿಂದ ‘ ಬಾಯಲ್ಲಿ ಏನು ತುಂಬಿಕೊಂಡಿದ್ದೀಯೆ ? ’ ಎಂದು ಕೇಳಿದರು. ನನ್ನ ಮರ್ಯಾದೆ ಕಳೆಯುವದಕ್ಕೆಂದೇ ಆ ಹೊಗೆ ಎಷ್ಟು ನುಂಗಲು ಪ್ರಯತ್ನಿಸಿದರೂ ಹೊಟ್ಟೆಯಲ್ಲಿ ಹೋಗದೆ ಫುಸ್ಸೆಂದು ಹೊರಬಿದ್ದು ಹೋಗಬೇಕೆ ? ಅದೂ ಲಕ್ಷ್ಮಣರಾಯರ ಎದುರಿನಲ್ಲಿ. ನನ್ನ ಮೋರೆ ಪೆಚ್ಚಾಗುವದಂತೂ ಇರಲಿ, ಗೌರಾ ನಗು ಬಿಟ್ಟು ಅಳತೊಡಗಿದಳು. ಲಕ್ಷ್ಮಣರಾಯರು ಕೇಳಿದರು :

‘ ಸಿಗಾರ ಸೇದುತ್ತೀಯಾ ? ’

“ ನಾನು ಮಾತನಾಡದೇ ಸುಮ್ಮನುಳಿದೆ. ಅವರೇ ಮುಂದುವರಿಸಿದರು.

‘ ಸಿಗರೇಟ ಸೇದುವದು ಒಳ್ಳೆಯದಲ್ಲ, ಅದನ್ನು ಬಿಡಲು ಪ್ರಯತ್ನಿಸು ’ ಎಂದು ಕೆಳಗಿಳಿದು ಹೋದರು. ಗೌರಾ, ‘ ಇನ್ನು ನಿನ್ನ ವ್ಯಾಪಾರ ನೋಡಿ ಅಪ್ಪ ನನಗೆಲ್ಲಿ ಬಯ್ಯುತ್ತಾನೋ ಎಂದುಕೊಂಡಿದ್ದೆ. ನನಗೆ ಹೆದರಿಕೆಯಾಯಿತು ’ ಎಂದು ಕಣ್ಣೀರೊರಸಿಕೊಂಡಳು.

“ ಒಮ್ಮೆ ಲಚ್ಚಿಯೂ ಅದೇ ಮಾತಿನ ಬಗ್ಗೆ ದೂರು ತೆಗೆದಳು. ನಾನು ಸಿಗರೇಟ ಸೇದುತ್ತ ಬರುತ್ತಿದ್ದೆ. ಲಚ್ಚಿಯ ರೂಮಿನಲ್ಲಿ ಅವಳೆದುರಿಗೆ ಸಿಗರೇಟ ಸೇದುತ್ತಿರಲಿಲ್ಲ. ಅವಳು ಬರಲಿಕ್ಕಿಲ್ಲವೆಂದು ತಿಳಿದು, ಸಿಗರೇಟ ಹಚ್ಚಿದೆ. ಇನ್ನೇನು ಒಗೆಯಬೇಕೆನ್ನುವಷ್ಟರಲ್ಲಿ, ಲಚ್ಚಿ ಬಂದೇಬಿಟ್ಟಳು. ಅವಳು ಬಂದದು ನಾನು ನೋಡಿರಲಿಲ್ಲ. ಬಂದು ನನ್ನೆದುರಿನಲ್ಲಿಯೇ ಕುಳಿತುಬಿಟ್ಟಳು. ನಾನು ಕಣ್ಣು ಮುಚ್ಚಿಕೊಂಡುಬಿಟ್ಟೆ. ನನ್ನ ಹಗರಣ ನೋಡಿ ಅವಳಿಗೂ ನಗೆ ಬಂದಿರ ಬೇಕು. ಲಾಲಿಯಿಂದಲೇ ಕೇಳಿದಳು :

‘ ಮಗುವಿಗೆ ನಿದ್ದೆ ಬಂದಂತಿದೆ. ’

‘ ಹುಂ. ’

‘ ಹುಂ, ಎನ್ನುತ್ತಿದೆಯಲ್ಲ. ತೊಟ್ಟಿಲಲ್ಲಿ ಮಲಗಿಸಬೇಕೇನೋ ? ’

‘ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡಬೇಕು. ’

“ ನಾವಿಬ್ಬರೂ ಪೂರ್ತಿ ನಕ್ಕೆವು. ಸಿಗರೇಟ ಒಗೆದು ಅವಳನ್ನು ಜಗ್ಗಿ ಕೊಂಡೆ. ನಾವಿಬ್ಬರೇ ಇರುವಾಗ ಅವಳು ನನ್ನ ತೊಡೆಯ ಮೇಲೇ ಕುಳಿತು

ಕೊಳ್ಳುತ್ತಿದ್ದಳು. ನಂತರ ನಮ್ಮ ಪುರಾಣ ಪ್ರಾರಂಭವಾಯಿತು. ಇಂದು ಅವಳನ್ನು ಜಗ್ಗಿ ಕುಳ್ಳಿರಿಸಿಕೊಂಡು ಕೆನ್ನೆಯ ಸಮೀಪ ತುಟಿ ಒಯ್ದಾಗ,

'ಊಹುಂ, ದುರ್ವಾಸನೆ' ಎಂದಳು.

'ಯಾತರದು ?'

'ಸಿಗರೇಟ ಸೇದುವದಕ್ಕೆ ಮರ್ಯಾದೆಯೂ ಆಗೋದಿಲ್ವೆ ? ಮರ್ಯಾದೆ ಇದ್ದವರಲ್ಲ.'

'ಮರ್ಯಾದೆ ಬಿಡಲಿಕ್ಕೆ ನೀನೇ ಹೇಳಿದ್ದೆಯಲ್ಲ.'

'ನಾನೇ ?'

'ಹೌದು, ಆ ದಿನ ನೀನು ನನ್ನ ತೊಡೆಯ ಮೇಲೆ ಕುಳಿತಾಗ, ನಿನ್ನ ತಂಗಿ ಬಂದರೂ ಏಳಲಿಲ್ಲ. ಅವಳು ನೋಡಿದಳು. ಸಿಟ್ಟಿನಿಂದ ನಿನ್ನನ್ನು ದೂಡಿದುದಕ್ಕೆ ನೀನು ಮತ್ತೆ ನನ್ನನ್ನೇ ಹಿಡಿದುಕೊಂಡೆಯಲ್ಲ. ಹಾಗೇಕೆ ಮಾಡಿದಿ ಎಂದು ಕೇಳಿದುದಕ್ಕೆ ಹೆಣ್ಣುಮಕ್ಕಳ ಸಹವಾಸ ಮಾಡುವವರು ಯಾವಾಗಲೂ ಮರ್ಯಾದೆ ಬಿಡಬೇಕು ಎಂದಿ.'

'ಅಂದು ಅವಳು ನೋಡಿಬಿಟ್ಟಿದ್ದಳು ; ಮತ್ತೆ ಎದ್ದರೆ ಕಳ್ಳತನ ಮುಚ್ಚಿಕೊಂಡಂತಾಗುವದೆ ? ಸುಮ್ಮನೆ ನಗೆಗೇಡು.'

'ತಂಗಿ ನಗೆಯಾಡಿದರೆ ಏನೂ ಆಗೂದಿಲ್ಲವೆ ?'

'ಹೌದು, ಆ ದಿನ ನೀವು ನನ್ನ ಸಮೀಪ ನಿಂತಾಗ ದೂರ ಸರಿ ಎಂದರೆ ಸರಿದಿರಾ ? ನನಗೂ ದೂರ ಸರಿಯಲು ಕೊಡಲಿಲ್ಲ. ತಂಗಿ ನೀವು ಹೋದ ಮೇಲೆ ನನಗೆ ಸಿಕ್ಕಾಬಟ್ಟೆ ಗೇಲಿ ಮಾಡಿದಳು.'

'ನೀನು ಯಾವಾಗಲೂ ತಿರುಗಿ ಉತ್ತರ ಕೊಡುವವಳೆಂದು ನನಗೆ ಗೊತ್ತು, ಲಚ್ಚಿ. ಒಂದು ಸ್ವಲ್ಪ ಹೆಚ್ಚುಕಡಿಮೆಯಾದರೆ, ಅತ್ತು ಹೆದರಿಸಿಬಿಡುತ್ತಿ. ಕಣ್ಣೀರಿನಿಂದಲೇ ನಿಮ್ಮ ಬಚಾವ.'

'ನೀವು ಸಿಟ್ಟುಮಾಡಿ ಹೆದರಿಸುತ್ತೀರಿ. ಆ ದಿನ ಕಾಣಲಿಲ್ಲವೆ ? ನನಗೆ ಬರಲು ಸ್ವಲ್ಪ ತಡವಾಯಿತೆಂದು ನೀವು ಎದ್ದು ಹೋಗಿಬಿಟ್ಟಿರಿ. ತಿರುಗಿ ಕರೆಯೋಣವೆಂದರೂ ನನಗಾಗ ಅನುಕೂಲವಾಗಲಿಲ್ಲ. ಇನ್ನು ಮುಂದೆಯೂ ಹೀಗೆಯೇ ಕಣ್ಣು ಕೆಂಪಗೆ ಮಾಡಿ ನನ್ನನ್ನು ನಡುಗಿಸುತ್ತೀರೇನೊ ?'

'ನಿನ್ನ ಆ ಪುರಾಣ ಈಗ ಸಾಕುಮಾಡು.'

‘ ನೋಡಿ, ಮತ್ತೆ ನೀವು ಕಿವಿ ಹಿಂಡುತ್ತೀರಿ. ಕಿವಿ ಹಿಂಡಿದರೆ ನೋವಾಗುವದಿಲ್ಲವೆ ? ’

“ ಇಬ್ಬರೂ ಮೌನವಾದೆವು. ಚರ್ಚೆಗೆ ವಿಷಯವೇ ಇರಲಿಲ್ಲ. ಆದರೆ ಲಕ್ಷ್ಮಿ ಏನೋ ನೆನಪು ಮಾಡಿಕೊಂಡು,

‘ ನೋಡಿ, ನೀವು ಎಷ್ಟು ಜಾಣರು ಅಂತ. ’

ನಾನು ಪ್ರಶ್ನಾರ್ಥಕವಾಗಿ ಆವಳನ್ನು ನೋಡಿದೆನು.

‘ ಆ ದಿನ ನೀವು ಸಿಗರೇಟ ಸೇದುವದಿಲ್ಲವೆಂದು ವಚನವಿತ್ತಿದ್ದಿರಲ್ಲವೆ ? ’

‘ ಹೌದು. ’

‘ ಮತ್ತೆ ಸೇದುತ್ತಿದ್ದುದೇಕೆ ? ’

‘ ಸೇದುವದಿಲ್ಲವೆಂದು ಹೇಳಿ ನಿನ್ನನ್ನು ನಿರಾಶೆಗೊಳಿಸಲೆ ? ’

‘ ನೀವು ಸೇದಲೇಬಾರದು. ’

‘ ಏನಾಗುತ್ತೆ ? ’

‘ ಆ ಹಾಳು ಸಿಗರೇಟಿನ ವಾಸನೆ ನನ್ನಿಂದ ಸಹಿಸೋಕೆ ಆಗುವದಿಲ್ಲ. ವಾಸನೆ ಬಡಿದರೂ ಹೊಟ್ಟೆಯಲ್ಲಿ ಏನೋ ಆದಂತಾಗಿ ವಾಂತಿ ಆಗುತ್ತದೆ. ’

‘ ಈಗ ನೀನೇ ಹೇಳು, ನಾನು ನಿನ್ನನ್ನು ಮದುವೆಯಾದ ಮೇಲೆ ನಿನ್ನನ್ನು ಬಿಟ್ಟರೆ ನೀನು ಸುಮ್ಮನಿರುತ್ತೀಯಾ ? ’

‘ ಇಲ್ಲ. ’

‘ ಮತ್ತೆ ಏನು ಮಾಡುವಿ ? ’

‘ ಆತ್ತು ರಂಪ ಮಾಡಿಬಿಟ್ಟೇನು. ’

‘ ಹಾಗೆಯೇ, ನಾನು ಸಿಗರೇಟನ್ನು ಮದುವೆಯಾಗಿದ್ದೇನೆ. ಅವಳನ್ನು ಬಿಟ್ಟರೆ ಅವಳು ಅಳುವದಿಲ್ಲವೆ ? ’

‘ ಅವಕ್ಕೆ ಜೀವವಿದೆಯೇನು ? ’

‘ ನೋಡು ಲಕ್ಷ್ಮಿ. ನಿನಗೆ ಒಂದೇ ಸಾರೆ ಎರಡು ಅವಳಿಮಕ್ಕಳು ಹುಟ್ಟಿವರೆಂದು ಇಟ್ಟುಕೋ, ಕಡೆಗೆ.... ’

‘ ಹೋಗಿ, ನೀವೊಂದು. ’

“ ಇನ್ನೂ ನಮ್ಮಿಬ್ಬರ ಮದುವೆಯಾಗಿಲ್ಲ. ಅದಕ್ಕೂ ಮೊದಲೇ ನಮ್ಮಿಬ್ಬ

ಳಿಗೂ ಮಕ್ಕಳಾಯಿತು ಎನ್ನುವ ವಿಷಯ ನನಗೂ ನಗು ತಂದಿತು. ಅವಳು ಸೆರಗಿನಿಂದಲೇ ತುಟಿ ಮುಚ್ಚಿಕೊಂಡಳು. ನಾನೇ ಹೇಳಿದೆ :

' ನಗಬೇಡ, ನಾನು ಹೇಳುವದಾದರೂ ಕೇಳು ! '

' ಮರ್ಯಾದೆ ಬಿಟ್ಟಿಲ್ಲ ಮಾತಾಡುತ್ತೀರಿ. ನೀವು ಹೇಳೋದು ಬೇಡ. ನಾನು ಕೇಳೋದೂ ಇಲ್ಲ. '

' ನೋಡು, ಆವಳಿ ಮಕ್ಕಳಾದ ನಂತರ.... '

' ಅದೆ, ಮತ್ತೆ ಅದನ್ನೇ ಪ್ರಾರಂಭಿಸಿದಿರಾ ? '

' ನಾನು ಏನು ಹೇಳುವೆನೆಂಬಾದರೂ ಚೆನ್ನಾಗಿ ತಿಳಿದುಕೊಳ್ಳು. '

ಲಚ್ಚಿ ಕಿವಿಗೊಟ್ಟು ಕೇಳಿದಳು.

' ಆ ಚಿಕ್ಕ ಮಕ್ಕಳಿಗೆ ತಿಳಿಯುವದಿಲ್ಲೆಂತ ನೀನು ಒಂದೇ ಮಗುವಿಗೆ ಎರಡೂ ಮೊಲೆಯ ಹಾಲನ್ನು ಕುಡಿಸುತ್ತೀಯಾ ? '

' ಹಾಗಲ್ಲ, ಇನ್ನೊಂದು ಮಗುವಿಗೂ ಒಂದು ಕೊಡಬೇಕು. '

' ಸರಿ, ನನಗೆ ನೀನೂ ಸಿಗರೇಟೂ ಎರಡು ಆವಳಿಮಕ್ಕಳಿದ್ದಂತೆ. ಸಿಗ ರೇಟಿಗೆ ತಿಳಿಯುವದಿಲ್ಲೆಂತ ಅದಕ್ಕೆ ಹಾಲುಣ್ಣಿಸದೇ ಇರುವದೆ? '

' ಸಿಗರೇಟ ಬಿಡುವದಿಲ್ಲವೆನ್ನುವದಕ್ಕೆ ಇಷ್ಟೊಂದು ಪುರಾಣವೆ? ನೀವು ಮೊದಲೇ ಇಷ್ಟು ಹೇಳಿದ್ದರೆ ಇಷ್ಟೊಂದು ಬೇಳುವ ಅವಶ್ಯಕತೆಯಿರಲಿಲ್ಲವಲ್ಲ. '

' ನಿನಗೆ ಚೆನ್ನಾಗಿ ತಿಳಿಯಲಿ ಎಂದು ಹೇಳಿದ್ದು. '

' ಈಗ ಒಂದೇ ಮಾತು ನನಗೆ ಬೇಕಾದದ್ದು, ನೀವು ಸಿಗರೇಟ ಬಿಡ ಬೇಕು. '

' ಬಿಡುವದಿಲ್ಲವಾದರೆ ? '

' ಬಿಡಲೇಬೇಕು. ' ಮತ್ತೂ ಒತ್ತಿ ಹೇಳಿದಳು.

" ಸರಕಾರದ ಕಾಯ್ದೆಯನ್ನಾದರೂ ಮುರಿಯುತ್ತಾರಂತೆ. ಸಾಮಾನ್ಯ ಮನುಷ್ಯನೊಬ್ಬನ ಮಾತನ್ನು ಮುರಿಯದೇ ಇರುತ್ತಾರೆಯೆ ?

' ನೀವಿದಕ್ಕೆ ಒಪ್ಪುತ್ತೀರೋ ಇಲ್ಲವೊ ? '

' ತಡೆ, ಹೇಳುತ್ತೇನೆ. '

" ಮುತ್ತು ಕೊಡಲು ಮೋರೆ ಮುಂದೆ ಮಾಡಿದೆ. ಇದು ನಿರ್ಧಾರವಾಗುವ ವರೆಗೂ ಏನೂ ಬೇಡ ಎಂದುಬಿಟ್ಟಳು. ಮಾತು ಗಂಭೀರಕ್ಕೆ ಇಳಿಯಿತು

ಎಂದು ತಿಳಿದು ನನಗೂ ಸ್ವಲ್ಪ ಕಸಿವಿಸಿಯಾಯಿತು. ಯಾವದೂ ಇತ್ಯರ್ಥ ವಾಗದೆ, ಮಾತು ಗಂಭೀರರೂಪಕ್ಕಿಳಿದದ್ದರಿಂದ ಅದನ್ನು ಬದಿಗಿಡಲು ಸಾಧ್ಯ ವಾಗಲಿಲ್ಲ. ಸ್ವಲ್ಪ ಯೋಚನೆ ಮಾಡುವ ಪ್ರಸಂಗವೇ ಬಂದುದರಿಂದ ಏನು ಹೇಳುತ್ತಾಳೋ ನೋಡೋಣವೆಂದು ನಾನೇ ಹೇಳಿದೆ :

'ನಾನು ಸಿಗರೇಟ ಸೇದುವದು ಬಿಡುವದಿಲ್ಲ.'

'ನಾನು ಮುತ್ತು ಕೊಡುವದಿಲ್ಲ.'

'ಸರಿ ತಾನೆ ?'

'ಸರಿ.'

'ಇದೇ ಮಾತು ನಿಜ ತಾನೇ ?'

೧೭

"ಆಗಲೇ ಗೌರಾ ಮೇಲೆ ಬಂದುದರಿಂದ ಲಚ್ಚಿ ಎದ್ದು ಹೋದಳು. ಇಬ್ಬರ ಮೋರೆಯಲ್ಲಿಯೂ ಆನಂದವಿಲ್ಲದ್ದನ್ನು ನೋಡಿ ಮುಖ ಲಕ್ಷಣ ಬಲ್ಲ ಹುಡುಗಿ ಗೌರಾ ಸ್ವಲ್ಪ ಬಿಗುವಿನಿಂದಲೇ ಕೇಳಿದಳು.

'ಇವತ್ತಿನ ಮೀಟಿಂಗ ಸರಿಯಾಯಿತೆ ?'

'ಯಾವಾಗಲೂ ಮೀಟಿಂಗ ಆಗುವದು ವಿಷಯ ಚರ್ಚಿಸಲಿಕ್ಕೆ !'

'ಇವತ್ತಿನ ಚರ್ಚೆಯ ವಿಷಯವೇನು ?'

'ಇನ್ನು ಮುಂದೆ ನಾವಿಬ್ಬರೂ ಗೌರಾಳೊಡನೆ ಮಾತಾಡುವದಿಲ್ಲ ವೆಂದು !'

'ಅಬ್ಬ ! ಅಕ್ಕ ಇಷ್ಟು ಬೇಗ ನಿಮ್ಮ ಪಾರ್ಟಿ ಸೇರಿದಳೊ ?'

'ಇಲ್ಲ ; ನಾನೊಬ್ಬನೇ.'

'ಹಾಗಾದರೆ ನಿಮ್ಮದು ಒಂದೇ ಓಟು. ನಮ್ಮದು ಎರಡು ಆಗುತ್ತದೆ.'

ನಗು ಬೇಕಿಲ್ಲವಾದರೂ ನಕ್ಕುಬಿಟ್ಟೆವು.

"ದಿನಗಳೆಯಿತು. ನಾನು ಲಚ್ಚಿ ಮಾತನಾಡುತ್ತೇವೆ. ಬೇಸರವಾಗ ದಿರಲಿ ಎಂದು ನಗೆಯಾಡುತ್ತೇವೆ. ಅದು ಮನಸ್ಸಿದ್ದಲ್ಲ, ಒಬ್ಬರನ್ನೊಬ್ಬರು ತಪ್ಪು ತಿಳಿದುಕೊಳ್ಳದಿರಲಿ ಎಂತ. ನಮ್ಮಿಬ್ಬರ ಸಂಬಂಧವನ್ನು ಬಲಪಡಿಸುವ ಮುತ್ತೇ ನಮ್ಮಿಂದ ಕಳಚಿಹೋದುದರಿಂದ ಇಬ್ಬರ ಮಾತುಗಳಲ್ಲಾಗಲೀ ಮನ ಸ್ಸಿನಲ್ಲಾಗಲಿ ಸ್ವಾಸ್ಥ್ಯವಿರಲಿಲ್ಲ. ಏನೋ ಅಪೂರ್ಣತೆ ನನ್ನಂತೆ ಅವಳಿಗೂ

ಅನಿಸಿರಬೇಕು. ಮೊದಲು ಒಟ್ಟಿಗೇ ಕುಳಿತುಕೊಳ್ಳುತ್ತಿದ್ದವರು ಈಗ ದೂರ ದೂರವಾಗತೊಡಗಿದೆವು. ಮಾತಿನ ವೇಗವೂ ಮೊದಲಿಗಿಂತ ಕಡಿಮೆಯಾಯಿತು. ನಾನು ಬರುತ್ತೇನೆಂದು ಮಾತ್ರ ಲಚ್ಚಿ ಬರುತ್ತಿದ್ದಳು. ನಂತರ ಮೊದಲೇ ವಿರಸ ವಾದುದರಿಂದ ಮಾತೂ ಕಡಿಮೆಯಾಗತೊಡಗಿತು. ಅವಳು ಬಂದರೇ ಆಗದ ನನಗೆ ಮಾತಾಡುವದೇ ಬೇಡವಾಯಿತು; ಮೌನವನ್ನೇ ಆಚರಿಸಿದೆ. ಹೀಗೆ ಬಹು ದಿನಗಳು ಕಳೆದುಹೋದವು. ಅವಳು ತನ್ನ ಕೋಣೆಯಿಂದ, ನಾನು ಈಜೆಗೆ ಬಂದರೂ ಬರುತ್ತಿರಲಿಲ್ಲ. ನನ್ನ ಸಿಗರೇಟಿನ ಹಾವಳಿ ಜೋರಾಯಿತು. ನಾನು ಒಂದರ ನಂತರ ಇನ್ನೊಂದು ಸಿಗರೇಟನ್ನು ಸೇದತೊಡಗಿದೆ. ನಾನು ಕಣ್ಣು ಮುಚ್ಚಿಕೊಂಡು ಸೇದುತ್ತಿರುವಾಗ, ಅವಳು ನನ್ನೆದುರಿಗೆ ಬಂದು ನಿಂತಳು. ನಾನವಳನ್ನು ಲಕ್ಷಿಸದೆ ಒಂದರ ಮೇಲೊಂದು ಸಿಗರೇಟ ಸೇದಹತ್ತಿದೆ. ಇದನ್ನು ನೋಡಿ ಬಹುಶಃ ಅವಳಿಗೂ ಬೇಸರವಾಗಿರಬೇಕು. ಸುಮ್ಮನೇ ಹೋಗಿ ಅಳುತ್ತ ಮಲಗಿಬಿಟ್ಟಳು. ನಾನವಳನ್ನು ನೋಡಲೂ ಇಲ್ಲ. ಸಂತೈಸಲು ಹೋಗಲೂ ಇಲ್ಲ. ಗೌರಾ ನಮ್ಮ ವಿರಸ ಅಲ್ಪ ಸ್ವಲ್ಪ ನೋಡಿದರೂ ಅದು ಸಹಜವಾಗಿಯೇ ಇರಬೇಕೆಂದು ತಿಳಿದುಕೊಂಡಿರಬೇಕು. ಆದರೂ ಒಂದು ಮಾತು ಹೇಳಿದ್ದಳು : ‘ ಅಣ್ಣನ ಮೋರೆ ಪೂರ್ವಕ್ಕೆ, ಅಕ್ಕನ ಮೋರೆ ಪಶ್ಚಿಮಕ್ಕೆ.’ ಆ ಮಾತಿಗೆ ನಾನು

“ ಶ್ರೀನಾಥ ಸ್ವಲ್ಪ ಮ್ಯಾಚಿಸ್ ಕೊಡುತ್ತೀಯಾ ? ”

ಪೆಟ್ಟಿಗೆ ಖಾಲಿಯಾದುದರಿಂದ ನಾನು ಬೇರೆ ಪೆಟ್ಟಿಗೆ ಕೊಟ್ಟೆ. ಸಿಗರೇಟನ್ನು ಹಚ್ಚಿಕೊಂಡು ಹೇಳತೊಡಗಿದ.

“ ಒಂದು ದಿನ ನಾನೂ ಲಚ್ಚಿ ಖುರ್ಚಿಯ ಮೇಲೆ ಕುಳಿತಿದ್ದೆವು. ಆ ದಿನ ನಾನು ಹೇಳದೆಯೇ ನನ್ನ ತೊಡೆಯ ಮೇಲೆ ಕುಳಿತಿದ್ದಳು. ಏನೋ ಆನಂದದ ಸುದ್ದಿ ಬರಬೇಕೆಂದು ನನಗೆ ಖಾತ್ರಿಯಾಯಿತು.

‘ ಲಚ್ಚೀ ! ’ ಎಂದೆ ನಾನು.

‘ ಹುಂ ’ ಎಂದಳು.

‘ ಯಾಕೋ ಬಹಳ ಆನಂದದಿಂದ ಇದ್ದಂತೆ ಕಾಣುತ್ತಿದೆಯಲ್ಲ ! ’

‘ ಹೇಳಲೆ ? ’

‘ ಹೇಳು. ’

' ಊಹೂಂ. '

' ಯಾಕೆ ? '

' ನನಗೆ ನಾಚಿಕೆಯಾಗುತ್ತದೆ. '

' ನನ್ನೆದುರಿಗೂ ನಾಚಿಕೆಯೇ ? '

" ನಾಚಿಕೆಯಿಲ್ಲವೆನ್ನುವಂತೆ ಕಣ್ಣರಳಿಸಿ ನೋಡಿದಳು. ' ಹೇಳಲೇ ' ಎಂದಳು ಮತ್ತೆ.

' ಹುಂ. '

' ನಿಮ್ಮೊಡನೆ ತಂದೆಯವರು ಯಾವದಾದರೂ ವಿಷಯ ಕೇಳಿದ್ದರೆ ? '

' ಯಾವ ವಿಷಯ ? '

' ಲಗ್ನದ ವಿಷಯವಾಗಿ. '

' ಯಾರದು ಲಗ್ನ, ಯಾರೊಡನೆ ? '

' ನಿಮ್ಮ ಲಗ್ನವನ್ನು ನನ್ನೊಡನೆ ' ಎಂದು ನಸುನಾಚಿದಳು.

" ಅಬ್ಬ ಹುಡುಗಿ ! ಎಂದೆ. ಅವಳ ಮೈ-ಮನ-ಕಣ್ಣುಗಳೆಲ್ಲ ಪುಳಕಿತ ವಾಗಿದ್ದವು. ಅವಳ ಇಳಿಬಿಟ್ಟ ಕಾಲುಗಳು ಆನಂದವೆಂಬ ಅಲ್ಲಾಡುತ್ತಿದ್ದವು.

' ಏನೆಂದರು ಲಚ್ಚಿ ? '

' ರವಿಯೊಡನೆ ಲಗ್ನವಾಗುತ್ತೀಯಾ ? ' ಎಂದು ಕೇಳಿದರು.

' ಅಬ್ಬ ! ನನ್ನ ಹೆಸರು ಹೇಳುತ್ತೀಯಾ ? '

" ಹೆಸರು ಅವಳಿಗರಿವಿಲ್ಲದಂತೆ ಅವಳ ಬಾಯಿಂದ ಜಾರಿದ್ದರಿಂದ, ನಾಲಿಗೆ ಕಚ್ಚಿಕೊಂಡಳು. ಮೋರೆ ಇನ್ನಷ್ಟು ಕೆಂಪಡರಿತು.

' ನೀನೇನು ಹೇಳಿದೆ ? '

' ನಾನೇನು ಹೇಳಲಿ ? '

' ಏನೂ ಹೇಳಲಿಲ್ಲವೆ ? '

' ಅವರಿಗದು ತಿಳಿಯುವದಿಲ್ಲವೆ ? ' ಅದು ಅವಳ ಜಂಭದ ಮಾತಾಗಿತ್ತು.

' ನಿಮ್ಮ ಹತ್ತಿರ ಕೇಳಿದರೆ ನೀವೇನು ಹೇಳುವಿರಿ ? '

' ನಾನು ಲಚ್ಚಿಯನ್ನು ಲಗ್ನವಾಗುವದಿಲ್ಲವೆಂದು ಹೇಳುತ್ತೇನೆ. '

' ಹಾಗೇ ಹೇಳಿ. '

" ಎಂದು ತಲೆಯಲ್ಲಾಡಿಸಿ ಕೆಳಗಿಳಿದು ಹೋದಳು. ಗಂಭೀ ಮೂರಾ

ಯಿತು. ಲಚ್ಚಿ ಸಾವಕಾಶವಾಗಿ ಕಳ್ಳ ಹೆಜ್ಜೆಯನ್ನಿಡುತ್ತ ಬಂದು, ತಾನು ತಂದಿದ್ದ ಚಹದ ಗ್ಲಾಸನ್ನು ನನ್ನ ತುಟಿಗೆ ಹಚ್ಚಿದಳು. ನಾನು ಗ್ಲಾಸು ತೆಗೆದು ಕೊಳ್ಳಲು ಕೈ ಮುಂದೆ ಚಾಚಿದೆ.

‘ ಊಹುಂ, ಗ್ಲಾಸು ತೆಗೆದುಕೊಳ್ಳುವದು ಬೇಡ. ’

‘ ಮತ್ತೆ ಹೇಗೆ ಕುಡಿಯುವದು ? ’

‘ ನಾನೇ ಕುಡಿಸುತ್ತೇನೆ. ’

‘ ನಾನೇನು ಮಗುವೆ ? ’

‘ ಈ ದಿನ ನೀವು ನನಗೆ ಮಗುವೇ, ಕುಡಿಯಿರಿ ’ ಎಂದು ನನಗೆ ಚಹ ಕುಡಿಸಹತ್ತಿದಳು.

‘ ಪೂರಾ ಕುಡಿಯಬೇಡಿ. ’

‘ ಯಾಕೆ ? ’

‘ ನನಗೂ ಇಷ್ಟಿರಲಿ ’

‘ ಇದೇ ಗ್ಲಾಸಿನದೆ ? ’

‘ ಹೌದು. ’

‘ ಬೇರೊಂದು ಗ್ಲಾಸು ತಕ್ಕೊಂಡು ಬಾ. ’

‘ ನೀವು ಮೊದಲು ಕುಡಿಯಿರಿ. ನಂತರ ನಾನು ಕುಡಿಯುತ್ತೇನೆ. ’

‘ ನನ್ನ ಎಂಜಲವನ್ನೆ ? ’.

‘ ಹೌದು. ’

‘ ನೀನೇ ಮೊದಲು ಕುಡಿ. ’

‘ ಅಯ್ಯೋ ! ನಾನು ಕುಡಿದ ಮೇಲೆ ನೀವು ಕುಡಿಯಬಾರದು. ’

‘ ಸರಿ, ನೀನು ಕುಡಿದರೆ ನನಗೆ ಆಗುತ್ತೆ. ’

‘ ಹಾಗೆ ಹೇಳಬಾರದು, ಪಾಪ ಬರುತ್ತೆ. ’

“ ನಾನು ಅರ್ಧ ಗ್ಲಾಸು ಕುಡಿದ ನಂತರ ನನ್ನಿಂದ ಅದನ್ನು ಕಸಿದು ಕೊಂಡು ಕುಡಿದು ಮುಗಿಸಿದಳು ; ಅವಳ ಹಸುಳೆತನದ ಚಿನ್ನಾಟ ನೋಡಿ ನನ್ನ ಹೃದಯ ತುಂಬಿ ಬಂತು.

“ ಅಂತಹ ಎಳೆಹರೆಯದ ಲಚ್ಚಿ ಮೇಲಿನ ಸಿಗರೇಟಿನ ಕಾರಣದಿಂದಾಗಿ

ದಿನದಿನವೂ ಕೊರಗತೊಡಗಿದ್ದಳು; ಈ ತೊಂದರೆಯನ್ನು ಹೇಗೆ ಪರಿಹರಿಸುವದೆಂದು ನನಗರ್ಥವಾಗಲಿಲ್ಲ.

“ ಅದೇ ದಿನವಲ್ಲೊಂದು ದಿನ ಗೌರಾನೇ ನನಗೆ ಊಟ ಬಡಿಸುವದಕ್ಕೆ ಬಂದಿದ್ದಳು. ನನಗೂ ಹೊಸ ಪರಿಯಾಯಿತು. ಸಿಸ್ತಾಗಿ ಊಟ ಮುಗಿಸಿ ಮಾಳಿಗೆಯ ಮೇಲೆ ಬಂದು ಕುಳಿತಿದ್ದೆ. ಅಡಿಯ ಕೋಣೆಯಲ್ಲಿ ಲಚ್ಚಿಯ ಕ ಜೇಕು. ಗೌರಾ ಮೇಲೆ ಬಂದಳು. ‘ ಗೌರಾ ಸ್ವಲ್ಪ ಕಡ್ಡಿಪೆಟ್ಟಿಗೆ ತಾ ’ ಎಂದೆ.

‘ ಯಾಕೆ ? ಊರನ್ನು ಸುಡುವವಕ್ಕೋ ? ’

“ ಉಗ್ರವಾಗಿ ನುಡಿದಿದ್ದಳು ಗೌರಾ. ನಾನು ಅದೇ ತಾನೇ ಸಿಗರೇಟ ಪಾಕೇಟ ತಂದು ಒಡೆಯುವವರಲ್ಲಿದ್ದೆ; ಗೌರಾ ಅದನ್ನು ಕಸಿದು ಹಿಂಡಿ ಹಿಪ್ಪೆ ಮಾಡಿ ಹೊರಚೆಲ್ಲಿದಳು.

‘ ಅಣ್ಣಾ, ನೀನು ಈ ರೀತಿ ವರ್ತಿಸುವದು ಚೆನ್ನಾಗುವದಿಲ್ಲ. ’

ಕೈದಿಯಂತೆ ಅವಳನ್ನು ನೋಡತೊಡಗಿದೆ.

‘ ಅಕ್ಕನಿಗೂ ನಿನಗೂ ವಿರಸವೇಕುಂಟಾಯಿತು ? ’

‘ ವಿರಸವೇ ಆಗಲಿಲ್ಲವಲ್ಲ ? ’

‘ ಒಂದು ಮಾತು ಅಣ್ಣ, ನೀನು ಹೀಗೆಲ್ಲ ಮಾಡಿ ಅಕ್ಕ ಜೀವ ಕೊಡುವ ಪ್ರಸಂಗ ತರಬೇಡ. ’

“ ನನಗೆ ಆ ಮಾತು ಕೇಳುವಾಗ ಎದೆಯಲ್ಲಿ ಸಹಸ್ರ ಚೇಳು ಕಡಿದಂತಾಯಿತು; ಮತ್ತೆ ಗೌರಾ ಮುಂದುವರಿಸಿದಳು. ‘ ಅಣ್ಣಾ, ಅಕ್ಕ ನಿನಗೆ ಸಿಗರೇಟ ಸೇದುವದು ಬೇಡವೆಂದು ಹೇಳಿದುದು ಅವಳ ತಪ್ಪೆ? ಅಣ್ಣಾ, ನನ್ನಿಂದ ಮುಚ್ಚಿಡಲು ಪ್ರಯತ್ನಿಸಬೇಡ; ಅಕ್ಕ ನನಗೆಲ್ಲವನ್ನೂ ಹೇಳಿದ್ದಾಳೆ. ಪ್ರಣಯ ಗಂಡಿನ ಜೀವನದಲ್ಲಿ ಒಂದು ಘಟನೆಯಾದರೂ, ಹೆಣ್ಣಿಗೆ ಮಾತ್ರ ಅದು ಅವಳ ಜೀವನದ ಸಮಗ್ರ ಇತಿಹಾಸವೇ ಆಗಿರುತ್ತದೆ. ನಿನ್ನಂತೆ ತಿಳಿದವರು ಈ ರೀತಿ ಆಚರಿಸುವದೆ? ಅಕ್ಕ ಅಡಿ ಕೋಣೆಯಲ್ಲಿ ಮಲಗಿದ್ದಾಳೆ; ನಿನಗೇನು ಬೇಕೋ ಹಾಗೆ ಮಾಡು ’ ಎಂದು ನಿಲ್ಲದೆ ಕೆಳಗೆ ಇಳಿದು ಹೋಗಿಬಿಟ್ಟಳು.

“ ನಾನು ಲಚ್ಚಿಯನ್ನು ನೋಡಿದಾಗ ನನ್ನ ಮನಸ್ಸು ಕರಗಿಹೋಯಿತು. ಮುಂಜಾನೆ ತಲೆಗೆ ಮಿಂದವಳು ಕೂದಲು ಬಾಚಿ ಕಟ್ಟಿರಲಿಲ್ಲ; ಹಣೆಗೆ ತಿಲಕ

ಬಿಟ್ಟಿರಲಿಲ್ಲ; ಎಡವೂ ಕೈಯಿಂದ ಹಿಡಿದಿದ್ದೆ. ಘುಸುಳಿ ಕಾಲಿಗೆ ಬಿದ್ದು ಎರಡೂ ಕೈಗಳಿಂದ ನನ್ನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಬಲವಂತ ದಿಂದ ಅವಳನ್ನೆತ್ತಿ ಅಪ್ಪಿಕೊಂಡೆ. ಶ್ರೀನಾಥ, ನಾನು ಅಪ್ಪಿದ್ದು ಕಟ್ಟಿಗೆಯ ತುಂಡಾಗಿದ್ದರೆ, ಅದು ಹಿಂಡಿಹೋಗುತ್ತಿತ್ತು. ಇಬ್ಬರಿಗೂ ಉದ್ವೇಗ ಕಡಿಮೆ ಯಾದ ಮೇಲೆ ನಾನು ಲಕ್ಷ್ಮಿಯನ್ನು ನೋಡಿ ಹೇಳಿದೆ :

‘ ಲಕ್ಷ್ಮಿ, ತಿಲಕವಿಟ್ಟುಕೊಳ್ಳುವದಿಲ್ಲವೆ ? ’

ನನ್ನನ್ನೇ ನೋಡುತ್ತ ನಿಂತಿದ್ದಳು.

‘ ತೆಗೆದುಕೊಂಡು ಬಾ. ’

“ ತಂದಳು. ನಾನೇನೇ ತಿಲಕವನ್ನಿಟ್ಟೆ. ‘ ಲಕ್ಷ್ಮಿ, ಇನ್ನೆಂದೂ ನಿನ್ನ ಮನಸ್ಸನ್ನು ನೋಯಿಸುವದಿಲ್ಲ; ಸಿಗರೇಟನ್ನು ಸೇದುವದಿಲ್ಲ ’ ಎಂದೆ. ಕೃತ ಜ್ಞತೆಯೊಡನೆ ಅವಳ ಕೈಗಳು ನನ್ನ ಕೊರಳನ್ನು ಸುತ್ತಿದವು. ಬತ್ತಿದ ತುಟಿಗೆ ಮುತ್ತುಗಳ ವರ್ಷಧಾರೆಯನ್ನೆರೆದೆ.

“ ಶ್ರೀನಾಥ, ಪ್ರಣಯ ಪರಿಚಯದಲ್ಲಿ ಮುಗಿಯಬೇಕೊ ? ಪರಿಚಯ ಪ್ರಣಯದಲ್ಲಿ ಮುಗಿಯಬೇಕೊ ? ಇದರರ್ಥ ನಿನಗಾಗುವದೆ ? ಇನ್ನೊಂದು ಮಹತ್ವವಾದ ಮಾತು : ‘ ಪ್ರಣಯದ ಪರಿಣತಾವಸ್ಥೆಯೇ ಮದುವೆ ’ ಯೆಂದು ಕೆಲವರು, ‘ Love marriage is a dangerous ( ಪ್ರೀತಿಸಿ ಮದುವೆ ಯಾಗುವದು ಘಾತಕವು ) ’ ಎಂದು ಕೆಲವರು ಹೇಳುತ್ತಾರೆ. ನಾನೊಬ್ಬನನ್ನು ಪ್ರೀತಿಸಿ ಕಳಂಕ ಬಂದರೂ ಅಪವಾದ ಬರುವಂತಾದರೂ ಲೆಕ್ಕಿಸದೆ ಪ್ರೇಮವೆನ್ನುವ ಎರಡಕ್ಷರಕ್ಕೆ ಬೆಲೆ ಕೊಡುವವಳಾಗಿ, ನಾನು ಪ್ರೀತಿಸಿದ ಹೆಣ್ಣಿನ ಕೈ ಹಿಡಿಯಲು ಹೋಗುವದು, ಸಾವಿನ ಕೊಂಡಿಯಲ್ಲಿ ಸಿಕ್ಕಿ ಬಿದ್ದಿರುವಾಗ, ಸಾವು ಈಗಲೋ ಇನ್ನೊಂದು ನಿಮಿಷವೋ ಎನ್ನುತ್ತಿರುವಾಗ, ಕೊಂಡಿಯ ಮೇಲ್ಭಾಗದಲ್ಲಿ ಜೇನಿನ ಹುಟ್ಟಿದೆಯೆಂದು, ಆ ತುಪ್ಪ ಸೋರುತ್ತಿದೆಯೆಂದು ನಾಲಿಗೆ ಅದರ ಸವಿಯ ನ್ನಾದರೂ ಉಂಡುಕೊಳ್ಳಲಿ ಎಂದು ಮುಂದೆ ಮಾಡಿದಂತಾಗದೇ ? ಇದೊಳ್ಳೆ ಗಹನವಾದ ವಿಚಾರ. ಪಂಡಿತರೂ ಕೂಡ ವಿಮರ್ಶೆ ಮಾಡತಕ್ಕ ವಿಷಯವು. ಮೊನ್ನೆ ಗೌರಾಗೆ ಮಾತು ಕೊಟ್ಟಾಯಿತಲ್ಲವೆ ? ಮಾತು ಕೊಟ್ಟು ತಪ್ಪುತ್ತೀ ನೆಂದಲ್ಲ; ಮಾತು ಕೊಟ್ಟು ಮಹಾಪರಾಧ ಮಾಡಿದಂತಾಗುವದೇ ಎಂದು ಯೋಚಿಸುತ್ತಿದ್ದೇನೆ.

" ಇಲ್ಲದ ವಿಷಯವನ್ನು ತುಂಬುತ್ತ ಹೋದರೆ ನಿನ್ನ ತಲೆ ಕೆಟ್ಟು ಹೋದೀತು. ಅದಲ್ಲದೆ ಮೂಲ ವಿಷಯಕ್ಕೂ ಭಂಗ ಬಂದೀತು. ಅಂದು ಆ ರೀತಿಯಲ್ಲಿ ನನ್ನ ಹಾಗೂ ಲಚ್ಚಿಯ ವಿರಸ ಮುಗಿದು ಮತ್ತೆ ಮೊದಲಿನಂತಾದೆವು. ಒಂದು ದಿನ ನಾನು ಲಚ್ಚಿ ಕುಳಿತಿರುವಾಗ ಗೌರಾ ಬಂದು ನನ್ನ ತೊಡೆಯ ಮೇಲೆ ಕುಳಿತಳು; ನನಗೆ ತ್ರಾಸಾದುದರಿಂದ ಅವಳಿಗೆ ಏಳುವಂತೆ ಒತ್ತಾಯಪಡಿಸಿದೆ. ಗೌರಾಳ ಪ್ರತ್ಯುತ್ತರ ಎಷ್ಟು ಮಾರ್ಮಿಕವಾಗಿತ್ತು ಗೊತ್ತೆ ? ' ಅಕ್ಕ ಎಷ್ಟು ಹೊತ್ತು ಕುಳಿತರೂ ನೋಯುವದಿಲ್ಲವೆ ? ' ಲಚ್ಚಿ ನಕ್ಕುಬಿಟ್ಟಳು.

' ಗೌರಾ, ಈಗ ನೀನು ಬಲು ಕೆಟ್ಟು ಹೋಗಿರುವಿ ! '

' ಅಕ್ಕನನ್ನು ಕೇಳು ಯಾರೂಂತ ? '

ಲಚ್ಚಿಯನ್ನು ಕೇಳಿದೆ; ಅವಳೇನೂ ಉತ್ತರಿಸಲಿಲ್ಲ. ಮತ್ತೂ ಗೌರಾನೇ ಮುಂದುವರಿಸಿದಳು.

' ಅವಳೇನು ಹೇಳುತ್ತಾಳೆ; ನಾನೇ ಹೇಳುತ್ತೇನೆ ಕೇಳು: ತೀರಾ ಕೆಟ್ಟವನು ನೀನೇ. ಯಾಕೆ ಗೊತ್ತೆ ? '

' ಯಾಕೆ ? '

' ಅಕ್ಕನಿಗೆ ನೀನು ತುಂಬಾ ತೊಂದರೆ ಕೊಡುವಿಯಂತೆ. '

" ಲಚ್ಚಿ ಇದನ್ನು ಕೇಳಿ ನಕ್ಕುಬಿಟ್ಟಳು; ಗೌರಾಗೆ ಅವಳೊಂದು ಪೆಟ್ಟು ಕೊಟ್ಟಳು. ' ನೋಡಿದಿಯಾ ಅಣ್ಣಾ, ನಾನು ನಿನಗೆ ಉಪಕಾರ ಮಾಡಿದರೆ ತಿರುಗಿ ಪೆಟ್ಟು ನನಗೆ; ಉಪಕಾರವಿಲ್ಲದ ಜನ ನೀವು ' ಎಂದಳು.

' ನೀವು ಅಂದರೆ ಯಾರು ? '

' ನೀನು ಮತ್ತು ಅಕ್ಕ. '

ನಾನವಳ ಕೆನ್ನೆ ಹಿಂಡಿದೆ; ಆ ತಪ್ಪಿಗಾಗಿ ಅವಳು ನನ್ನಿಂದ ಐದು ರೂಪಾಯಿ ಕಿತ್ತುಕೊಂಡಿದ್ದಳು.

" ಈಗ ಲಚ್ಚಿ ನಿರ್ಭಯವಾಗಿ ನನ್ನ ಕೋಣೆಗೆ ಬಂದು ಹೋಗುತ್ತಿದ್ದಳು. ಬಂದಾಗೊಮ್ಮೊಮ್ಮೆ ನನ್ನ ಪ್ಯಾಂಟ ಹಾಕಿಕೊಂಡು ನನ್ನೆದುರಿನ ಖುರ್ಚಿಯಲ್ಲಿಯೇ ಕುಳಿತುಕೊಳ್ಳುತ್ತಿದ್ದಳು; ಏನು ಮಾತು, ಏನು ವಿಚಾರ ಮಾತು ಬಿಟ್ಟರೆ ಗಂಭೀರಿಯಾಗಿಬಿಡುತ್ತಿದ್ದಳು.

“ ಗೌರಾ-ಲಚ್ಚಿ ಸಿನೇಮಾಕ್ಕೆಂದು ಹೊರಟರೆ, ಲಚ್ಚಿ ನನ್ನ ರೂಮಿಗೆ ಬರುತ್ತಿದ್ದಳು. ಗೌರಾಳೊಬ್ಬಳೇ ಸಿನೇಮಾಕ್ಕೆ ಹೋಗುತ್ತಿದ್ದಳು. ಲಚ್ಚಿ ನನ್ನಂತೆಯೇ ಪ್ಯಾಂಟು-ಶರ್ಟು ತೊಟ್ಟು ನನ್ನ ಜೊತೆ ಸಮುದ್ರದಂಚಿಗೆ ತಿರು ಗಾಡಲು ಬರುತ್ತಿದ್ದಳು. ಅಲ್ಲಿ ಮಣ್ಣಿನೊಡನೆ ಮಕ್ಕಳಾಟವಾಡಿ, ಸಿನೇಮಾ ಬಿಡುವ ವೇಳೆಗೆ, ಸಿನೇಮಾ ಥಿಯೇಟರಿಗೆ ಹೋಗುತ್ತಿದ್ದೆವು.

“ ಒಮ್ಮೆ ಲಚ್ಚಿಯ ತಂದೆಯವರು ಊರಲ್ಲಿರಲಿಲ್ಲ; ನನ್ನನ್ನು ಕರೆತರಲು ಲಚ್ಚಿ ಗೌರಾನನ್ನು ಕಳುಹಿಸಿದ್ದಳು. ನಾನು ಹೋದಾಗ ಲಚ್ಚಿಯೆಂದಳು :

‘ ತಂದೆಯವರು ಊರಲ್ಲಿಲ್ಲ. ’

‘ ಸಂತೋಷವೆ ? ’ ಎಂದು ಕೇಳಿದೆ ನಾನು.

‘ ಅದಕ್ಕಲ್ಲ ; ಇಂದು ರಾತ್ರಿ ತಿರುಗಾಡಲು ಹೋಗೋಣವೆ ? ’

‘ ಹೀಗೋ. ನಾನೇ ಎಷ್ಟೋ ಬಾರಿ ಕೇಳಿದಾಗ ನೀನು ಒಪ್ಪಿರಲಿಲ್ಲ. ಇವತ್ತು ನೀನೇ ಕರೆದಿರುವಿ. ಬಹುಶಃ ನಾನೇ ಸೀರೆಯುಟ್ಟುಕೊಂಡು ಹೋಗುವ ಪ್ರಸಂಗ ಬರುತ್ತದೋ ಏನೋ ಎಂತ.’

‘ ನಿಮಗೆ ಸೀರೆಯುಡಲು ಬರದಿದ್ದರೆ ನಾನೇ ಉಡಿಸುತ್ತೇನೆ. ’

‘ ನಂತರ ವಾಕಿಂಗ ( Walking ) ಗೆ ಹೋಗುವದು ತಾನೆ ? ’

‘ ಹುಂ. ’

‘ ಅದೂ ಇಂತಹ ರಾತ್ರಿಯಲ್ಲೇ ? ’

‘ ಇವತ್ತು ನಾನು ಕರೆದುಕೊಂಡು ಹೋಗುವವಳಾದ್ದರಿಂದ ನಿಮಗೆ ಅಂಜಿಕೆಯಾಗಬಹುದು ; ಹೆದರಬೇಡಿರಿ ನಾನಿದ್ದೇನೆ. ’

‘ ನಾವಿಬ್ಬರೂ ಹೆಣ್ಣುಮಕ್ಕಳೆಂದು ಯಾರಾದರೂ ನಮ್ಮನ್ನು ಓಡಿಸಿ ಕೊಂಡು ಬಂದರೆ ? ’

ಅದು ಲಚ್ಚಿಗೆ ನಿಜವೆಂದು ಕಂಡಿರಬೇಕು ; ಅವಳು ಹಲ್ಲು ಕಿರಿದು ನಕ್ಕು ಬಿಟ್ಟಳು.

‘ ಹೆಂಗಸರ ಉಪಾಯಕ್ಕೆ ಬೆಲೆ ಬರುವದಿಲ್ಲ ’ ಎಂದು ನಾನೆಂದೆ.

“ ನಾವು ಆ ದಿನ ಗೌರಾಳಿಗೆ ನಿದ್ದೆ ಬಂದಿದೆಯೆಂದು ತಿಳಿದು ಹೊರಗೆ ಹೋಗಿದ್ದೆವು. ನಾವು ತಿರುಗಿ ಬಂದಾಗ ಮೂರುಗಂಟೆ ರಾತ್ರಿಯಾದುದರಿಂದ ನನ್ನ ರೂಮಿಗೆ ಹೋಗದೆ ಲಚ್ಚಿಯ ಹಾಸಿಗೆಯಲ್ಲಿಯೇ ನಾನೂ ಅವಳೂ

ಮಾತಾಗಿದ್ದೆವು. ಅದನ್ನರಿತ ಗೌರಾ ಮುಂಜಾನೆ ನನ್ನೊಡನೆ, 'ಅಣ್ಣಾ, ಅಕ್ಕ ರಾತ್ರಿಯಿಡೀ ಇರಲಿಲ್ಲ. ಯಾರದೋ ಜೊತೆ ದೊರಗೆ ಹೋಗಿದ್ದಳೆಂದು ಕಾಣುತ್ತದೆ' ಎಂದಳು. ಆಗ ನಾನೂ ಲಕ್ಷ್ಮಿ ಒಬ್ಬರೊಬ್ಬರ ಮೋರೆ ನೋಡಿಕೊಂಡು ಮುಸಿ-ಮುಸಿ ನಕ್ಕಿದ್ದೆವು.

"ಆ ಮೂರು ರಾತ್ರಿಗಳಲ್ಲಿ ನಾವು ಕಂಡ ಕನಸು, ನಾವು ಪಟ್ಟ ಸುಖ, ನಾವು ಆಡಿದ ಮಾತುಗಳನ್ನು ನೆನೆಯುವಾಗ್ಗೆ ಕಣ್ಣಿನಲ್ಲಿ ನೀರು ಬರುತ್ತದೆ. ಶ್ರೀನಾಥ, ಆ ಮೂರು ದಿನಗಳಲ್ಲಿಯೇ ನನ್ನ ಜೀವನದ ಸ್ವರ್ಣಮಹೋತ್ಸವ ವಾಯಿತೆನ್ನಬಹುದು. ಶ್ರೀನಾಥ, ಅಂತಹ ಸುಖ ರಾತ್ರಿಗಳನ್ನು ಬಹುಶಃ ಯಾವ ಹೆಣ್ಣು-ಗಂಡುಗಳೂ ಕಂಡಿರಲಿಕ್ಕಿಲ್ಲವೆಂದು ಕಾಣುತ್ತದೆ. ಅದಕ್ಕಾಗಿಯೇ ಏನೋ ಇಂತಹ ದುರಂತ ದುಃಖದ ದಿನಗಳನ್ನು ನೋಡಬೇಕಾದುದು? ಸುಖವೂ-ದುಃಖವೂ ಜೀವನದಲ್ಲಿ ಸಮಸಮವಾಗಿ ಬರುವವಂತೆ. ಅದೇ ಕಾರಣದಿಂದಲೇ ಅಂತಹ ದಾರುಣ ದುಃಖವು ನಮ್ಮನ್ನು ಗೋಳುಗುಡಿಸುತ್ತಿರಬೇಕು.

"ಸುಮಾರು ಇಂದಿಗೆ ಏಳು ವರ್ಷದ ಹಿಂದೆ. ನನಗಾಗ ಇಪ್ಪತ್ತೈದು ವರ್ಷ. ಅದೇ ವರ್ಷವೇ ನನ್ನ ಹಾಗೂ ಲಕ್ಷ್ಮಿಯ ಮದುವೆಯಾಗುವದೆಂದು ನಿಶ್ಚಯವಾಗಿತ್ತು. ಅದೇ ವೇಳೆಯಲ್ಲಿಯೇ ನನಗೆ ಟೆಲಿಗ್ರಾಮುದಿಂದ ಜಬ್ಬಲಪುರಕ್ಕೆ ವರ್ಗ ಮಾಡಿದ್ದರು. ನಾವಿಬ್ಬರೂ ಕಟ್ಟಿದ ಬಾಳನೌಕೆ ಬಿರುಗಾಳಿಯ ಹೊಡೆತಕ್ಕೆ ಸಿಕ್ಕು ದೂರಾಗಿ ಹೋಯಿತು. ಅದೇ ವೇಳೆಯಲ್ಲಿ ಅವಳ ತಂದೆಯವರೂ ಇದ್ದಿರಲಿಲ್ಲ. ಹೊರಡುವ ದಿನ ರಾತ್ರಿ ನನಗೆ ನಿದ್ದೆಯಿರಲಿಲ್ಲ. ಲಕ್ಷ್ಮಿಯನ್ನು ಎಷ್ಟು ಸಮಾಧಾನ ಪಡಿಸಿದರೂ ಅವಳ ಕಣ್ಣೀರಿನ ಕೋಡಿ ತಡೆದು ನಿಲ್ಲಿಸುವದಾಗಲಿಲ್ಲ. ನನ್ನ ಎದೆಯ ಮೇಲೆ ತಲೆಯಿಟ್ಟುಕೊಂಡು ಅಳುತ್ತಿದ್ದಳು. ನಾವಿಬ್ಬರೂ ಲಗ್ನವಾಗಿಯೇ ಹೊರಡೋಣ ಎಂದವಳ ಅಭಿಪ್ರಾಯ. ಇನ್ನು ಜಬ್ಬಲಪುರಕ್ಕೆ ಹೋಗಲುಳಿದುದು ಮೂರೇ ದಿನ. ಅದರಲ್ಲಿಯೂ ಅವರ ತಂದೆಯವರಿರಲಿಲ್ಲ. ಒಂದೊಮ್ಮೆ 'ರಜಿಸ್ಟರ ಲಗ್ನ' ಆಗುವಂತಿದ್ದರೆ ಅವಳ ತಂದೆ ಇದ್ದೂ ಸತ್ತಂತೆಯೆ. ಅವಳಿಗೆ ಹಲವು ರೀತಿಯ ಸಮಾಧಾನ ಹೇಳಿ ಮರುದಿನ ಮುಂಜಾನೆ ಹೊರಟು ನಿಂತಾಗ, ಮತ್ತವಳ ತುಟಿ ಅದರತೊಡಗಿತು.

'ಲಕ್ಷ್ಮೀ, ನಾವೆಲ್ಲಿ ಹೋಗುತ್ತಿರುವೆನೆಂದು ಗೊತ್ತಿದೆಯಲ್ಲವೆ? ನಿನ್ನ ಅಳು

ನೋಡಿ ನೋಡಿಕೊಂಡು ನಾನು ಹೋಗುವದಾದರೂ ಹೇಗೆ? ಶಾಂತಳಾಗು. ಒಮ್ಮೆ ನಗು, ನೀನು ನಗುತ್ತಿದ್ದರಷ್ಟೇ ನಾನಿಲ್ಲಿಂದ ಹೊರಡುವದು.' ಅವಳೆಷ್ಟು ಪ್ರಯತ್ನಿಸಿದರೂ ಅವಳಿಗೆ ನಗುವದಾಗಲಿಲ್ಲ. ಮ್ಲಾನತೆ ಮುಸುಕಿತ್ತು, ಕಣ್ಣುಗಳಲ್ಲಿ ವೈಶ್ಯತೆಯಿತ್ತು. ಹೊರಟು ನಿಂತಾಗ ಕಲ್ಲೆದೆಯ ಗೌಡಾಳ ಕಣ್ಣಿನಲ್ಲಿಯೂ ನೀರು ಬಂತು. ಅವಳ ಕೆನ್ನೆ ಸವರಿ, ಹಣೆಯ ಮೇಲೆ ಮುತ್ತು ಇಟ್ಟು ಹೊರಟು ಬಿಟ್ಟೆ. ದಾರಿಯುದ್ದಕ್ಕೂ ಅವಳ ಅಳುಮೋರೆಯನ್ನು ನೋಡಿಕೊಂಡೇ ಜಬ್ಬಲಪುರ ತಲುಪಿದೆ.

"ಶ್ರೀನಾಥ, ಅಂದಿನಿಂದಲೇ ದೈವವೂ ನನ್ನ ಮೇಲೆ ದ್ರೋಹ ಬಗೆಯಿತು. ನಾನಿನ್ನೂ ಹೋಗಿ ಒಂದು ವರ್ಷವೂ ಪೂರ್ಣವಾಗಿರಲಿಲ್ಲ. ಲಕ್ಷ್ಮಣರಾಯರಿಗೆ ಅತ್ಯಂತ ಶೀಕು; ಕೂಡಲೆ ಹೊರಟು ಬಾ ಎಂದು ಅವರ ಮಗನಿಂದ ಟೆಲಿಗ್ರಾಂ ಬಂತು. ನನ್ನ ಎದೆಯೊಡೆಯಿತು; ನಮ್ಮ ಆಫೀಸರರ ಹತ್ತಿರ ಹೇಳಿದಾಗ ಜರೂರ ಕೆಲಸವಿದ್ದುದರಿಂದ ರಜೆ ಕೊಡಲಾಗುವದಿಲ್ಲವೆಂದು ಬಿಟ್ಟರು. ನನಗೆ ದಿಕ್ಕೇ ತೋಚಲಿಲ್ಲ; ಕೆಲಸಕ್ಕೆ ರಾಜೀನಾಮೆ ಬರೆದುಕೊಟ್ಟೆ. ಅವರು ಮಿಸುಕದೆ ಅದನ್ನು ತಕ್ಕೊಂಡು ನನಗೆ ಸಾಯಂಕಾಲ ಸಿಗುವಂತೆ ಹೇಳಿದರು. ನಾನು ಸಂಜೆ ಅವರಲ್ಲಿಗೆ ಹೋದಾಗ, ಮುಗುಳುನಗೆಯಿಂದಲೇ ಸ್ವಾಗತಿಸಿ ಕೂಡುವಂತೆ ಹೇಳಿದರು.

'ತಮ್ಮ ಹೆಸರು ರವಿವರ್ಮ ಎಂದಲ್ಲವೆ?'

"ನಾನು ಹೌದೆನ್ನುವಂತೆ ತಲೆದೂಗಿದೆ.

'ತಾವು ಯಾವ ಕಾರಣಕ್ಕಾಗಿ ರಾಜೀನಾಮೆ ಕೊಡುತ್ತೀರಿ.'

'ತಾವು ರಜೆ ಕೊಡಲೊಪ್ಪದ್ದರಿಂದ.'

'ರಜೆಯನ್ನು ನಾನೇ ಮಂಜೂರು ಮಾಡಲು ಬರುವದಿಲ್ಲ. ಇಂತಹ ಅವಶ್ಯದ ವೇಳೆಯಲ್ಲಿ, ನಾನು ನಿಮಗೆ ರಜೆ ಮಂಜೂರಿ ಮಾಡಿದರೆ ನನ್ನ ನೌಕರಿಗೆ ನಾನಾಗಿಯೇ ಕಲ್ಲು ಹಾಕಿಕೊಂಡಂತೆ' ಎಂದರು.

'ಹಾಗೇಕೆ?'

'ನನ್ನನ್ನು ಅಯೋಗ್ಯ ಎಂತ ಕಿತ್ತು ಹಾಕಬಹುದು.'

ನಾನು ಸುಮ್ಮನಾದೆ. ಅವರೇ ಮುಂದುವರಿಸಿದರು.

'ಮನೆಯಲ್ಲಿ ತಾಯಿ-ತಂದೆ ಯಾರಾದರೂ ಇದ್ದಾರೆಯೆ?'

‘ ಯಾರೂ ಇಲ್ಲ. ’

‘ ಒಡಹುಟ್ಟಿದವರು ? ’

‘ ಅವರೂ ಇಲ್ಲ. ’

‘ ಮತ್ತೆ ಟೆಲಿಗ್ರಾಂ ಯಾರಿಂದ ಬಂತು ? ’

‘ ನನಗೆ ಕಾಲೇಜ ಶಿಕ್ಷಣ ಕಲಿಯಲು ಅನುವು ಮಾಡಿದವರು. ’

‘ ನೋಡಿ, ಬೇರೇನೂ ಆಧಾರವಿಲ್ಲದ ನೀವು ಇದ್ದ ನೌಕರಿಗೆ ರಾಜೀನಾಮೆ ಕೊಟ್ಟು ಮನೆಯಲ್ಲಿ ಕುಳಿತುಕೊಳ್ಳುವ ಪ್ರಯತ್ನ ಮಾಡಿದ್ದೀರಾ. ಒಂದು ವೇಳೆ ಆದು ಸಾಯುವ ಜೀವನೇ ಆಗಿದ್ದರೆ, ನೀವು ಹೋಗುವತನಕ ಯಾವರೂ ಅವರು ಬದುಕುಳಿಯುತ್ತಾರೆಂದು ಹೇಗೆ ತಾನೆ ತಿಳಿಯುವದು ? ಅಥವಾ ನೀವು ರಾಜೀನಾಮೆ ಕೊಟ್ಟರೆ, ಅವರ ಸಾಯುವ ಜೀವ ನಿಲ್ಲದು. ವಿಚಾರ ಮಾಡಿ ನೋಡಿ, ನಾನು ಹೇಳುವ ಮಾತನ್ನು ಕೇಳಿ, ರಾಜೀನಾಮೆಯನ್ನು ಹಿಂತೆಗೆದುಕೊಳ್ಳಿ. ಹಾಗೆಯೇ ಕಿಸೆಯಲ್ಲಿ ತುರುಕಿಕೊಳ್ಳಬೇಡಿ. ನನ್ನೆದುರಿನಲ್ಲಿಯೇ ಸುಟ್ಟುಬಿಡಿ. ’ ನಾನು ಮರುಮಾತಾಡದೆ ಅವರು ಹೊತ್ತಿಸಿದ ಬೆಂಕಿಯಿಂದ ರಾಜೀನಾಮೆ ಪತ್ರವನ್ನು ಸುಟ್ಟುಬಿಟ್ಟೆ. ಮರುದಿನ ಮುಂಜಾನೆ ಇನ್ನೊಂದು ಟೆಲಿಗ್ರಾಂ. ‘ ಲಕ್ಷ್ಮಣರಾಯರು ಸ್ವರ್ಗಸ್ಥರಾದರು ’ ಎನ್ನುವದು, ನನಗಾಗಿ ಕಾದಿತ್ತು. ಸಾಧ್ಯವಿಲ್ಲದಿದ್ದರೆ ಬರುವ ಆವಶ್ಯಕತೆಯಿಲ್ಲ. ಕೆಳಗಡೆ ಗೌರಾ, ಎನ್ನುವ ಎರಡಕ್ಷರವಿತ್ತು. ಮತ್ತೆ ನಾಲ್ಕೈದು ದಿನಗಳಲ್ಲಿ ಲಚ್ಚಿಯಿಂದ ಸುದೀರ್ಘವಾದ ಪತ್ರ ಬಂತು. ಎಲ್ಲ ಹೊಣೆ ನನ್ನ ಮೇಲಿಟ್ಟು ಪತ್ರ ಬರೆದಿದ್ದಳು. ತಂದೆಯವರೂ ಕೊನೆಯಲ್ಲಿ ನನ್ನನ್ನೇ ನೆನೆಸುತ್ತಿದ್ದರೆಂದೂ ಸಾಯುವಾಗಲೂ ನನ್ನನ್ನೇ ಕೇಳಿದರೆಂದೂ, ಇದೇ ಬೇಸಿಗೆಯಲ್ಲಿಯೇ ಅವರ ಹೆಸರಿನಲ್ಲಿಟ್ಟ ಬ್ಯಾಂಕಿನ ಹಣದಿಂದ ರವಿಯ ಜೊತೆ ನನ್ನ ಮದುವೆಯನ್ನು ಮಾಡುವಂತೆ ಅಣ್ಣನಿಗೂ ಹೇಳಿರುವರೆಂದೂ ಬರೆದಿದ್ದಳು. ಅದೇ ಅರ್ಥ ಸೂಚಿಸುವ ಪತ್ರವನ್ನು ರಾಮುವೂ ನನಗೆ ಬರೆದಿದ್ದನು. ‘ ಲಚ್ಚಿಯ ಮದುವೆಯಂತಹ ಭಾರವನ್ನು ತಂದೆಯವರು ನನ್ನ ಮೇಲಿಟ್ಟು ಹೋಗಿದ್ದಾರೆ. ಆ ಕೆಲಸದಲ್ಲಿ ನೀನೂ ಸಹಕರಿಸುವಿಯಾಗಿ ಇಚ್ಛಿಸುವೆ. ’ ನಾನೂ ನನ್ನ ಹೃದಯದಲ್ಲಿಯ ದುಃಖವನ್ನು ಉಲ್ಲೇಖಿಸಿ ಹೇಗೋ ನಾಲ್ಕು ಮಾತುಗಳನ್ನು ಪತ್ರದಲ್ಲಿ ಮೂಡಿಸಿ, ಲಚ್ಚಿ-ರಾಮೂ ಇವರಿಗೆ ಪತ್ರ ಬರೆದು ಹಾಕಿದೆ.

" ಮೇ ತಿಂಗಳಲ್ಲಿ ಹದಿನೈದು ದಿವಸದ ರಜೆಯ ಮೇಲೆ ನಾನು ಬಂದಾಗ ರಾಮೂ ತಮ್ಮ ಮನೆಯನ್ನು ಕಾರವಾರದಿಂದ ರತ್ನಾಗಿರಿಗೆ ಬದಲಾಯಿಸುವ ವಿಚಾರ ಹೇಳಿದ. ಲಚ್ಚಿ ಮದುವೆಯ ವಿಚಾರವನ್ನು ಎತ್ತಿದಳು.

' ಏನು ಲಚ್ಚಿ, ಮದುವೆ ಅಷ್ಟು ನಿನ್ನ ತಲೆ ತಿನ್ನುತ್ತಿದೆಯೆ ? '

' ಹೌದು, ಇದೇ ವರುಷ ನಮ್ಮ ಮದುವೆಯಾಗಲೇ ಬೇಕು. '

' ಮುಂದಿನ ವರ್ಷ ಆದರಾಗದೆ ? '

' ಇನ್ನೊಂದು ವರ್ಷ ಕಳೆಯಬೇಕಲ್ಲ. '

' ಇಷ್ಟು ವರ್ಷ ಕಳೆದವಳಿಗೆ ಇನ್ನೊಂದು ವರ್ಷ ಕಳೆಯುವದು ಅಸಾಧ್ಯ ವಾದೀತೆ ? '

' ನಿಮ್ಮನ್ನಗಲಿ ಇಡೀ ವರ್ಷವನ್ನು ಕಳೆಯುವದು ಸಾಧ್ಯವಿಲ್ಲ. '

ಲಚ್ಚಿಯ ಮೋರೆಯೆತ್ತಿ ಕೇಳಿದೆ :

' ಇದು ನಿಜವೇ ಲಚ್ಚಿ ? '

' ಹೌದು. '

' ಕಲ್ಲಿನಂತಹ ಮನಸ್ಸುಳ್ಳ ನೀನೂ ಈ ರೀತಿಯಾದೆಯಾ ? '

' ತಂದೆಯವರು ಇರುವಾಗ್ಗೆ ದಿನಗಳೆಯಬಹುದಾಗಿತ್ತು. ಇನ್ನು ಈ ಮನೆಯಲ್ಲಿ ನಮ್ಮವರೆನ್ನುವವರು ಯಾರೂ ಇಲ್ಲ. ರಾಮಣ್ಣ ಒಳ್ಳೆಯವನೆ. ಆದರವನ ಹೆಂಡತಿ ಆವನನ್ನು ಒಳ್ಳೆಯವನಾಗಿಬಿಡಬೇಕಲ್ಲ. ಈಗಲೇ ಜಯಾ-ವಿಜಯಾ ತಮ್ಮ ಅಧಿಕಾರ ನಡೆಸಲು ಪ್ರಾರಂಭಿಸಿದ್ದಾರೆ. ಗೌರಾಳ ಬಾಯಿ ದೊಡ್ಡದಾದುದರಿಂದ ಅವಳಿಗೆ ಮಾತ್ರ ಹೆದರುತ್ತಾರೆ. ನಾನು ಮಾತ್ರ ಅವರೊಡನೇನೂ ಮಾತಾಡುವದಿಲ್ಲ.'

' ನಾನು ಈ ವಿಷಯದ ಬಗ್ಗೆ ರಾಮೂನಿಗೆ ಹೇಳುತ್ತೇನೆ. ವರುಷ ವೆನ್ನುವದು ಗೊತ್ತಾಗದೇ ಹೋಗುವದು. ಬೇರೆ ಬೇಸರ ಕಳೆಯಲು ಗೌರಾ ನಿನ್ನ ಜೊತೆ ಇದ್ದಾಳೆ. '

' ನನಗೆ ಒಂದು ವರುಷವೆನ್ನುವದು ನೂರು ವರ್ಷಕ್ಕಿಂತಲೂ ಹೆಚ್ಚಾಗಿ ಕಾಣುತ್ತದೆ. ನೀವು ನಿಮ್ಮ ಆಫೀಸಿನ ಕೆಲಸದಲ್ಲಿಯೋ, ಗೆಳೆಯರ ಜೊತೆಯ ಲ್ಲಿಯೋ, ಸಿನೆಮಾ ನೋಡುವದರಲ್ಲಿಯೋ ಹೇಗೋ ದಿನಗಳೆಯುತ್ತೀರಿ. ನನಗೆ ಹಾಗಲ್ಲ, ಹಗಲು ಹೇಗಾದರೂ ಮಾಡಿ ಕಳೆಯಬಹುದು. ರಾತ್ರಿ ಬಹಳ

ಘೋರವಾಗಿ ಪರಿಣಮಿಸುತ್ತದೆ. ಅದಾವ ಹಾಸಿಗೆಯ ಮೇಲೆ ಕುಳಿತು, ನಾನೂ-ನೀವೂ ಲಲ್ಲೆಯಾಡಿದ್ದೆವೋ, ಮಾತನಾಡಿದ್ದೆವೋ, ಮಲಗಿದ್ದೆವೋ ಅದೇ ಹಾಸಿಗೆಯ ಮೇಲೆ ಈಗ ಭೂತಸಂಚಾರವಾಗುತ್ತಿದೆ. ಹೀಗಾಗಿ ರಾತ್ರಿಯಿಡೀ ನನ್ನಿಂದ ಕಳೆಯಲು ಸಾಧ್ಯವಿಲ್ಲ. ಗೌರಾಳಿದ್ದರೆ ಅವಳೇನು ಮಾಡುತ್ತಾಳೆ? ಹಾಸಿಗೆಗೆ ತಲೆಕೊಟ್ಟ ಕೂಡಲೆ ಗೊರಕೆ ಹೊಡೆಯಲು ಪ್ರಾರಂಭಿಸುತ್ತಾಳೆ. ನೀವು ಹೇಳಿದಂತೆ ದಿನಗಳೆಯುವದು ನನ್ನಿಂದ ಆಗದು. ಇನ್ನು ಮುಂದೆ ನಿಮಗೆ ಹೇಗೆ ಬೇಕೋ ಹಾಗೆ ಮಾಡಿ.'

'ಏನದನ್ನು ನೀನೇ ಹೇಳುವಿರಲ್ಲ?'

'ನಾನು ಹೇಳಿದಂತೆ ಆಗಲು ಸಾಧ್ಯವೇ?'

'ಹಾಗಾದರೆ ನೀನೇ ರಾಮುವಿನೊಡನೆ ಹೇಳು.'

'ಹೆಣ್ಣು ತನ್ನನ್ನು ಮದುವೆ ಮಾಡು ಎಂದು ಎಲ್ಲಿಯಾದರೂ ಹೇಳಲು ಸಾಧ್ಯವಿದೆಯೆ? ಒಂದು ವೇಳೆ ನಾನೇ ಗಂಡಾಗಿದ್ದರೆ ಹೇಳುತ್ತಿದ್ದೆ.'

'ಹೇಗೂ ನಿನ್ನ ಹತ್ತಿರ ಸೋಲೋದೆ ಸ್ತ್ರೀ.'

'ಎಲ್ಲವನ್ನೂ ನನ್ನ ಮೇಲೆ ಹೊರಿಸಬೇಡಿ.'

"ಅಂತೂ ಹೇಗೋ ಹೇಳಿ, ಸಮಾಧಾನಪಡಿಸಿ, ರಜೆ ಮುಗಿಸಿ ನಂತರ ಮುಂದಿನ ವರುಷ ಬರುವೆನೆಂದು ಹೇಳಿ, ಹೊರಟು ಹೋಗಿದ್ದೆ. ನಾನು ಜಬ್ಬಲಪುರಕ್ಕೆ ಹೊರಟುಹೋದ ನಂತರ ಲಕ್ಷ್ಮಣರಾಯರ ಕುಟುಂಬ ರತ್ನಾಗಿರಿಗೆ ಹೋಯಿತು. ಅಲ್ಲಿಯೇ ಅವರ ಕುಟುಂಬದ ಆಸ್ತಿಯು ಇದೆಯಂತೆ. ಗೌರಾಳಿಂದಲೂ ಮತ್ತು ಲಚ್ಚಿಯಿಂದಲೂ ವಾರಕ್ಕೊಂದು ಪತ್ರ ಬರುತ್ತಿತ್ತು.

"ನಾನು ಜಬ್ಬಲಪುರಕ್ಕೆ ಸೇರಿ ಇನ್ನೂ ಐದು ತಿಂಗಳು ಮುಗಿಯುವದರೊಳಗಾಗಿಯೇ ನನಗೆ ರಾಣಿಗಂಜಕ್ಕೆ ವರ್ಗವಾಯಿತು. ಉಪಾಯವಿಲ್ಲದೇ ಕೆಲಸಕ್ಕೆ ಹಾಜರಾದೆ. ಅಲ್ಲಿಂದ ಮೇ ತಿಂಗಳಲ್ಲಿ ರಜಾ ಪಡೆದುಕೊಂಡು ಬರಬೇಕೆಂದು ನಿಶ್ಚಯ ಮಾಡಿದಾಗ ರಜಾ ದೊರೆಯುವದೇ ಇಲ್ಲೆಂದು ತಿಳಿಯಿತು. ಇನ್ನೊಂದು ಸಿಡಿಮದ್ದಿನ ಗುಂಡು ಹೊಕ್ಕು ಎದೆಯೊಡೆದಂತಾಯಿತು. ಅದನ್ನೆಲ್ಲ ಲಚ್ಚಿಗೆ ತಿಳಿಸಿ ವಿವರವಾಗಿ ಪತ್ರ ಬರೆದೆ. ಅವಳೆಷ್ಟು ಚಿತ್ತ ಎದೆ ಒಡೆದು ಕೊಂಡಿದ್ದಳೋ? ಅದಕ್ಕೆ ಬದಲಾಗಿ ಮಾರುತ್ತರ ಈ ರೀತಿ ಬಂತು :

‘ ಪ್ರಿಯ ರವಿ,

‘ ತಾವು ಹೋಗುವಾಗಲೇ ಮುಂಬರುವ ಮೇ ತಿಂಗಳಲ್ಲಿ ವಿಷ ತಿನ್ನು ಎಂದು ಎರಡೂ ಕೈಯಿಂದ ವಿಷ ಕೊಟ್ಟು ಹೋಗಿದ್ದರೆ ಎಷ್ಟು ಚೆನ್ನಾಗುತ್ತಿತ್ತು. ನಾನಿಲ್ಲಿ ಕಣ್ಣೀರಿನ ಕೂಳನ್ನು ತಿನ್ನುತ್ತಿದ್ದೇನೆ. ನಾನು ಹೀಗೆನ್ನುವಾಗ ತಮಗೆಷ್ಟು ನೋವಾಗುವದೊ? ನಾನು ನೀವು ಕಳೆದ ವರುಷ ಬಂದಾಗಲೇ ರವಿಸ್ವರ ಮದುವೆಯಾಗೋಣವೆಂದು ನಿಮಗೆಷ್ಟು ಬಾರಿ ಅಂದಿದ್ದೆ. ಮಗುವಿಗೆ ಬೆಲ್ಲ ಕೊಟ್ಟು ಮಳ್ಳು ಮಾಡುವ ಹಾಗೆ ನನಗೆ ಏನೆಲ್ಲ ಬೋಧೆ ತುಂಬಿ ಸುಮ್ಮನೆ ಮಾಡಿ ಹೋದಿರಿ. ಈ ವರುಷ ಬರುವದಕ್ಕಾಗುವದಿಲ್ಲ, ಮುಂದಿನ ವರುಷ ಅಗತ್ಯದ ಕೆಲಸ, ಅದಕ್ಕೂ ಮುಂದಿನ ವರುಷ ಇನ್ನೊಂದು ನಿರ್ಬಂಧವಿರ ಆಗುವದು. ಅದಕ್ಕೂ ಮುಂದಿನ ವರುಷ ನಾವಿಬ್ಬರೂ ಮುದುಕರಾಗುತ್ತೇವೆ. ಇದೇ ಕತೆಯಲ್ಲಿಯೇ ಬಾಳೆಲ್ಲ ಮುಗಿಯಬೇಕೇನೋ? ನಾವೇನಾದರೂ ಒಟ್ಟುಗೂಡಬಹುದು. ಆದರೆ ಕಳೆದ ವರುಷಗಳು ಹಿಂದಿರುಗಿ ಬರುತ್ತವೆಯೇ? ‘ ಇವಳು ದೇಹಸುಖಕ್ಕೆ ಲಾಲಸೆ ಪಡುವ ಹೆಣ್ಣು ’ ಎಂದು ನೀವು ಹೀಯಾಳಿಸಬಹುದು. ಅದರಲ್ಲೇ ಮಿಂದುಂಡ ನನಗಾವ ಏನೂ ಇಲ್ಲವಂತೆಯೇ. ನನಗೆ ನಿಮ್ಮ ಸಾನ್ನಿಧ್ಯ ಬೇಕು; ನಿಮ್ಮೊಡನೆ ಮಾತಾಡುವದು ಬೇಕು; ದಿನವೂ ನಿಮ್ಮ ಮೋರೆ ನೋಡುವ ಭಾಗ್ಯ ಬೇಕು; ಈ ಹಗಲುಗನಸುಗಳ ಕಂತೆ ಬೇಡ. ದೇಹಸುಖಕ್ಕಾಗಿ ನಾನು ಲಾಲಸೆಪಡುವದಿಲ್ಲ. ದಿನವೂ ನಿಮ್ಮ ನಗುಮುಖವನ್ನು ಕಂಡೆನೆಂದರೆ ಅದೇ ನನಗೆ ಸ್ವರ್ಗಸುಖ; ನಿಮಗೇನೂ ತೊಂದರೆ ಕೊಡುವದಿಲ್ಲ. ನಿಮ್ಮ ಬಟ್ಟೆ-ಬರೆ, ಊಟ-ಉಪಹಾರಗಳನ್ನು ನಾನು ನೋಡಿ ಕೊಳ್ಳುತ್ತೇನೆ. ಅಷ್ಟಕ್ಕೂ ನನಗೆ ಎರಡು ಹೊತ್ತು ಕೂಳು, ಮರ್ಯಾದೆಯಿಂದ ಸಾಧಾರಣ ಸೀರೆ ಸಾಕು. ಇದ್ದ ಸ್ಥಿತಿಯನ್ನು ವಿಶದಪಡಿಸಿದ್ದೇನೆ. ನನ್ನ ದೊರೆ, ಇನ್ನು ನಿಮ್ಮ ಮನಸ ಬಂದಂತೆ ಮಾಡಬಹುದು.

‘ ನನಗೆ ನಿಮ್ಮ ರಾಣೀಗಂಜವೇನೂ ದೂರದ ಮಾತಲ್ಲ. ನಾನು ಮನಸ್ಸು ಮಾಡಿದರೆ ನಿಮ್ಮ ರಾಣೀಗಂಜಕ್ಕೆ ಬಂದು ನಿಮ್ಮ ರಾಣಿಯಾಗಿ ನಿಲ್ಲಬಹುದು. ಮದುವೆಯಾಗದೇ ನಿಮ್ಮ ಜೊತೆ ಬಂದುಬಿಟ್ಟಳು, ಜನ ಯಾರ ಬೆನ್ನುಗೋ ಓಡಿಹೋದಳು ಎಂದು ಹಾಸ್ಯಮಾಡಬಹುದು. ಮರ್ಯಾದೆ ಬಿಟ್ಟರೆ ಅದೂ ಸಾಧಿಸೀತು. ನೀವೂ ಹಾಗೆ ಮಾಡೆನ್ನುವಿರಾ? ಒಪ್ಪು

ನೀವು ಹಾಗೆ ಹೇಳಿದರೂ ನಾನೊಪ್ಪಲಿಕ್ಕಿಲ್ಲ; ನಾನು ಮರ್ಯಾದೆ ಬಿಡುವಂತಿಲ್ಲ.

'ನನ್ನನ್ನು ನೆರಳಿನಂತಾಶ್ರಯಿಸಿದ ತಂಗಿಯಿದ್ದಾಳೆ. ಗೌರಾ ನನಗೂ ನಿಮಗೂ ಅದೆಷ್ಟು ಸಹಾಯಕಳಾಗಿ ನಿಂತಿದ್ದಾಳೆಂದು ನಾನು ಬೇರೆ ಹೇಳಬೇಕೆ? ಗೌರಾ ನನ್ನ ತಂಗಿಯಾಗಿ ಹುಟ್ಟಿ ಬರದಿದ್ದರೆ, ನೀವು ನಮ್ಮ ಮನೆಗೂ ಬರುತ್ತಿರಲಿಲ್ಲವೇನೋ? ನನ್ನ ನಿಮ್ಮ ಪ್ರೇಮ ಸಂಬಂಧ ಕೂಡುತ್ತಿರಲಿಲ್ಲವಾಗಿತ್ತೇನೋ? ಗೌರಾಳೇ ನಮ್ಮಿಬ್ಬರನ್ನು ಒಂದುಗೂಡಿಸಿದಳೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಹೀಗಿದ್ದ ನನ್ನೊಬ್ಬ ತಂಗಿಯನ್ನೂ ಬಿಟ್ಟು, ನನ್ನ ದೇಹಸುಖಕ್ಕಾಗಿ, ಮನಸ್ಸಿನ ಸ್ವಾಸ್ಥ್ಯಕ್ಕಾಗಿ ಇಂತಹ ಪರಿಸ್ಥಿತಿಯಲ್ಲಿ ನಿಮ್ಮಲ್ಲಿಗೆ ಬರಲಾರೆ. ಅವಳದೂ ಮುಂದಿನ ವರುಷ ಮ್ಯಾಟ್ರಿಕ್ಕು. ಮುಂದೆ ಕಲಿಯುವ ಮನಸ್ಸಿದ್ದರೆ ಕಲಿಯುತ್ತಾಳೆ. ತಂದೆಯವರು ನಮ್ಮ ಪಾಲಿಗೆ ಇಲ್ಲವಾದುದರಿಂದ ಅವಳನ್ನು ಯೋಗ್ಯ ರೀತಿಯಲ್ಲಿ ನಡೆಯಿಸಿ, ಯೋಗ್ಯ ವರನ ಕೈಗೊಪ್ಪಿಸುವದು ನಮ್ಮ ಪಾಲಿನ ಕರ್ತವ್ಯವಾಗಿದೆ.

'ನಿನ್ನೆ ಮನೆಯಲ್ಲಿ ಅತ್ತಿಗೆಗೂ ಗೌರಾಗೂ ಜಗಳವಾಯಿತು. ಈಗ [illegible] ನಮ್ಮ ವಿರುದ್ಧ ನಿಂತು ಕತ್ತಿ ಹಿಡಿದು ಕದನಕ್ಕೆ ಸಿದ್ಧವಾಗುತ್ತಿದ್ದಾರೆ. ಅತ್ತಿಗೆ ತಾನೇ ಯಜಮಾನಿ ಅನ್ನತೊಡಗಿದ್ದಾಳೆ. ಅತ್ತೆ ಅವಳಿಗೆ ಏನೂ ಅಲ್ಲಂತೆ ಕಾಣುವದಿಲ್ಲ. ಎಂತೆಂತಹ ಹೆಣ್ಣುಗಳು ಮನೆಯನ್ನು ಆಳಲು ಈ ಭೂಮಿಯಲ್ಲಿ ಜನ್ಮವೆತ್ತುತ್ತಾರೋ ದೇವರೇ ಬಲ್ಲ. ದಿನವೂ ನಮ್ಮ ಮನೆಯಲ್ಲಿ ಕಿರುಕುಳ ಇದ್ದದ್ದೇ. ಪ್ರಸಂಗ ಕೈಮೀರಿದರೆ ನಮ್ಮ ಹೆಸರಿನಲ್ಲಿ ಬ್ಯಾಂಕಿನಲ್ಲಿ ಹಣವಿದೆಯಲ್ಲ, ಅದನ್ನು ತೆಗೆದು ಬೇರೆ ಮನೆ ಬಾಡಿಗೆಗೆ ಹಿಡಿಯುವೆವು. ಆದರೆ ನಾನಿರುವತನಕ ಹಾಗಾಗಲಿಕ್ಕಿಲ್ಲವೆಂದು ಹೇಳಬಲ್ಲೆ. ಗೌರಾಳ ಸ್ವಭಾವ ಹಾಗಲ್ಲ; ತನ್ನ ವಿರುದ್ಧ ಏನು ಹೇಳಿದರೂ ರೇಗಿಬಿಡುತ್ತಾಳೆ.

'ಎಲ್ಲ ವಿಷಯಗಳನ್ನೂ ನಿಮ್ಮೆದುರಿಗೆ ಇಟ್ಟಿದ್ದೇನೆ. ಪತ್ರವನ್ನು ನಿಧಾನವಾಗಿ ಓದಿ, ಅನುವು ಸಿಕ್ಕಾಗ ಉತ್ತರ ಬರೆಯಿರಿ. ಪತ್ರ ಓದಲು ತೊಂದರೆಯಾಗುತ್ತಿದೆಯೆಂದು ಕಂಡರೆ ತಿಳಿಸಿರಿ, ಮುಂದಿನ ಸಲ ನಾಲ್ಕೇ ಸಾಲುಗಳನ್ನು ಬರೆಯುತ್ತೇನೆ.

‘ ಪ್ರಿಯತಮೆಯ ಪತ್ರ ಎಷ್ಟು ದೀರ್ಘವಾದರೂ ಪ್ರಿಯನ ಮನಸ್ಸಿಗದು ಬೇಸರವಾಗುವದಿಲ್ಲವಂತೆ, ಹೌದೆ ?

ಕೊನೆಯ ಪ್ರಣಾಮಗಳೊಂದಿಗೆ,
ಇತಿ ನಿಮ್ಮವಳೇ
**ಲಚ್ಚಿ.’**

“ ಆ ಪತ್ರವನ್ನೋದಿ ನನಗೆ ಒಳ್ಳೇ ಆಘಾತವಾದಂತಾಯಿತು. ಆದರೆ ಹೋಗಲು ರಜೆ ಸಿಗುತ್ತಿರಲಿಲ್ಲ. ಈ ತಾಕಲಾಟಗಳಲ್ಲಿ ನನ್ನ ಮನಸ್ಸೇ ಸ್ಥಿಮಿತದಲ್ಲಿ ನಿಲ್ಲದೇಹೋಯಿತು. ಅತ್ತ ಲಚ್ಚಿಯ ದೀನಾವಸ್ಥೆಯ ಬಗ್ಗೆ ನನ್ನ ಹೃದಯ ಬೆಂದು ಬೇಗುದಿಗೊಂಡಿತು. ಪರಿಸ್ಥಿತಿಯನ್ನು ವಿವರಿಸಿ ಲಚ್ಚಿಗೆ ಕಾಗದ ಬರೆದೆ.

“ ಮುಂದೆಯೂ ಶನಿ ನನ್ನ ಬೆನ್ನು ಬಿಡಲಿಲ್ಲ. ನಾಲ್ಕೈಕ್ಕೀ ಕೆಲಸವನ್ನು ಮಾಡಿದೆನೆಂದೂ ದಕ್ಷನೆಂದೂ ನನ್ನ ಬಗ್ಗೆ ಶರಾ ಬರೆದುದರಿಂದ, ನನ್ನನ್ನು ಹಸಿದ ಹುಲಿಯ ಬಾಯಿಗೆ ಬಿಟ್ಟಂತಾಯಿತು. ಹಸಿದ ಕಿಚ್ಚಿಗೆ ಹುಲಿ ನನ್ನನ್ನು ನುಂಗಲೂಬಹುದು ; ಇಲ್ಲವಾದರೆ, ನಾನು ಗೆದ್ದರೆ—ಹುಲಿಯನ್ನು ಗೆದ್ದ ವೀರನೆಂದು.ಶೇರಶಹನಿಗೆ ಬಿರುದು ಬಂದಿರಲಿಲ್ಲವೆ ? ಹಾಗೆ ಬಿರುದು-ಬಾವಲಿಗಳೂ ಕೈತುಂಬ ಸಂಬಳವೂ ಬರಬಹುದು. ನಮ್ಮ ಆಲೋಚನೆಗಳೆಲ್ಲ ನುಚ್ಚುನೂರಾಗುತ್ತಿವೆಯೆಂದು ನನಗೆನ್ನಿಸಿತಾಗ.

“ ರಾಣಿಗಂಜದಿಂದ ನನಗೆ ಬರ್ಮಾದ ಗಡಿಗೆ ವರ್ಗವಾಯಿತು. ಇಂಡೋಚಾಯಿನಾ, ಸಯಾಮ, ಸುಮಾತ್ರಾ, ಬರ್ಮಾದ ಕೆಲ ಭಾಗಗಳನ್ನೆಲ್ಲ ಆ ಕಾಲಕ್ಕೆ ಜಪಾನ ಒಳಪಡಿಸಿಕೊಂಡಿತ್ತು. ದ್ವಿತೀಯ ಮಹಾಯುದ್ಧ ಪಶ್ಚಿಮದಲ್ಲಿ ಮುಗಿಯುತ್ತ ಬಂದಾಗ ಜಪಾನವು ಏಶಿಯಾದ ಪೂರ್ವಭಾಗವನ್ನೆಲ್ಲ ಆವರಿಸಿತ್ತು. ಅಲ್ಲಿಗೆ ನನಗೆ ವರ್ಗವಾದಾಗ್ಗೆ ನನಗೆ ಭಯಸೂಚಕ ಚಿಹ್ನೆಗಳೂ ಉಂಟಾಗಿದ್ದವು; ಅದು ಲಚ್ಚಿಗೂ ಗೊತ್ತಿತ್ತು; ಪತ್ರವನ್ನೂ ಬರೆದಿದ್ದೆ. ಅವಳೆಷ್ಟು ನೊಂದಿದ್ದಳೋ ಅವನ್ನು ನಾನು ಹೇಳಲಾರೆ. ಅವಳ ಪತ್ರದ ಸಾರಾಂಶವಿಷ್ಟೇ—‘ ನಿಮ್ಮಾಣೆ ನಾನಳುವದಿಲ್ಲ; ನನ್ನ ಕುಂಕುಮದ ಭಾಗ್ಯ ಗಟ್ಟಿಯಿದ್ದರೆ ನೀವಾಗಿಯೇ ನನ್ನನ್ನು ಬಂದು ಸೇರುವಿರಿ; ಇಲ್ಲಿ ದಿನವೂ ನಾನು ದೇವರ ಹತ್ತಿರ ನೀವು ಸುಖವಾಗಿರಲೆಂದು ಬೇಡಿಕೊಳ್ಳುತ್ತೇನೆ.’

“ ಮುಂದಿನ ದಿನಗಳನ್ನು ನಾನು ಮನುಷ್ಯನಂತೆ ಕಳೆಯಲಿಲ್ಲ ಶ್ರೀನಾಥ,

ಜಪಾನವು ನಮ್ಮ ಭಾಗಕ್ಕೆ ದಾಳಿ ಮಾಡಿದಾಗ್ಗೆ ನಾನು ಅವರ ಕೈಸೆರೆ ಸಿಕ್ಕು ಕೈದಿಯಾಗಿಬಿಟ್ಟೆ. ರಂಗೂನದ ಅದಾವದೋ ಒಂದು ಹಳ್ಳಿಯಲ್ಲಿ ಎರಡು ವರ್ಷ ಕೈದಿಯಾಗಿರುವ ಕಾಲ ಬಂತು. ಹಿಂದುಸ್ತಾನಕ್ಕೂ, ಬ್ರಹ್ಮದೇಶಕ್ಕೂ, ಸ್ನೇಹಸ್ತ ಅಸೇಸಿಸಿನ ಸಂಬಂಧವೇ ಇರಲಿಲ್ಲ. ಇಷ್ಟೇ ಅಲ್ಲ, ಅಕಸ್ಮಾತ್ ಈ ಘಟನೆ ಸಂಭವಿಸಿದ್ದರಿಂದ ಇದನ್ನು ಲಚ್ಚಿಗೆ ತಿಳಿಸುವದೂ ಸಾಧ್ಯವಾಗಲಿಲ್ಲ. ಇಂಡಿಯಾ ಗವರ್ನಮೆಂಟ ನನ್ನನ್ನು ಸತ್ತ ಲಿಸ್ಟಿನಲ್ಲಿ ದಾಖಲೆ ಮಾಡಿತು. ಇದೇ ವಿಷಯ ಸುಮಾರು ಎಂಟು ತಿಂಗಳ ನಂತರ ರಾಮೂಗೂ ಗೊತ್ತಾಯಿತಂತೆ. 'ನಿಮ್ಮ ಸಂಬಂಧಿಕರಾದೋ ಅಸಾಮದ ಗಡಿಯಲ್ಲಿ ಅಕಸ್ಮಾತ್ ಅಪಘಾತಕ್ಕೀಡಾದರು' ಎಂದು. ಇದರಿಂದ ಲಚ್ಚಿ ಇಳಿದುಹೋಗಿಬಿಟ್ಟಿರಬೇಕು; ಇದೇ ವೇಳೆಯಲ್ಲಿಯೇ ಲಚ್ಚಿಯ ಮದುವೆಯಾಗಿರಬೇಕು.

"ಎರಡು ವರ್ಷ ಜೈಲಿನ ವಾಸವನ್ನನುಭವಿಸಿ ಅಲ್ಲಿಂದ ತಪ್ಪಿಸಿಕೊಂಡೆ ಶ್ರೀನಾಥ. ಹೇಗೋ ಹೇಗೋ ಮೂರು ತಿಂಗಳ ಸತತ ಪ್ರಯತ್ನದಿಂದ ಬರ್ಮಾದ ಗಡಿ ದಾಟಿ ಹಿಂದುಸ್ತಾನಕ್ಕೆ ಬಂದೆ. ಸರಕಾರದ ಮೇಲೆ ನನ್ನ ಮನಸ್ಸು ರೋಸಿ ಹೋಗಿತ್ತು ಶ್ರೀನಾಥ. ಅಸ್ಸಾಮದ ಗಡಿಯಿಂದಿಲ್ಲಿಗೆ ಸುಮಾರು ಹದಿನೆಂಟು ನೂರು ಮೈಲು ಕಾಲುನಡಿಗೆಯಿಂದ ಯಾತ್ರಿಕನಂತೆ ಹಾಗೆ ಬರುವದು ಸುಲಭವೆ? ಶ್ರೀನಾಥ, ಏನೋ ನಿಮ್ಮನ್ನೆಲ್ಲ ನೋಡುವ ಋಣವಿದೆಯೆಂದು ದೇವರು ಈ ಕೈಕಾಲುಗಳನ್ನು ಗಟ್ಟಿಯಿಟ್ಟು ಇಲ್ಲಿಯತನಕ ಅಟ್ಟಿರಬೇಕು. ಇನ್ನೇನು ಹೇಳಲಿ ಶ್ರೀನಾಥ? ರವಿಯ ಕಥೆಯಿಲ್ಲಿಗೆ ಮುಗಿಯಿತು. ನೀನು ಅಪಾರ್ಥ ಮಾಡಿಕೊಳ್ಳದಿದ್ದರೆ ನನ್ನ ಆಯುಷ್ಯವೂ ಇಲ್ಲಿಗೆ ಮುಗಿದಂತೆಯೆ."

"ರವಿ, ಅಶುಭ ಮಾತನ್ನಾಡಬೇಡ."

"ನಿನ್ನ ಸಮಾಧಾನಕ್ಕೆಂದು ನೀನು ಹೇಳುವಿ; ಆದರೆ ನನಗದು ಸಮಾಧಾನವಾಗುವಂತಿಲ್ಲ ಶ್ರೀನಾಥ, ಸಮಾಧಾನವಾಗುವಂತಿಲ್ಲ."

"ರವಿ, ಗಂಟಲು ನೋಯುತಿರಬೇಕು; ಮತ್ತೆ ಮಾತಾಡಬೇಡ."

"ಕಾಫಿ ಇದ್ದರೆ ಸ್ವಲ್ಪ ಕೊಡುವೆಯಾ?"

ಕಾಫಿ ತಂದುಕೊಟ್ಟೆ; ಮೂಸಿ ನೋಡಿದ.

"ಶ್ರೀನಾಥ, ಇದೇನು ಹೊಲಸು ವಾಸನೆ?"

"ಮಂಕೇ, ತಾಜಾ ಕಾಫಿಗೆ ವಾಸನೆ ಬರುತ್ತಿದೆಯೆ?"

"ಇದು ನನಗೆ ಖಂಡಿತ ಬೇಡವಯ್ಯಾ."

ಬಿಸಿನೀರು ತಂದು ಕೊಟ್ಟೆ; ಅದನ್ನು ಮೂಸಿ ಬೇಡವೆಂದು ಹೇಳಿದನು.

"ರವಿ, ಹೀಗೇಕೆ ಮಾಡುತ್ತೀಯಾ? ಮತ್ತೇನನ್ನು ಕೊಡಲಿ?"

"ಬಾವಿಯಿಂದ ತಾಜಾ ನೀರನ್ನು ಎತ್ತಿ ತಂದು ಕೊಡುತ್ತೀಯಾ?"

"ಮಹರಾಯಾ, ತಣ್ಣೀರು ಖಂಡಿತ ಬೇಡ; ಮತ್ತೇನಾದರೂ ಹೆಚ್ಚು ಕಡಿಮೆಯಾದೀತು; ಆಣೆಯಿಟ್ಟು ಹೇಳುತ್ತೇನೆ, ಡಾಕ್ಟರರು ಖಂಡಿತ ತಣ್ಣೀರು ಕೊಡಬೇಡವೆಂದು ಹೇಳಿದ್ದಾರೆ."

"ಅಯ್ಯೋ ಶ್ರೀನಾಥ, ಡಾಕ್ಟರಿಗೆ ನನ್ನನ್ನು ಬದುಕಿಸುವ ಆಶೆ ಹೆಚ್ಚೋ ಇಲ್ಲವೆ ನನಗೆ ನಾನು ಬದುಕಿಕೊಳ್ಳುವ ಆಶೆ ಹೆಚ್ಚೋ?"

ನಾನು ಮರುಮಾತನಾಡದೇ ತಣ್ಣೀರು ತಂದುಕೊಟ್ಟೆ. ತಣ್ಣೀರು ಕುಡಿದ ನಂತರ ಸಿಗರೇಟು ಪಾಕೇಟು ನೋಡಿದ. ಒಂದೆರಡಷ್ಟೇ ಉಳಿದಿತ್ತು. ನನ್ನನ್ನು ಕರೆದು ಗಂಟೆಯೆಷ್ಟು ಎಂದು ಕೇಳಿದ.

"ಹನ್ನೊಂದು" ನಾನುತ್ತರಿಸಿದೆ.

"ಹಾಗಾದರೆ ಸಿನೇಮಾ ಟಾಕೀಜಿನ ಹತ್ತಿರ ಹೋಗಿ ಐದು ಪಾಕೇಟು ಸಿಗರೇಟು ತಕ್ಕೊಂಡು ಬಾ" ಎಂದ.

"ರಾತ್ರಿಯಾಯಿತಲ್ಲ ರವಿ."

"ಅದೇನು ಹೆಚ್ಚಲ್ಲವಲ್ಲ."

"ಮುಂಜಾನೆ ತಂದರಾಯಿತು."

"ಮುಂಜಾನೆಯಂತೆ; ಅಲ್ಲಿಯತನಕ ಏನು ಶಂಖ ಊದಬೇಕೆ? ಇವತ್ತು ಬದುಕಿ ಉಳಿದರೆ ತಾನೇ ನಾಳಿನ ಆಶೆ. ಹೋಗು, ದಯಮಾಡಿ ಈಗಲೇ ತಕ್ಕೊಂಡು ಬಾ. ಹೆದರಿಕೆಯಾಗುವಂತಿದ್ದರೆ, ನನ್ನ ಕೈ ಹಿಡಿದುಕೊಂಡು ಹೋಗು. ಬೇಕಿದ್ದರೆ ನಾನೂ ಬರುತ್ತೇನೆ."

ಮರುಮಾತನಾಡದೇ ಸಿಗರೇಟು ತಂದುಕೊಟ್ಟೆ. ನಾನು ಬರುವಾಗ್ಗೆ ಎರಡು ಸಿಗರೇಟುಗಳು ಮುಗಿದು ನಾನು ತರುವ ಸಿಗರೇಟಿಗಾಗಿ ಕಾಯುತ್ತಲಿದ್ದನು.

ಅವನು ಮಲಗಿದ್ದೇ ತಡ, ಬೆಳಗಿನಿಂದಲೂ ಬಾರದ ಭೀಕರ ಜ್ವರ ಬಂತು. ರಾತ್ರಿಯಿಡೀ ರವಿಗೆ ಮೈಮೇಲಿನ ಸ್ಮೃತಿಯಿರಲಿಲ್ಲ.

## ೧೦

ಮರುದಿನ ಡಾಕ್ಟರರನ್ನು ಕರೆದು ತಂದಾಗ, ಅವರು ನಿರಾಶೆ ವ್ಯಕ್ತಪಡಿಸಿದರು; ನಾನು ಕಣ್ಣೀರಿಡುತ್ತ ಕೇಳಿದೆ :

" ಡಾಕ್ಟರರೆ, ಇವರ ಆಶೆಯಿಡಬಹುದೆ ? "

" ಇವರಿಗೆ ಜ್ವರ ಬರಲು ಪ್ರಾರಂಭವಾಗಿ ನಾಲ್ಕು ದಿನವಾಯಿತೆ ? "

" ಅಲ್ಲ, ಇಂದಿಗೆ ಐದನೇ ದಿನವಿರಬೇಕು. "

" ಇವರ ಸಂಬಂಧಿಕರು ಯಾರಾದರೂ ಇದ್ದಾರೆಯೆ ? "

" ಇದ್ದಾರೆ, ಅವರು ರತ್ನಾಗಿರಿಯಲ್ಲಿದ್ದಾರೆ. "

" ಇನ್ನೂ ನಾಲ್ಕು ದಿನ ನೋಡೋಣ. ವಿಷಮಜ್ವರವಾಗಿದ್ದರೆ ಒಂಬತ್ತನೇ ದಿನಕ್ಕೆ ಬಿಡಬಹುದು. ಆ ದಿನವೂ ಬಿಡದಿದ್ದರೆ ಅವರಿಗೆ ಟೆಲಿಗ್ರಾಂ ಕೊಟ್ಟರಾಯಿತು. ಈಗ ಕೊಟ್ಟು ಸುಮ್ಮನೆ ಗಾಬರಿಗೊಳಿಸುವದು ಬೇಡ. "

" ಅಂದರೆ, ಇನ್ನೂ ನಾಲ್ಕು ದಿನ ಕಳೆಯಬೇಕಲ್ಲವೆ ? "

" ಹೌದು. "

ಅವರು ಮತ್ತೆ ಮಾತನಾಡದೆ ಹೊರಟುಹೋದರು.

ಮೊದಲನೇ ದಿನ ಕಳೆಯಿತು; ಜ್ವರ ಇನ್ನೂ ಹೆಚ್ಚಾಯಿತು. ಎರಡು ದಿನ ಕಳೆಯಿತು; ಮೊದಲಿಗಿಂತಲೂ ಹೆಚ್ಚಾಯಿತು. ರವಿ ಬಡಬಡಿಸತೊಡಗಿದ. ಡಾಕ್ಟರರನ್ನು ಕೇಳಿದರೆ, ಧೈರ್ಯವಾಗಿರಿ ಎಂದಿಷ್ಟೇ ಹೇಳಿದರು.

ಮೂರನೆಯ ದಿನ ಕಳೆಯಿತು; ಜ್ವರ ವಿಪರೀತ ಹೆಚ್ಚಾಯಿತು. ರವಿ ತನ್ನ ಪರಿಚಯಸ್ಥರನ್ನೆಲ್ಲ ಹೆಸರು ಹಿಡಿದುಕರೆಯ ತೊಡಗಿದ. ಆಗಾಗ ಲಚ್ಚಿ-ಗೌರಾರು ಅವನ ಬಾಯಿಂದ ಮಂತ್ರೋಚ್ಚಾರದಂತೆ ಬರತೊಡಗಿದರು.' ಏರಿದ ಜ್ವರ ಇಳಿಯಲಿಲ್ಲ.

ನಾಲ್ಕನೆಯ ದಿನ ನಮ್ಮೆಲ್ಲರಿಗೂ ನಿರಾಶೆಯುಂಟಾಯಿತು. ಡಾಕ್ಟರರ ಒಪ್ಪಿಗೆಯಂತೆ, ಲಚ್ಚಿ-ಗೌರಾರಿಗೆ ಹೊರಟು ಬರುವಂತೆ ಟೆಲಿಗ್ರಾಂ ಕಳಿಸಿದೆ.

ಮರುದಿನ ಲಚ್ಚಿ-ಗೌರಾ ಬಂದಿಳಿದರು. ರವಿಗೆ ಜ್ವರ ಬಿಟ್ಟಿತ್ತು; ಸಂಪೂರ್ಣವಾಗಿ ಬಿಟ್ಟುಹೋಗಿತ್ತು. ಹಾಗಾದುದು ನಮಗೆ ಆಶೆ ತೋರಿಸಿ ನಮ್ಮಿಂದ ಕಸಿದುಕೊಳ್ಳುವದಕ್ಕೆಂದೇ ಇರಬೇಕು. ಅವನಿಗೆ ಲಚ್ಚಿ-ಗೌರಾರ ಗುರುತು ಸಿಕ್ಕಿತು. ಮಾತೂ ಆಡತೊಡಗಿದನು; ಲಚ್ಚಿಗೆ ಹೊಸ ಜೀವ ಬಂದಂತಾಯಿತು.

ಬೆಳಗಾದುದೇ ತಡ, ರವಿಯೆಂದನು :

" ನನಗೆ ಸ್ನಾನ ಮಾಡಬೇಕು, "

" ಶ್ರೀನಾಥ, ಸ್ನಾನಕ್ಕೆ ಏರ್ಪಾಡು ಆಗಲೇ ಬೇಕು. ನನಗೆ ಗುಡಿಯಿಂದ ಕರೆ ಬಂದಿದೆ; ನಾನು ಹೋಗಲೇ ಬೇಕು. "

ಲಚ್ಚಿಯನ್ನು ನೋಡಿ ಸಮೀಪ ಬರಹೇಳಿದನು; ಕಳಿತುಕೊಳ್ಳುವಂತೆ ಸೂಚಿಸಿದನು; ಅವಳ ಕೈಯನ್ನು ನೇವರಿಸುತ್ತ,

" ಲಚ್ಚೀ, ನಿನ್ನ ಆಶೆಗೂ ನೀರು ಕೊಟ್ಟೆ. "

" ಹಾಗೆನ್ನಬೇಡಿ, ನನ್ನ ದೊರೆ. "

" ನೀನೂ ನನ್ನಂತೆಯೇ ಆಗಿರುವೆಯಲ್ಲ. "

ಲಚ್ಚಿಯ ಕಣ್ಣುಗಳಲ್ಲಿ ನೀರು ಬಂತು.

" ಲಚ್ಚಿ, ನಾವಿಬ್ಬರೂ ಗುಡಿಗೆ ಹೋಗೋಣವೆ ? "

ಅದರರ್ಥ ನನಗಾಗಲೀ, ಲಚ್ಚಿಗಾಗಲೀ ಆಗಲಿಲ್ಲ.

" ಲಚ್ಚಿ, ನನಗೆ ಹಸಿವಾಗುತ್ತಿದೆ. ಗುಡಿಗೆ ಹೋಗುವಾಗ ಊಟ ಮಾಡಿ ಕೊಂಡು ಹೋಗಬೇಡವೆ? ದೇವರಿಗೆ ನೈವೇದ್ಯಕ್ಕೆಂತ ಎರಡು ರೊಟ್ಟಿ ಮಾಡು; ಹೀಗಲ್ಲ, ನೀನೂ ಸ್ನಾನ ಮಾಡಿಕೊಂಡು ಮಾಡಬೇಕು, ಮಡಿಯಿಂದ ಮತ್ತೆ. "

ಲಚ್ಚಿ ಅವನೆಂದಂತೆಯೇ ಮಾಡಿದಳು.

" ನಾನು ರವಿಯನ್ನೆತ್ತಿಕೊಂಡು ಹೋಗಿ ಸ್ನಾನ ಮಾಡಿಸಿದೆ. ಬರೀ ಎಲುಬಿನ ಹಂದರವಾಗಿತ್ತು; ನೋಡುವವರಿಗೆ ಅಂಜಿಕೆ ಬರುತ್ತಿತ್ತು. ಒಂಬತ್ತು ದಿನಗಳ ಜ್ವರ ಅವನ ಮಾಂಸವನ್ನೆಲ್ಲ ಹೀರಿತ್ತು.

ಊಟಕ್ಕೆ ಅಡಿಗೆ ಕೋಣೆಗೇ ಹೋಗಬೇಕೆಂದನು; ಅಲ್ಲಿಗೇ ಕರೆದು ಕೊಂಡು ಹೋದೆವು. ಮಣೆಯ ಮೇಲೆ ಕುಳಿತುಂಡ; ತಾಟಿಟ್ಟು ಗಂಜಿ ಬಡಿಸಿ ದೆವು. ಒಂದಿಷ್ಟು ಅಗುಳನ್ನು ಬಾಯಲ್ಲಿ ತುಂಬಿ, ಥೂ, ಮುಸುರೆಯೆನ್ನುತ್ತ ಕೋಣೆತುಂಬ ಉಗಿದುಬಿಟ್ಟನು.

ನಾನೆಂದೆ, " ರವಿ, ಮನೆತುಂಬ ಉಗುಳಿದರೆ ಮುಸುರೆಯಾಗುವದಿಲ್ಲವೆ ? "

" ಮುಸುರೆಯನ್ನು ಬಾಯಲ್ಲಿ ತುರುಕುವದೆ ? "

ನಂತರ ಗಂಜಿಯನ್ನು ಊಟ ಮಾಡಲೇ ಇಲ್ಲ.

" ರೊಟ್ಟಿಯಾಗಿದೆಯೆ ? "

ಎರಡು ರೊಟ್ಟಿ ಅವನಿಗಾಗಿ ಮಾಡಿ ಇಡಲ್ಪಟ್ಟಿತ್ತು, ಕೊಟ್ಟೆವು. ಹಲ್ಲಿನಿಂದ ಕಚ್ಚಿ ತುಂಡುತುಂಡು ಮಾಡಿ, ಅಡಿಗೆ ಕೋಣೆ ತುಂಬ ಒಗೆದುಬಿಟ್ಟನು.

“ ಅದೇಕೆ ಹಾಗೆ ಮಾಡಿದೆ ರವಿ. ” ನಾನೆಂದೆ.

“ ಗೆಳೆಯರಿಲ್ಲಿ ನಿಂತಿದ್ದರು ; ಅವರಿಗೆ ಕೊಟ್ಟುಬಿಟ್ಟೆ. ”

ಲಕ್ಷ್ಮಿಯನ್ನು ನೋಡಿ, “ ಒಂದು ಹಸೆ ತಕೊಂಡು ಬಾ, ನಾನು ಇಲ್ಲಿಯೇ ಮಲಗಿಕೊಳ್ಳುತ್ತೇನೆ. ” ಎಂದನು.

ಲಕ್ಷ್ಮಿ ಹಾಸಿಗೆ ತಂದುಕೊಟ್ಟಳು ; ಅವಳಿಗೂ ಮಲಗಿಕೊಳ್ಳುವಂತೆ ಹೇಳಿದ. ಆಗ ಲಕ್ಷ್ಮಿಯೂ ಯಂತ್ರದಂತೆ ಕೆಲಸ ನಡೆಸಿದ್ದಳು ; ಲಕ್ಷ್ಮಿಯೂ ಮಲಗಿದಳು. ರವಿ ತನ್ನನ್ನು ಮಲಗಿಸಿಕೊಳ್ಳುವಂತೆ ಹೇಳಿದ. ಅವನನ್ನು ಹಾಸಿಗೆಯ ಮೇಲೆ ಮಲಗಿಸಿಕೊಳ್ಳಬೇಕೆನ್ನುವಾಗ, ಅವನ ತುಟಿಗಳು ಲಕ್ಷ್ಮಿಯ ಕೆನ್ನೆಯ ಮೇಲೆ ಇತ್ತು. ಲಕ್ಷ್ಮಿ, ‘ ಹಾಯ್ ’ ಎಂದಳು. ಅವನು ಮುತ್ತು ಕೊಡುತ್ತಾನೆಂದು ನನ್ನ ಭಾವನೆ. ರಕ್ತ ಸುರಿಯುವುದು ಕಂಡಾಗ ಲಕ್ಷ್ಮಿ ಅವನ ಮೋರೆಯನ್ನು ತನ್ನ ಎದೆಯಲ್ಲಿ ಅದಗಿಸಿ ಗಟ್ಟಿಯಾಗಿ ತಬ್ಬಿಕೊಂಡಿದ್ದಳು.

ರವಿ ಕೆನ್ನೆಗೆ ಮುತ್ತು ಕೊಟ್ಟಾಗ, ಅವಳ ಕೆನ್ನೆಯನ್ನು ಲಕ್ಷ್ಮಿ ರಕ್ತ ಸುರಿಸಿದ್ದ. ಹೆಚ್ಚು ವೇಳೆ ತಡೆಯಲಿಲ್ಲ. ಕೆಮ್ಮು ಬಂದು, ಜೋರಾಗಿ ಕೊನೆಯ ಉಸಿರೆಳೆದೊಡನೆ ರವಿ ಕಣ್ಣು ಮುಚ್ಚಿದ್ದ. ಲಕ್ಷ್ಮಿಯನ್ನು ತಬ್ಬಿಕೊಂಡಿದ್ದ ಅವನ ಕೈಗಳು ಸಡಿಲಿದವು.

ಲಕ್ಷ್ಮಿ ಎಂಥವಳೋ ಏನೋ, ಸುಡುಗಾಡಿಗೆ ರವಿಯನ್ನು ಒಯ್ಯುವಾಗಲೂ ಅಳಲಿಲ್ಲ. ಅದೇ ಹಾಸಿಗೆಯ ಮೇಲೆ ಮಲಗಿದ್ದಳು. ಬೆಳಿಗ್ಗೆ ಎದ್ದು ನೋಡುವಾಗ ಲಕ್ಷ್ಮಿಯಿರಲಿಲ್ಲ. ಅವಳ ಜಡವೇತು ಮಾತ್ರ ಇತ್ತು. ಅವಳ ಕೈಯುಂಗುರದ ವಜ್ರದ ಹರಳಿರಲಿಲ್ಲ.

ಗೌರಾ ನಿಟ್ಟುಸಿರು ಬಿಟ್ಟು ರಜೆ ಮುಗಿದೊಡನೆ, ಎಮ್. ಬಿ. ಬಿ. ಎಸ್. ಮುಗಿಸಲು ಪುಣಾಕ್ಕೆ ಹೋಗುವೆನೆಂದಳು. ಅವಳ ದೃಢಸಂಕಲ್ಪದ ಮಾತು ಕೇಳಿ ನನ್ನ ಕಣ್ಣುಗಳಲ್ಲಿ ನೀರು ಬಂತು. ಅವಳಿಷ್ಟೇ ಹೇಳಿದಳು : “ ಅತ್ತು ನಾನು ಮಾಡುವುದೇನು, ಶ್ರೀನಾಥಣ್ಣ ! ನನಗೆ ಎಲ್ಲರಿಷ್ಟು ಅವರ ದುರಂತ ಮರಣವನ್ನು ನೋಡುವ ಭಾಗ್ಯವಿತ್ತು. ಅದು ತಪ್ಪುವುದೆ? ಅದಕ್ಕೂ ಪುಣ್ಯಮಾಡಿ ಬರಬೇಕು. ”